॥ ಶ್ರೀ ಧನ್ವಂತರಯೇ ನಮಃ ॥



# ವೈದ್ಯಸನ್ಮಿತ್ರ

## Vaidya - Sanmitra

( ವೈದ್ಯಕ ಸಮನ್ವಯ )

ಭಾಗ ೧.



ಗ್ರಂಥಕರ್ತರು

ವೈದ್ಯ:- ಪಾಂ. ವಿ. ಜಾಯದೆ

ಆಯುರ್ವೇದತೀರ್ಥ ಹುಬ್ಬಳ್ಳಿ.

॥ न हि ज्ञानेन सदृशं पवित्रमिह विद्यते ॥

[भ. गीता.]



ಸನ್ ೧೯೫೦ ]   [ ಬೆಲೆ ೨—೦—೦

ಪ್ರಕಾಶಕರು
**ದ. ಶಿ. ಬಂಕಾಪೂರ.**
ಶ್ರೀ ಶಿವಾನಂದ ಮಂದಿರ, ಹುಬ್ಬಳ್ಳಿ.



**ಪ್ರಥಮ ಮುದ್ರಣ.**

ಪುಸ್ತಕಗಳು ದೊರೆಯುವ ವಿಳಾಸ
(೧) **ವೈದ್ಯ ಪಾಂ. ವಿ. ಜಾಯದೆ** (ಆ. ತೀ.)
ನಾರಾಯಣ ಚಾಕ, ಹುಬ್ಬಳ್ಳಿ.
(೨) **ಸಾಹಿತ್ಯ ಭಾಂಡಾರ,** ಹುಬ್ಬಳ್ಳಿ.

ಮುದ್ರಕರು
ಆದರ್ಶ ಮುದ್ರಣ, ಹುಬ್ಬಳ್ಳಿ.

# ಅರ್ಪಣಪತ್ರಿಕೆ



ಅಧ್ಯಯನ, ಅಧ್ಯಾಪನ, ಸಂಶೋಧನ, ಪ್ರತ್ಯಕ್ಷ ಪ್ರಯೋಗ, ಔಷಧನಿರ್ಮಾಣ, ವಾಙ್ಮಯನಿರ್ಮಾಣ ಮೊದಲಾದ ಹಲವಾರು ಹಾದಿಗಳಿಂದ ಹಗಲಿರುಳು ತನು-ಮನ-ಧನಗಳನ್ನೆರೆದು ಆಯುರ್ವೇದದ ಉನ್ನತಿಗಾಗಿ ಯತ್ನಿಸುತ್ತಿರುವ ಮತ್ತು ಆಗಾಗ್ಗೆ ಆಯುರ್ವೇದದ ವಿಷಯವಾಗಿ ಅನೇಕಾನೇಕ ಆಂದೋಲನಗಳನ್ನೆಬ್ಬಿಸಿ ಕನ್ನಡ ನಾಡಿನಲ್ಲಿ ಆಯುರ್ವೇದದ ನಂದಾದೀವಿಗೆಯನ್ನು ಮುಡಿಸಿ ಆಯುರ್ವೇದದ ಮಟ್ಟವನ್ನು ಮೇಲಕ್ಕೆತ್ತಿದ ವೈದ್ಯಗಾರು

**ಡಾ. ಅ. ಹಲಸೀಕರರಿಗೆ**

ಸಾದರ ಸಪ್ರೇಮ ಸಮರ್ಪಣೆ.

ಗ್ರಂಥಕರ್ತರು.




ವೈದ್ಯಗುರು ಡಾ. ಅ. ಹಲಸೀಕರ.

# ಬಿನ್ನಹ

ವೈದ್ಯ ಸನ್ಮಿತ್ರದ ಕನ್ನಡ ಅನುವಾದ ನಮ್ಮ ಸಾಧನ ಗ್ರಂಥಾವಲಿಯಲ್ಲಿ ಪ್ರಕಟವಾಗುವದರಿಂದು ಸಂಕಲ್ಪ ಸಿದ್ಧಿಯಾಗಿದೆ. ವೈದ್ಯಕ, ಸಂಗೀತಗಳಂಥ ವ್ಯವಹಾರಶಾಸ್ತ್ರದ ಪುಸ್ತಕಗಳನ್ನು ವೇದಾಂತ ಗ್ರಂಥಗಳಜೊತೆಯಲ್ಲಿ ಪ್ರಕಾಶನಗೊಳಿಸುವದೊಂದು ನಮ್ಮ ಅವಧೂತ ಗ್ರಂಥಾಲಯುದ ಸಂಕಲ್ಪ. ಅದೀಗ ಆಕಸ್ಮಿಕವಾಗಿ, ಅನಾಯಾಸವಾಗಿ ಶ್ರೀಯುತ **ಪಾಂ. ವಿ. ಜಾಯದೆ** ವೈದ್ಯರ ಔದಾರ್ಯದಿಂದಾಗಿ ಕೈಗೂಡಿದ್ದಕ್ಕೆ ಸಮಾಧಾನವಾಗಿದೆ. ಜೀವನ ಉನ್ನತಿಗೆ ವೇದಾಂತ ಜ್ಞಾನ, ದೇಹದ ಸುಸ್ಥಿತಿಗೆ ವೈದ್ಯಕ ಜ್ಞಾನದ ಅಗತ್ಯ, ಶರೀರ, ಶಾರೀರಗಳ ಚಿಕಿತ್ಸೆ ಎಲ್ಲರಿಗೂ ಗೊತ್ತಿರಬೇಕು.

ವೇದಾಂತ ವ್ಯವಹಾರಗಳು ಭಿನ್ನವಾಗಿಲ್ಲ. ವೇದಾಂತ ಜೀವ, ವ್ಯವಹಾರ ದೇಹವಾಗಿದೆ. ಇವೆರಡೂ ಕೂಡಿದಾಗಲೇ ವಸ್ತು ಸಿದ್ಧಿ, ವೇದಾಂತಿ ಮತ್ತು ವ್ಯವಹಾರಿಗಳ ಜಾತಿಯೇ ಬೇರೆಯೆಂಬ ತಪ್ಪು ತಿಳುವಳಿಕೆಯಿಂದಾಗಿ ಜಗತ್ತು ಕೆಳಕ್ಕಿಳಿಯಹತ್ತಿದೆ "ನಿನ್ನ ಧರ್ಮವನ್ನು ಮನಿಯಲ್ಲಿ ಮಾಡಿಕೋ, ಕಚೇರಿಯಲ್ಲಿ ಏನೂ ಸಂಬಂಧವಿಲ್ಲಾ" ಎಂಬ ಮಾತು ಎಂಥ ತಿಳಿದವರ ಬಾಯಿಂದಲೂ ಬರುವದನ್ನು ನೋಡಿದರೆ ಅಚ್ಚರಿಯಾಗುತ್ತದೆ. ಕೋರ್ಟಿನಲ್ಲಿ ಸಾಕ್ಷಿ ಹೇಳುವ, ಮನಿಯಲ್ಲಿ ದೇವರ ಪೂಜೆ ಮಾಡುವ, ಜೀವ ದೇಹಗಳೇನೂ ಬೇರೆ ಬೇರೆಯೇ? ವ್ಯವಹಾರ ಪವಿತ್ರ ಮತ್ತು ಸರ್ವರಿಗೂ ಕಲ್ಯಾಣಕಾರಿಯಾಗಬೇಕಾದರೆ ಅದಕ್ಕೆ ತತ್ವಜ್ಞಾನ-ಧರ್ಮಗಳ ನೆರವೇ ಬೇಕು. ಧರ್ಮ ಜಾತಿಗಳನ್ನು ಕೂಡಿಸಿ ನೋಡುವ ಕಂಣಿಗೆ ಅಧ್ಯಾತ್ಮಕದ ಬೆಳಕು ಕಾಣುವದೆಲ್ಲಿಂದ!

ಆಯುರ್ವೇದ, ಆ್ಯಲೋಪಥಿ ಮತ್ತು ಬಾಯೋಕೆಮಿಕ್‌ಗಳ ಕಿಚಡೀ ಮಾಡಿ ಗೊಂದಲವೆಬ್ಬಿಸಿದೆ ಈ ಪುಸ್ತಕದಲ್ಲಿ ಎಂದು ಯಾರೂ ಭಾವಿಸಿಕೊಳ್ಳಬೇಕಿಲ್ಲ. ಈ ಮೂರೂ ಶಾಸ್ತ್ರಗಳ ವೈಶಿಷ್ಟ್ಯವನ್ನು ಸ್ವತಂತ್ರವಾಗಿಯೇ ಇಟ್ಟು, ರೋಗಿಯ ಅವಸ್ಥೆಗಳಿಗನುಸರಿಸಿ ಉಪಕಾರಕವಾಗುವಂಥ ಪದ್ಧತಿಯನ್ನೇ ಬಳಿಸಲು ಬರಬೇಕೆಂಬ ಉದ್ದೇಶದಿಂದ ಮೂರನ್ನೂ ವಿಚಾರಿಸಿದ್ದಾಗಿದೆ. ಈ ಮೂರೂ ಪದ್ಧತಿಗಳನ್ನು ಕೂಡಿಸಲು ಪ್ರಯತ್ನಿಸುವದು ಹುಚ್ಚು

ತನ. ಆದರೆ ಮೂರೂ ಪದ್ಧತಿಗಳ ಚಿಕಿತ್ಸೆ ಮಾತ್ರ ರೋಗಿಗೆ ಆಯಾ ಅವಸ್ಥೆಯಲ್ಲಿ ಅವಶ್ಯವಾಗುತ್ತದೆ. ಈ ರೀತಿಯ ಚಿಕಿತ್ಸೆಯಿಂದ ರೋಗಿಗೆ ಅಲ್ಪಕಾಲದಲ್ಲಿಯೇ ಗುಣವಾಗಿ ವೈ, ಮನಸು, ಖರ್ಚುಗಳ ತ್ರಾಸ ಹೆಚ್ಚಾಗುವದಿಲ್ಲ. ಬೇನೆಯಲ್ಲಿ ಕೊಳೆಯುವ ಹೀನಾಯ ತಪ್ಪಿ ಹೆಚ್ಚುಕಾಲ ಆರೋಗ್ಯವಾಗಿ ಬಾಳಬಹುದಾಗಿದೆ.

ತಾಯಿ ತಂದೆಗಳ ತಲೆಮಾರಿನಿಂದಲೂ ನಮಗೆ ವೈದ್ಯರ-ಡಾಕ್ಟರರ ಋಣಾನುಬಂಧ ಬಹಳ. ಇವರ ನೆರವೇ ನಮ್ಮನ್ನು ಬದುಕಿಸಿ ಜನ ಸೇವೆಯನ್ನು ಮಾಡಿಸುತ್ತದೆ. ಹಿಂದಕ್ಕೆ ಜೇಲಿನಲ್ಲಿದ್ದಾಗ, ಊರಲ್ಲಿದ್ದಾಗ-ಇಲ್ಲದಾಗ ನಾನು ನನ್ನ ಪರಿವಾರ, ಶಿಷ್ಯ ವರ್ಗಗಳ ಆರೋಗ್ಯವನ್ನು ಕಾಯಲು ನಿಷ್ಕಾಮವಾಗಿ ನೆರವಾಗುತ್ತಿದ್ದಾರೆ. “ನವೈದ್ಯಃ ಪ್ರಭುರಾಯುಷಃ” ವೈದ್ಯನು ಆಯುಷ್ಯ ಕೊಡಲಾರನಾದರೂ ಬದುಕಿದಷ್ಟು ದಿನ ಸುಖವಾಗಿ ಬಾಳುವಂತೆ ಮಾಡುವ ಸಾಮರ್ಥ್ಯ ಸದ್ವೈದ್ಯನಲ್ಲಿದೆ ಎಂದು ಅನುಭವದಿಂದ ಹೇಳಬಲ್ಲೆ. ವೈದ್ಯರ ಉಪಕಾರ, ಅದೇಕೆ ಯಾವದೇ ಉಪಕಾರವನ್ನು ಅದೇತರಿಂದ ತೀರಿಸಲಾದೀತು? ಉಪಕಾರಕ್ಕೆ ಕೃತಜ್ಞತೆಯೇ ಪ್ರತ್ಯುಪಕಾರ. ಅವರಲ್ಲಿ ವಿನಯ, ಸಹಕಾರ, ಸೇವೆಗಳೇ ಸಲ್ಲತಕ್ಕವು. ಸರ್ವಾತ್ಮನಾದ ಧನ್ವಂತರಿಯು ಸಕಲರ ಬುದ್ಧಿಯಲ್ಲಿಯೂ ಆಯುರ್ವೇದದ ತಿಳುವಳಿಕೆಯ ಬೆಳಕನ್ನು ಬೀರಲಿ.

ಈ ಪುಸ್ತಕದ ಅನುವಾದವನ್ನು ಮುದ್ರಣಕ್ಕೆ ತಕ್ಕಂತೆ ಮುದ್ದಾಗಿ ಬರೆದು ಕೊಟ್ಟ ಮಿ. **ಹ. ಗ. ತೇರಗಾವಕರ** ಇವರಿಗೂ ಸುಂದರವಾಗಿ ಮುದ್ರಿಸಿಕೊಟ್ಟ ನಮ್ಮ **ಆದರ್ಶ ಮುದ್ರಣಾಲಯದ ಆಡಳಿತಗಾರರಿಗೂ** ತುಂಬಾ ಕೃತಜ್ಞತೆಗಳನ್ನು ಸಲ್ಲಿಸಬೇಕು.

**ಓಂ ಕೇವಲ !**

ಶ್ರೀ ಶಿವಾನಂದ ಮಂದಿರ
ಹುಬ್ಬಳ್ಳಿ

ಪ್ರಕಾಶಕ:
ಯೋಗೀಶ್ವರ, ಶ್ರೀ. **ದತ್ತಮೂರ್ತಿ ದೀಕ್ಷಿತ**

ತಾ. ೧೨-೧೦-೧೯೫೦



# ಸೇವೆಯಲ್ಲಿ

ಸರ್ವಜ್ಞರಾದ ಮಹರ್ಷಿಗಳ ಪರಂಪರೆಯಿಂದ ಆಯುರ್ವೇದದ ಅಧ್ಯಯನ, ಅಧ್ಯಾಪನ ನಡೆಯುವಕಾಲವೊಂದಿತ್ತು. ವೇದಗಳ ಜೊತೆಯಲ್ಲಿ ವೇದಾಂಗಗಳನ್ನೂ ಕಲಿಯಲೇ ಬೇಕಾಗಿತ್ತು. ವೇದಾಧ್ಯಯನ ಪಠಕ್ಕೆ ಅಗತ್ಯವಾದರೆ ಅದನ್ನು ಸುಖವಾಗಿ ನಡಿಸಿಕೊಂಡು ಬರಲು ಸುಗಮ ಸಾಧನವಾಗಿ ಕೆಲ ವೇದಾಂಗಗಳು ಇಹಕ್ಕೆ ಅವಶ್ಯವಾಗಿ ಬೇಕಾದವು. ಎಂದೇ ಜ್ಯೋತಿಷ್ಯ ವೈದ್ಯಕಗಳನ್ನು ಸಂಶೋಧಿಸಿ ಮನಃಪೂತವಾಗಿ ನಡೆಸಿಕೊಂಡು ಪ್ರಾಮಾಣಿಕರಾಗಿ ಪ್ರಪಂಚ ಪರಮಾರ್ಥಗಳೆರಡನ್ನೂ ಸಾಧಿಸಿಕೊಂಡವರು ನಮ್ಮ ಪೂರ್ವಜರು.

ಈ ವಿದ್ಯೆಗಳಿಗಾಗಿ ಪಟ್ಟಿರುವ ಕಷ್ಟ, ಸಾಹಸ, ಅವುಗಳ ಫಲದ ಇತಿಹಾಸ ಈಗಿನವರಿಗೆ ಅಸಂಭವವೆನಿಸುವಷ್ಟು ಅದ್ಭುತವಾದುದಾದರೂ ಸತ್ಯವಾಗಿದೆ. ಶುಕ್ರಾಚಾರ್ಯರ ಸಂಜೀವನೀ ವಿದ್ಯೆ ನೋಡಿ ಎಂಥಾ ಮಹಾಯೋಗ, ಏನು ಅದ್ಭುತ ಮಂತ್ರಶಕ್ತಿ ! (ಬೃಹದಾರಣ್ಯಕ ಅ. ೨, ಖ, ೫, ಮಂ. ೧೬) ಬ್ರಹ್ಮವಿದ್ಯೆಯ ಸ್ತುತಿಯನ್ನು ಹೇಳುವ ಸಂದರ್ಭದಲ್ಲಿ ಒಂದು ಕಥೆ ಬಂದಿದೆ. ಅಶ್ವಿನೀ ದೇವತೆಗಳು ದೇವವೈದ್ಯರು. ಅವರು ಮಧು ವಿದ್ಯಾಸಂಪನ್ನನಾದ ದಧೀಚಿಯಲ್ಲಿಗೆ ಬಂದು ಮಧು ವಿದ್ಯೆಯನ್ನು ಹೇಳಬೇಕೆಂದು ಕೇಳಿಕೊಳ್ಳುತ್ತಾರೆ. ಆಗ "ತನ್ನ ವಿದ್ಯಾಗುರುವಾದ ಇಂದ್ರನು ಇದನ್ನು ಯಾರಿಗೂ ಹೇಳಕೂಡದೆಂದು ಕಟ್ಟಪ್ಪಣೆ ಮಾಡಿದ್ದಾನೆ. ಹೇಳಿಕೊಟ್ಟದ್ದೇ ಆದರೆ ನನ್ನ ತಲೆ ಕಡಿಯುತ್ತೇನೆಂದು ನಿಷ್ಠುರವಾಡಿದ್ದಾನೆ ನಿಮಗೆ ಈ ವಿದ್ಯೆಯನ್ನು ಹೇಳಿಕೊಡುವಲ್ಲಿ ನನಗಿರುವ ಹಿರಿಯ ಆತಂಕ ಇದೊಂದೇ" ಎಂದು ಋಷಿಯು ಹೇಳುತ್ತಾನೆ. ಅದಕ್ಕೆ ಅಶ್ವಿನೀ ದೇವತೆಗಳು "ನಮ್ಮನ್ನು ಶಿಷ್ಯರನ್ನಾಗಿ ಮಾಡಿಕೋ, ನಿನ್ನ ಈ ತಲೆಯನ್ನು ಈಗ ನಾವೇ ಕತ್ತರಿಸಿ ತೆಗೆದಿಟ್ಟು ನಿನ್ನ ದೇಹಕ್ಕೆ ಕುದರೆಯ ಕುತ್ತಿಗೆಯನ್ನು ಹಚ್ಚುತ್ತೇವೆ. ಆ ಕುದುರೆ ಮುಖದಿಂದ ನೀನು ನಮಗೆ ಮಧು ವಿದ್ಯೆಯನ್ನು ಹೇಳಿಕೊಡು. ಇಂದ್ರ ಆ ತಲೆಯನ್ನು ಕಡೆದ ಮೇಲೆ ನಿನ್ನ ಮೊದಲಿನ

ರುಂಡವನ್ನೇ ನಿನ್ನ ದಿಂಡಕ್ಕೆ ಹಚ್ಚಿ ಬದುಕಿಸಿಕೊಳ್ಳುತ್ತೇವೆ.'' ಹೀಗೆಂದು ಮಾತುಕತೆಗಳಾಗಿ ಆದರಂತೆ ವಿದ್ಯೆ ಹೇಳಿದ ಮೇಲೆ ಕುದುರೆಯ ತಲೆ ಇಂದ್ರನ ವಜ್ರದಿಂದ ಪುಡಿಯಾಗಿ ಹೋಗಲು ಮೊದಲಿನ ರುಂಡವನ್ನೇ ಆತನಿಗೆ ಹಚ್ಚಿ ಬದುಕಿಸಿದರಂತೆ.

ಈ ದೇವವೈದ್ಯರು ವಿದ್ಯೆಗಾಗಿ ಇಷ್ಟೊಂದು ಕ್ರೂರ ಸಾಹಸವನ್ನೇಕೆ ಮಾಡಿರಬಹುದು? ಸತ್ತವರನ್ನು ಬದುಕಿಸುವ ಸಾಮರ್ಥ್ಯವಿದ್ದವರಿಗೂ ಹೆಚ್ಚಿನ ವಿದ್ಯೆ ಕಲಿಯುವ ಹುಚ್ಚೇಕೆ? ಅವರಿಗೆ ತಮ್ಮ ವೈದ್ಯಕೀಯ ವ್ಯವಸಾಯ ಬೆಳೆಸಬೇಕೆಂಬ ಹಂಬಲಕ್ಕೆ ಗುರಿ ಏನಿರಬಹುದು? ಜಗತ್ತನ್ನು ಮಾಡಬರುವಷ್ಟು ಹೆಚ್ಚಿಗೆ ಸುಖಿ, ಮತ್ತಿಷ್ಟು ಸುಖಿಯನ್ನಾಗಿ ಮಾಡಬೇಕೆಂಬ ಕಳವಳ. ಜನರು ಸುಖಿಗಳಾದ್ದನ್ನು ಕಂಡು ಸುಖಪಡುವ ಸಾತ್ವಿಕ ಸಾಧುಹೃದಯ ಅವರದು. ಈ ಪರೋಪಕಾರದ ತವಕ, ಸದ್ವಾಸನೆಗಳು ಅವರನ್ನು ಮನುಷ್ಯರಿಂದ ದೇವತೆಗಳ ಮಟ್ಟಕ್ಕೆ ಏರಿಸಿದರೆ ಅಚ್ಚರಿ ಏನು? "ವೈದ್ಯೋ ನಾರಾಯಣೋ ಹರಿಃ".

ಹಿಂದಿನವರ ಹೆಸರು ಹೇಳಿ ನಾವು ಆದೆಷ್ಟು ಕಾಲ ಯೋಗ್ಯತೆಯನ್ನು ಉಳಿಸಿಕೊಂಡೇವು. ಗಳಿಸಿದ್ದು ಉಳಿದೀತು. ಅನೇಕ ಕಾರಣಗಳಿಂದ ವೈದ್ಯಪರಂಪರೆ ತಪ್ಪಿ ಆನುವಂಶಿಕತ್ವಕ್ಕೆ ಅಂಟಿಕೊಂಡಿದ್ದು ಅದು ಈಗ ರಜಿಸ್ಟ್ರೇಶನ್ನಿಗೆ ಬಂದುನಿಂತಿದೆ. ನಮ್ಮ ಸರ್ಕಾರ ಸಂಕಟಪಟ್ಟುಕೊಂಡು ಪಾಶ್ಚಾತ್ಯ ವೈದ್ಯಕಕ್ಕೆ ದುಡ್ಡು ಸುರುವಿ ಶರಣುಹೋಗಬೇಕಾಗಿದೆ. ಅವರಿಗೆ ಆಯುರ್ವೇದದಲ್ಲಿ ಭರವಸೆ ಆಗಲೊಲ್ಲದು. ಹೇಗಾಗಬೇಕು? ಆಯುರ್ವೇದದ ಸಂಪೂರ್ಣತೆ ನಷ್ಟವಾಗಿದೆ. ಶರೀರಶಾಸ್ತ್ರ ಗೊತ್ತಿಲ್ಲ. ಹಿಂದಿನವರ ಶಸ್ತ್ರಕ್ರಿಯೆಯ ಬಗೆಗಿದ್ದ ಹಲವಾರು ಪ್ರಯೋಗಗಳೆಲ್ಲಾ ಅಳಿದುಳಿದ ಪುಸ್ತಕಗಳಲ್ಲಿಯೂ ಸಾಮಗ್ರವಾಗಿಲ್ಲ. ಇಂಥ ಸ್ಥಿತಿಯಲ್ಲಿ ಆ್ಯಲೋಪಥಿಯ ಸಂಸರ್ಗವಿಲ್ಲದೆ ಆಯುರ್ವೇದ ಸ್ವತಂತ್ರವಾಗಿ ಬದಕಲಾರದು. ಒಂದು ವೇಳೆ ಆದು ಬದುಕಿದರೂ ಬದುಕೀತು. ತೀವ್ರಾವಸ್ಥೆಯ ರೋಗಿಯು ಮಾತ್ರ ಖಂಡಿತ ಬದುಕುವದಿಲ್ಲ. ಇದೇ ಮಾತು ಆಯುರ್ವೇದದ ನೆರವಿಲ್ಲದ ಆ್ಯಲೋಪಥಿಗೂ.

ಸ್ವತಂತ್ರರಾದ ನಾವಿನ್ನು ನಾಲ್ಕೂ ನಿಟ್ಟುಗಳನ್ನು ನೋಡೋಣ. ಪೂರ್ವ ಪಶ್ಚಿಮಗಳ ದುರಾಗ್ರಹ ಬೇಡ. ದುರಾಗ್ರಹ ದಡ್ಡತನದ ಗುರುತು ಹರಕುಬಟ್ಟೆ ಅದೆಷ್ಟು ದಿನ ಮರ್ಯಾದೆ ಮುಚ್ಚೀತು ? ಜಗತ್ತಿನಲ್ಲಿ ಪರಿಪೂರ್ಣನಾಗಿರುವವ ಪರಮಾತ್ಮನೊಬ್ಬನೇ. ನಮ್ಮ ಅಪೂರ್ಣತೆಯನ್ನು ಒಪ್ಪಿಕೊಂಡು ಪೂರ್ಣತೆಯತ್ತ ನಡೆದರೆ ಮಾತ್ರ ದಾರಿ ಸಾಗುತ್ತದೆ. ಮಲಯುವನ್ನೊಡೆದಾಗ ಪೂರ್ಣತೆಯು ಸಮೀಸುತ್ತದೆ. ಬುದ್ಧಿ ಪ್ರಾಂಜಲವಾಗದೇ ಪ್ರಯತ್ನವಿಲ್ಲದೇ ಪ್ರಗತಿ ಇಲ್ಲಾ.

ರಾಜಾಶ್ರಯ ತಪ್ಪಿದ ಅನಾಥ ಆರ್ಯವೈದ್ಯಕವೀಗ ಪ್ರಜಾರಾಜದಲ್ಲಿ ತಬ್ಬಲಿಯಾಗಲಿದೆ. ವೈದ್ಯ ಡಾಕ್ಟರುಗಳಲ್ಲಿ ಪರಸ್ಪರ ಅಸಹನೈ ವೈದ್ಯ ವೈದ್ಯರಲ್ಲಿ ಇದು ಮತ್ತಿಷ್ಟೂ ಹೆಚ್ಚು. ಒಬ್ಬರನ್ನೊಬ್ಬರು ರೋಗಿಗಾಗಿಯಾದರೂ ಕಂಡು ಮಾತನಾಡುವದಿಲ್ಲ. ರೋಗಿ ಸಾಯುವವರೆಗೂ ಒಬ್ಬರಿಗೇ ಶರಣಾಗತನಾಗಬೇಕೆಂಬ ಹಟ. ರೋಗಿಗೆ ವಿಶ್ವಾಸ ಬೇಕು. ಸಂಶಯಕೂಡದು. ಪ್ರಶ್ನೆ ಮಾಡುವ ಅಧಿಕಾರ ಆತನಿಗಿಲ್ಲಾ. ಕೊಟ್ಟದ್ದನ್ನು ಶ್ರದ್ಧೆಯಿಂದ ಮತ್ತೊಬ್ಬರಿಗೆ ಹೇಳದೇ, ತೋರಿಸದೇ ತಕ್ಕೊಳ್ಳಬೇಕೆಂಬ ವಿಧಿ. ಇವುಗಳಲ್ಲೇನಾದರೂ ವ್ಯತ್ಯಾಸವಾದ ಅನುಮಾನ ತಮ್ಮಷ್ಟಕ್ಕೆ ತಮಗೇ ಬಂದರೂ ಆಯಿತು. ರೋಗಿಯ ಮೇಲಿನ ಮರ್ಜಿ ( ? ) ಹಾರಿ ಹೋಗುತ್ತದೆ. ಅದರಲ್ಲಿಯೂ ಒಬ್ಬರಿಗೆ ತೋರಿಸಿಕೊಂಡು ಇವರಲ್ಲಿ ಬಂದದ್ದು ತಿಳಿದರೆ ಸಾಕು. "ನನ್ನನ್ನು ಪರೀಕ್ಷೆ ಮಾಡಲು ಬಂದಿರುವಿರೇನು, ನನ್ನನ್ನು ಪರೀಕ್ಷೆ ಮಾಡುವವರು ಬೇರಿದ್ದಾರೆ" ಎಂದು ಕೆಂಪು ಕಣ್ಣರಳಿಸಿ ರೋಗಿಗೆ ಬಾಗಿಲು ತೋರಿಸುವ ಸ್ವಂತ ಮನೆ ಇದ್ದ ದೊಡ್ಡ ಡಾಕ್ಟರರಿಗೇನು ಕಡಿಮೆಯಿಲ್ಲಾ.

ಇದರಲ್ಲೆಲ್ಲಾ ತುಂಬಿದ್ದು ರೋಗಿಗೆ ಸಂಬಂಧಿಸಿದ ಕಳವಳ ಎಳ್ಳಷ್ಟೂ ಇಲ್ಲದ ಕೇವಲ ಅರ್ಥದೃಷ್ಟಿ. ಆದರೆ "ಅಥಭೂತ ದಯಾಂಪ್ರತಿ" ಎಂದು ಚರಕಾಚಾರ್ಯರು ಸಾರಿದ ಮಾತು ತ್ರಿಕಾಲಾಬಾಧಿತ ಸತ್ಯ. ಇದೇ ಕೀರ್ತಿಯ ಕೀಲೀಕೈ. ಹಣದತ್ತ ನೋಡಬೇಡ. ಬೇನೆಯವನತ್ತ, ಆತನ ವೇದನೆಯತ್ತ ನೋಡು. ವೈದ್ಯ ಲಕ್ಷಣದಲ್ಲಿ ಹೇಳಿದ ದಯಾಲುತ್ವದವರಿ

ಪ್ರತಿಕ್ಷಣದಲ್ಲಿ ಕಡಿಮೆಯಾಗುತ್ತ ಬರಬಾರದು. ಹಣವಾರಿಗೆ ಬೇಡ? ಆದರೆ ಅದರ ದುರಾಶೆ ಮಾತ್ರ ಕಾಡು. ಹಣ ಬರುವದು ಗುಣದಿಂದಲ್ಲ, ದೈವದಿಂದ. ದೊಡ್ಡ ದೊಡ್ಡ ಬಂಗಲೆ, ಮೋಟಾರು, ಬ್ಯಾಂಕುಗಳು ವಿದ್ಯೆಯ ಮಟ್ಟೆಗೋಲಲ್ಲ, ಗುಣದ ಗುರುತಲ್ಲಾ ಹಣದ ನುರಿತ. ರೋಗಿಗಳ ಹರಿಕೆ ಗುಣಕ್ಕೆ ಫಲ, ಸಮಾಧಾನದ ಮೂಲ. ಚಿಕಿತ್ಸಕರು, ದಯಾಮಯರಾಗದಿದ್ದರೆ ಸ್ವಾತಂತ್ರ್ಯದಲ್ಲಿಯೂ ನಮ್ಮ ದೇಶದ ಸುಖ ಸಮಾಧಾನಗಳು ಕನಸಿನ ಗಂಟೇ ಸರಿ. ಶರೀರ ಸ್ವಾಸ್ಥ್ಯವಿಲ್ಲದಲ್ಲಿ ಆದಾವ ಸುಖ, ಸಮಾಧಾನ! ಸಾಧನ!

ಔಷಧಿಗಳಲ್ಲಿ ಶ್ರದ್ಧೆ ಏಕೆ ಬೇಕು? "ವಸ್ತುತಂತ್ರಹಿಜ್ಞಾನಂ" ಶೃದ್ಧೆಯಿಂದ ಮುಟ್ಟು ಅಥವಾ ಅಶೃದ್ಧಯಿಂದ ಮುಟ್ಟು ಬೆಂಕಿಯ ಜ್ಞಾನಾನುಭವ ಬಿಸಿಯೇ. ಔಡ್ಲ ಎಂಣಿ ಕುಡಿದರೆ ಜಾಡಿಸಲೇ ಬೇಕು, ಜೇನು ತುಪ್ಪವೆಂದು ತಿಂದರೂ ಬಿಡುವದಿಲ್ಲಾ. ಈ ಶೃದ್ಧೆಯ ಸೋಗಿನಲ್ಲಿ ಅನೇಕ ದಿವ್ಯ ಔಷಧಿ ಮಣಿ ಮಂತ್ರಗಳು ಯಾರಿಗೂ ತಿಳಿಯದೇ ಹೋಗಿಬಿಟ್ಟವು. ಅಲ್ಲದೆ ಹೇಳಿದರೆ ಅವುಗಳ ಶಕ್ತಿಯೂ ಕಡಿಮೆಯಾಗುತ್ತದಂತೆ— ಅಂತೇ ಹೇಳಬಾರದೆಂಬ ಭ್ರಮೆ. ಅದಕ್ಕಾಗಿ ಹೇಳಕೇಳ ಬರದಂತಲ್ಲಿಗೆ ಅವು ಹೋಗಿಬಿಟ್ಟವು. ಇಂಥದರಲ್ಲೂ ಒಬ್ಬರನ್ನೊಬ್ಬರು ದೂರಿಕೊಳ್ಳುವದು. ಕಂಗಾಲ ರೋಗಿಗಳತ್ತ ನೋಡಿಯಾದರೂ ಈ ಪರಿಸ್ಥಿತಿ ಹಿಮ್ಮೆಟ್ಟದರೆ ದೇಶಕ್ಕೆ ದೇವರೊಲಿದನೆನ್ನಬೇಕು. ವ್ಯಾಪಕ ವಿಚಾರ ಇಲ್ಲದಲ್ಲಿ ಇದೆಲ್ಲ ಆಸಡ್ಡೆ ಇದ್ದುದೇ.

ಗ್ರಂಥಕರ್ತರು "ರೋಗ ನಿವೃತ್ತಿಯು ವೈದ್ಯಕದ ಮುಖ್ಯ ಉದ್ದೇಶ" ವೆಂದು ಮೊದಲು ಮಾತನ್ನು ಎತ್ತಿದ್ದಾರೆ. ನಾಡಿಗೆ ಜನಕ್ಕೆ ಇದು ಬೇಕಾಗಿದೆ, ಬರಿದು ಬಾವಲಿ ಪಾಂಡಿತ್ಯದ ಪರಸ್ಪರ ದ್ವೇಷಾಸೂಯೆಗಳನ್ನು ಜನ ಅಷ್ಟೊಂದು ಗಮನಿಸುವದಿಲ್ಲ. ಜನ ಹೆಚ್ಚೋ, ಹಣ ಹೆಚ್ಚೋ! ಇನಕಮ್‌ಟ್ಯಾಕ್ಸ ತುಂಬುವಷ್ಟು ದುಡ್ಡು ಗಳಿಸಲಿಕ್ಕೆ ಹೇಳಿದವರಾರು. ಎರಡೂ ಕೈಕೂಡಿ ಚಪ್ಪಾಳೆ ಎಂಬಂತೆ- ರೋಗಿಗಳೂ ಬೇನೆ ತುಸು ಹಿಮ್ಮೆಟ್ಟದರಾಯಿತು. ಹೊಳೆ ದಾಟಿದ ಮೇಲೆ ಅಂಬಿಗನ .... .... ಎಂಬ

ಗಾದೆಯಂತೆ ನಡಕೊಳ್ಳುತ್ತಿದ್ದಾರೆ. ಇದರಲ್ಲಿ ಮಾತುಬಂದಾಗ ಸೋತು ಹೋದವನೇ ಜಾಣ. ತಿಳಿದವರು ಸೋಲುವದನ್ನು ಮೊದಲು ಮಾಡಬೇಕು. ನೂಲಿನ ಒಂದು ತುದಿ ಸಿಕ್ಕರಾಯಿತಲ್ಲಾ, ಮಾಡುವವರು ಮುಂದಾದದರೆ "ಕೈಯ್ಯಂ ಪಿಡಿದೊಡೆ ವೈ ತಾನೆ ಬಹುದು" ಎಂಬಂತಾಗುತ್ತದೆ.

ಬೇನಿಗರ ಸಂಖ್ಯೆಗೆ ತಕ್ಕಂತೆ ಚಿಕಿತ್ಸಕರೂ ಬೆಳೆದಿದ್ದಾರೆ. ಆದರೇನು? ಕಲಿತದ್ದು ಎರಡು ವರ್ಷ ಆಯುರ್ವೇದ. ಹ್ಯಾಟು ಹಾಕಿಕೊಂಡು ಬಾಯಲ್ಲಿ ಶಿಗರೇಟು ಕಚ್ಚಿ ಎದ್ವಾತದ್ವಾ ಆ್ಯಲೋಪಥಿ ಇಂಜಕ್ಷನ್ ಮಾಡುವದನ್ನು ನೋಡಿದರೆ, ಅದೆಂಥವನಿಗೂ ಕನಿಕರ ಬರುತ್ತದೆ. ಆದರಂತೆ ಕಲಿತದ್ದು ಕೊಯ್ಯುವದನ್ನು ಸರ್ಜರಿ ಕೊಡುವದು ಭಸ್ಮ ಆಸವಾರಿಷ್ಟ. ಆರ್ತನಾದ ರೋಗಿ ಸಾವಿನ ಭಯದಿಂದಾಗಿ ಎಂಥಲ್ಲಿಯೂ ವೈ ಒಡ್ಡುತ್ತಾನೆಂದು ನಾವೇಕೆ ಆತ್ಮವಂಚನೆ ಮಾಡಿಕೊಳ್ಳಬೇಕು? ನಮ್ಮ ಮಕ್ಕಳಲ್ಲಿ ನಾವು ಈ ಹುಂಬತನದ ಪ್ರಯೋಗ ಮಾಡಿಯೇವೇನು? ತತನಿಷ್ಠೆಯಲ್ಲಿ ಪಾಪವಿಲ್ಲ, ಸುಪ್ರಸಿದ್ಧ ಡಾಕ್ಟರ ನಾಡಿಗೇರರಿಗೆ ಆಯುರ್ವೇದ ಔಷಧಿ ತೆಗೆದುಕೊಳ್ಳಲು ಒತ್ತಾಯ ಮಾಡಿದೆ. "ನನ್ನ ಬೇನೆಗೆ ನಾನು ಕಲಿತ ಶಾಸ್ತ್ರದಲ್ಲಿ ಔಷಧಿ ಇಲ್ಲಾ. ಇದನ್ನೇ ನಾನೆಲ್ಲರಿಗೂ ಕಲಿಸಿದ್ದೇನೆ. ದ್ವಡ್ಡನಿಂದ ಔಷಧಿ ತೆಗೆದುಕೊಂಡು ಬದುಕುವದಕ್ಕಿಂತ ಸಾಯುವದೇ ಮೇಲು" ಎಂದರು.

ಒತ್ತಟ್ಟಿಗೆ ಸೇರಿ ವಿಚಾರ ವಿನಿಮಯ ಮಾಡಿ ಸಂಶೋಧನೆಗಿಳಿದು ಅಭ್ಯಾಸಿಗಳಾಗಿ ಜನೋಪಕಾರಿಗಳಾದ ಉಪಚಾರಗಳನ್ನು ಕಂಡು ಹಿಡಿಯಬೇಕು. ರಾಷ್ಟ್ರದ ಆರೋಗ್ಯ ಉತ್ತಮಗೊಳ್ಳಬೇಕು. ಬಲಿಷ್ಠ ಮಕ್ಕಳು ಜನ್ಮವೆತ್ತುವಂತಾಗಬೇಕು. ಆಗ ಆಯುರ್ವೇದದ ಹಿಂದಿನ ವೈಭವದ ಪತಾಕೆ ಮತ್ತೆ ಸ್ವತಂತ್ರ ಭಾರತದಲ್ಲಿ ಮೆರೆಯುವನ್ನು ನೋಡಬಹುದು.

ಈ ಸವ[illegible]ಯ ದೃಷ್ಟಿಯಿಂದಲೇ ಅಭ್ಯಾಸ ಮಾಡಿದ್ದ ನನ್ನ ವೈದ್ಯ ಮಿತ್ರರಾದ ಆಯುರ್ವೇದ ತೀರ್ಥ ಪಾಂ. ವಿ. ಜಾಯದೆ ವೈದ್ಯರು ತಮ್ಮ

ಅನುಭವವನ್ನು ಶಾಸ್ತ್ರದ ವರೆಗಲ್ಲಿಗೆ ತಿಕ್ಕಿ ತೋರಿಸಿದ್ದಾರೆ ಈ ಪುಸ್ತಕದಲ್ಲಿ. ಮೇಲಾಗಿ ಅದನ್ನು ಗುರುಗಳಿಗೇ ಅರ್ಪಿಸಿದ್ದೊಂದು ವಿಶೇಷ. ಶಾಸ್ತ್ರ, ಸ್ವಾನುಭಾವ, ಗುರು ಸಮ್ಮತಿಗಳ ಮುಪ್ಪುರಿಯ ಜ್ಞಾನವೇ ಪ್ರಮಾಣಿಕ ವಲ್ಲವೇ? ಇವರಿಟ್ಟ ಹೆಜ್ಜೆ ಕನ್ನಡದಲ್ಲಿ ಹೊಚ್ಚ ಹೊಸದು. ಸೂಜ್ಞರು ಸಹನೆಯಿಂದ ನೋಡಿ ತಿಳಿಸಿಕೊಡಲೆಂದು ಮೊದಲು ಭಾಗದ ಅನುವಾದ ವನ್ನಷ್ಟೇ ಈಗ ಬೆಳಕಿಗೆ ತಂದದ್ದಾಗಿದೆ.

ವೈದ್ಯರ ಮೂಲ ಬರಹ ಮರಾಠಿ. ಇದು ಅದರ ಕನ್ನಡ ಅನುವಾದ. ಮೂಲವನ್ನು ಮೀರಿಸುವ ಅನುವಾದ ಎಲ್ಲರಿಗೂ ಸಾಧಿಸುವದಿಲ್ಲ. ಮೂಲವನ್ನು ಸರಿಯಾಗಿ ಅರ್ಥ ಮಾಡಿಕೊಂಡಿದ್ದರೆ ಸಾಕು ಅದೆಷ್ಟೋ ಶ್ರೇಯಸ್ಸು. ಈ ಅನುವಾದ ಗ್ರಂಥಕರ್ತರ ಸಮ್ಮುಖದಲ್ಲಿಯೇ ಆದ್ದರಿಂದ ಅಪಾರ್ಥಕ್ಕೆ ಅವಕಾಶವಿಲ್ಲ. ನೋಡಿ, ಮೊದಲೇ ವೈದ್ಯಕ ವಿಷಯ ಮಹಾ ನೀರಸವೆನ್ನುತ್ತಾರೆ. (ಅದೇಕೋ? ಬೇನೆ ಬಂದಾಗಮಾತ್ರ ವೈದ್ಯರು, ಕಂಡವರೆಲ್ಲಾ, ಕುಡಿದ ಕಹಿಯಲ್ಲಾ, ಸರಸವಾಗುತ್ತದೆ ಯಲ್ಲವೇ) ಮೇಲಾಗಿ ಇದರ ಪರಿಭಾಷೆ ಪ್ರಯೋಗಗಳು ತಿಳಿಯ ಬೇಕಾದರೆ ಅನುಭವ ಅಗತ್ಯ. ಆ ಪರಿಭಾಷೆಯನ್ನು ಸಂಸ್ಕೃತದಿಂದ ಕನ್ನಡಕ್ಕೆ ತರು ವಾಗಿನ ಕಸವಿಸಿ ಅನುವಾದಕರಿಗೇ ಗೊತ್ತು. ಬಂಜೆಗೇನು ಗೊತ್ತು ಪ್ರಸವ ವೇದನೆ. ಮೇಲೆ ಮರಾಠಿ ಪ್ರಯೋಗಗಳು ಕನ್ನಡಕ್ಕೆ ತಲೆ ಕೆಳಕಾ ಗಿಯೇ ಬರಬೇಕು. ಬರೀ ಭಾಷೆ ಗೊತ್ತಿದೆ. ಬರೆಯ ಬಲ್ಲೆನೆಂದರೆ ಇಲ್ಲಿ ಹಾದಿ ತಪ್ಪುವದು ನಿಶ್ಚಿತ. ಆದಕ್ಕಾಗಿ ಅನುವಾದದ ಸಂಪೂರ್ಣ ಶ್ರೇಯಸ್ಸು ಗ್ರಂಥಕರ್ತರಿಗೇ ಸೇರಬೇಕು. ಅದರಲ್ಲೂ ಬರಹ ಬಹಳ ಗಡಬಿಡಿಯಲ್ಲಾ ಗಿದೆ. ಭಾಷೆಯತ್ತ ಲಕ್ಷ್ಯ ಕೊಟ್ಟಿಲ್ಲವೆಂದರೂ ಸಲ್ಲುತ್ತದೆ. ವೈದ್ಯರು ಜಿಗುಟು ತನದಿಂದ ಹೊತ್ತು ಹೊತ್ತಿಗೆ ಕೈ ತೊಳೆದುಕೊಂಡು ಬೆನ್ನು ಹತ್ತಿ ಎಮರಿಗೆ ಕುಳಿತು ತಿಳಿಸಿ ಹೇಳಿ ಸಹನೆಯಿಂದ ಬರೆಸಿದ್ದರಿಂದಲೇ ಈ ಅನುವಾದ ವಾಯಿತೆಂಬ ಮಾತನ್ನು ಪ್ರಾಮಾಣಿಕವಾಗಿ ಒಪ್ಪಲೇ ಬೇಕು. ಸಾಲೆಗೆ ಕಾಲಿಟ್ಟಾಗಿನಿಂದ ಐವತ್ತು ವರ್ಷಗಳ ವರೆಗೂ ಇಷ್ಟೊಂದು ಬರೆದದ್ದೇ ಇಲ್ಲ, ಬರೆಯಿಸಿಯೇ ರೂಢಿ. ಒಂದು ಪತ್ರವನ್ನು ಕೂಡಾ ಬರೆಯಿಸುವದೇ,

ಇಂಥ ಶತಾಲಸಿಯಿಂದಾದ ಕೆಲಸ ಜ್ಞಾನೇಶ್ವರರು ಗೋಡೆಯನ್ನು ನಡೆಸಿದಂತೆ. ಕೋಣನಿಂದ ವೇದವನ್ನು ನುಡಿಸಿದಂತಾಗಿದೆ ಎಂದರೆ ಏನಚ್ಚರಿ?

ಅಂತೂ ಈ ಪುಸ್ತಕ ಆಯುರ್ವೇದ ವ್ಯಾಸಂಗಿಗಳಿಗೆ ವಿದ್ಯಾರ್ಥಿಗಳಿಗೆ ವಿಶೇಷವಾಗಿ ವೈದ್ಯರಿಗೆ ತುಸುವಾದರೂ ಉಪಯೋಗ ಬಿದ್ದರೆ; ಸಮಬುದ್ಧಿ, ದಯಾಗುಣ, ಸಹಾನುಭೂತಿಗಳನ್ನು ತಂದು ಕೊಡುವಲ್ಲಿ ಸಹಾಯಕವಾದರೆ ಗ್ರಂಥಕರ್ತರ ಶ್ರಮ ಸಾರ್ಥಕವೆನ್ನೋಣ. ನಾರಾಯಣ ಹರಿ ರೂಪದ ವೈದ್ಯವರ್ಗಕ್ಕೆ ಈ ಸೇವೆಯನ್ನು ಸಲ್ಲಿಸಿ ಸಂತೋಷ ಪಡೋಣ. ಬಿಚ್ಚು ಮಾತಿಗಾಗಿ ಕ್ಷಮೆಯನ್ನು ಕೇಳಿಕೊಳ್ಳೋಣ.

**ವಿಕೃತಿಯ ಅನಂತ ಚತುರ್ದಶಿ**

**ಹುಬ್ಬಳ್ಳಿ** — **ಅನುವಾದಕ**

---

# ಆಧಾರ ಗ್ರಂಥಗಳು


(೧) ಚರಕ ಸಂಹಿತೆ
(೨) ಸುಶ್ರುತ ಸಂಹಿತೆ
(೩) ವಾಗ್ಭಟ ಸಂಹಿತೆ.
(೪) ಮಾಧವ ನಿದಾನ
(೫) ಶಾರಙಧರ (೬) ರಸರಾಜ ಸುಂದರ
(೭) ಯೋಗರತ್ನಾಕರ ಮೊದಲಾದ ವೈದ್ಯಕ ಗ್ರಂಥಗಳು.
(೮) ಔಷಧಿ ಗುಣಧರ್ಮಶಾಸ್ತ್ರ (ವೈ. ಪಂ. ಗುಣೆಶಾಸ್ತ್ರಿ)
(೯) ಔಷಧೀ ಸಂಗ್ರಹ (ಡಾ. ದೇಸಾಯಿ)
(೧೦) ಭಿಷಗ್ವಿಲಾಸ, ಆರೋಗ್ಯ ಮಂದಿರ, ಆಯುರ್ವೇದ ಪತ್ರಿಕಾ, ಆರ್ಯವೈದ್ಯ ಮೊದಲಾದ ಮಾಸ ಪತ್ರಿಕೆಗಳು.
(೧೧) ಜೀವನ ರಸಾಯನ ಚಿಕಿತ್ಸಾ ಶಾಸ್ತ್ರ (ಡಾ. ಪಳಸುಲೆ)
(೧೨) ಇಂಜಕ್ಶನ್ ವಿಜ್ಞಾನ ಶಾಸ್ತ್ರ (ವೈ. ಪಾಂ. ತ. ಕುಲಕರ್ಣಿ)
(೧೩) ಮಹರ್ಷಿ ಅಣ್ಣಾಸಾಹೇಬ ಪಟವರ್ಧನ ಇವರ ಗ್ರಂಥ
(೧೪) Savil's Clinical Medicine
(೧೫) Taylor's Practice of „
(೧೬) Medicine & Essentilas for Practioners & Students. (By Dr. Beaumont)
(೧೭) Tropical Diseases
(೧೮) Midwifery in Tropics
(೧೯) Home & Village Doctor
(೨೦) Antiseptic, Indian Medical Gazette & British Medical Journal.


-o—

# ವಿಷಯಾನುಕ್ರಮಣಿಕೆ



—o—



ಗ್ರಂಥಕರ್ತರು ತಮ್ಮ ಕೆಲ ವಿದ್ಯಾರ್ಥಿ ಮಿತ್ರರೊಡನೆ.

*For Medical Professon only*

# ವೈದ್ಯಸನ್ಮಿತ್ರ



## ನಿವೇದನ

॥ नात्मार्थं नापि कामार्थमथ भूतदयां प्रति ॥

## ವೈದ್ಯಕ ಸಮನ್ವಯ

"ರೋಗನಿವೃತ್ತಿ" ಯು ವೈದ್ಯಕದ ಮುಖ್ಯ ಉದ್ದೇಶವಾಗಿದೆ. ಜಗತ್ತಿನಲ್ಲಿ ಆಯುರ್ವೇದ, ಆ್ಯಲೋಪಥಿ, ಹೋಮಿಯೋಪಥಿ ಮೊದಲಾದ ಅನೇಕ ಶಾಸ್ತ್ರಪದ್ಧತಿಗಳು ಬಳಿಕೆಯಲ್ಲಿರುತ್ತವೆ. ಪ್ರತಿಯೊಂದು ಪದ್ಧತಿಗೆ ಕೆಲವು ವೈಶಿಷ್ಟ್ಯಗಳೂ ಇರುತ್ತವೆ. ಹಂಸಕ್ಷೀರ ನ್ಯಾಯದಂತೆ ಪ್ರತಿಯೊಂದು ಪದ್ಧತಿಯೊಳಗಿನ ಗ್ರಾಹ್ಯಭಾಗವನ್ನು ತೆಗೆದುಕೊಂಡು ಒಂದು ಹೊಸ ವೈದ್ಯಕವನ್ನು ತಯಾರಿಸುವಕಾಲ ಇದೀಗ ಬಂದಿದೆ. ವಿಶೇಷತಃ ಸ್ವತಂತ್ರ ಭಾರತಕ್ಕೆ ಇದರ ಅವಶ್ಯಕತೆ ಹೆಚ್ಚಾಗಿರುತ್ತದೆ. ಈ ತರಹದ ವೈದ್ಯಕ ಸಮನ್ವಯ ಮಾಡುವ ಪ್ರಯತ್ನವನ್ನು ಮಧ್ಯಪ್ರಾಂತ ಸರಕಾರದ ಆರೋಗ್ಯ ಮಂತ್ರಿಗಳಾದ ಮಾನ್ಯ ಡಾಕ್ಟರ ಬಾರಲಿಂಗೆ ಇವರು ಮಾಡುತ್ತಿರುತ್ತಾರೆ. ಅದು ಸ್ವಾಗತಾರ್ಹವಿರುತ್ತದೆ. ಎಲ್ಲರ ಪ್ರಯತ್ನದಿಂದ ಕೆಲವು ಕಾಲದ ನಂತರ ಸುಸಂಪನ್ನ ಭಾರತೀಯ ವೈದ್ಯಕ ಶಾಸ್ತ್ರವು ಸಿದ್ಧವಾಗಬಹುದು. ಪ್ರಸ್ತುತ ಗ್ರಂಥವೂ ವೈದ್ಯಕ ಸಮನ್ವಯದ್ದೇ ಆಗಿರುತ್ತದೆ.

## ನಮ್ಮ ಶೋಚನೀಯ ಅವಸ್ಥೆ

ಭಾರತದಲ್ಲಿ ಪ್ರತಿಯೊಂದು ಮಿನಿಟಿಗೆ ಕ್ಷಯದಿಂದ ಒಂದೊಂದು ಮೃತ್ಯು ಆಗುತ್ತದೆ. ಇದಲ್ಲದೆ ಬಗೆಬಗೆಯ ಮಲೇರಿಯಾ, ಟಾಯ್‌ಫಾಯಿಡ್, ಕಾಲರಾ ಇತ್ಯಾದಿಗಳ ಪಿಡುಗಿನಿಂದ ಸಾವಿರಾರು ಜನರು ಕೃಣ್ಮರೆಯಾಗುತ್ತಾರೆ. ನಮ್ಮ ಸರಾಸರಿ ಆಯುರ್ಮಾನವು ಇಪ್ಪತ್ತೊಂದು ವರ್ಷ. ಇದು ಬಹಳ ಶೋಚನೀಯ ಸಂಗತಿ. ನಮ್ಮ ಲಕ್ಷಾವಧಿ ಹಳ್ಳಿಗಳೊಳಗೆ ವಾಸಿಸುವ ಕೋಟ್ಯಾವಧಿ ಜನರಿಗೆ ವೈದ್ಯಕೀಯ ಸಹಾಯವು ಸಿಗುವದೇ ಇಲ್ಲ. ಇವರ ಆರೋಗ್ಯದ ಪ್ರಶ್ನೆಯೊಂದು ದೊಡ್ಡ ಸಮಸ್ಯೆಯೇ ಆಗಿದೆ. "A sickly person is the liability of the nation" ಎಂದು ಮುಖ್ಯ ಪ್ರಧಾನರಾದ ಮಾನ್ಯ ಬಾಳಾಸಾಹೇಬ ಖೇರರವರು ಅನ್ನುತ್ತಾರೆ. ಇಂಥಸಮಯದಲ್ಲಿ ಎಲ್ಲರೂ ಸಹಕಾರದಿಂದ ಕೆಲಸಮಾಡುವದು ಮುಖ್ಯ ಕರ್ತವ್ಯವಾಗಿದೆ.

## ವೈದ್ಯಕ ವಿಶೇಷ

ನಮ್ಮ ಪೂಜ್ಯ ಋಷಿಪ್ರಣೀತ ಆಯುರ್ವೇದಶಾಸ್ತ್ರವು ತ್ರಿಕಾಲಾಬಾಧಿತ ಶಾಸ್ತ್ರವಾಗಿದೆ. ಆದರೆ ಸದ್ಯದ ಪರಿಸ್ಥಿತಿಯಲ್ಲಿ ಪಾಶ್ಚಾತ್ಯ ಶಾಸ್ತ್ರದ ಪ್ರಗತಿ ಹೆಚ್ಚಾಗಿ ಕಂಡುಬರುತ್ತದೆ. ಹೋದ ಎರಡು ನೂರು ವರ್ಷಗಳಲ್ಲಿ ಆಯುರ್ವೇದಕ್ಕೆರಾಜಾಶ್ರಯವು ಸಿಗಲಿಲ್ಲ. ಅದರಿಂದಾಗಿ ಆಯುರ್ವೇದಶಾಸ್ತ್ರದ ಪ್ರಗತಿಯಾಗಲಿಲ್ಲ. ಹೋಮಿಯೋಪಥಿ, ಬಾಯೋಕೆಮಿಸ್ಟ್ರಿಗಳು ತಮ್ಮ ತಮ್ಮ ಮಾರ್ಗದ ಪ್ರಕಾರ ರೋಗ ನಿವಾರಣೆಯ ಕೆಲಸವನ್ನು ಮಾಡುತ್ತಲಿವೆ. ಕೆಲವು ಜನರಿಗೆ ಆಯುರ್ವೇದ ಪದ್ಧತಿಯಿಂದ ತೀವ್ರ ಗುಣಕಂಡರೆ ಕೆಲವರಿಗೆ ಆ್ಯಲೋಪಥಿಕ ಪದ್ಧತಿಯಿಂದ ಗುಣಬರುತ್ತದೆ. ಇನ್ನೂ ಕೆಲವರಿಗೆ ಹೋಮಿಯೋಪಥಿಯಿಂದ ಗುಣಬರುತ್ತದೆ. ತೀವ್ರಾವಸ್ಥೆಯಲ್ಲಿ (Acute Stage) ಆ್ಯಲೋಪಥಿಯ ಉಪಯೋಗವು ಉತ್ತಮವಾದರೆ ಹಳೆಯ ರೋಗದಲ್ಲಿ (Chronic Diseases) ಆಯುರ್ವೇದದ ಉಪಯೋಗವು ಚನ್ನಾಗಿ ಆಗುತ್ತದೆ. ಇನ್ನೂ ಕೆಲವು ಭಾವನಾತ್ಮಕ ರೋಗಗಳಲ್ಲಿ ಹೋಮಿಯೋಪಥಿಯ ಉಪಯೋಗವು ಕಂಡುಬರುತ್ತದೆ. ಬಾಲಕರಿಗೆ

ಬಾಯೋಕೆಮಿಕ್ ಔಷಧಿಗಳ ಉಪಯೋಗವು ಚನ್ನಾಗಿ ಆಗುತ್ತದೆ "Ayurved begins where Allopathy ends" ಅ್ಯಲೋಪಥಿಯ ಸಮಾಪ್ತಿಯಾಗುವಲ್ಲಿಯೇ ಆಯುರ್ವೇದದ ಉತ್ಪತ್ತಿಯಾಗುವದು ಎಂದು ಕೆಲವು ವಿದ್ವಾಂಸರು ಅನ್ನುತ್ತಾರೆ. "Thus far & no further" ಇಷ್ಟೇ ನಮಗೆ ತಿಳಿದಿದೆ. ಇನ್ನೂ ತಿಳಿಯುವದು ಬಹಳವಿರುತ್ತದೆ, ಎಂದು ಕೆಲವು ಪಾಶ್ಚಿಮಾತ್ಯ ಪಂಡಿತರು ಅನ್ನುತ್ತಾರೆ. ಕೆಲವರು ಪಾಶ್ಚಿಮಾತ್ಯ ಸಂಸ್ಕೃತಿಯನ್ನು ಹೊಗಳುತ್ತಾರೆ, ಕೆಲವರು ಪೌರ್ವಾತ್ಯ ಸಂಸ್ಕೃತಿಯ ಗುಣಗಾನವನ್ನು ಮಾಡುತ್ತಾರೆ, ಸಮನ್ವಯಕಾರರು ಪೌರ್ವಾತ್ಯ ಮತ್ತು ಪಾಶ್ಚಿಮಾತ್ಯ ಸಂಸ್ಕೃತಿಗಳ ಸಮ್ಮೀಲನವಾಗಬೇಕೆಂದು ಅನ್ನುತ್ತಾರೆ. "Is east is east & west is west? No! east & west is the best."

ನಮಗೆ ವಾದವಿವಾದವೂ ಬೇಡ, ಕಂಠಶೋಷವೂ ಬೇಡ. ವಾದವನ್ನು ತಜ್ಞಪಂಡಿತರು ಮಾಡಬೇಕು. ಸಾಮಾನ್ಯ ಜನರಿಗೆ ಸ್ವಂತ ಹಿತದ ಪ್ರತ್ಯಕ್ಷ ವ್ಯವಹಾರವು ಬೇಕು. ವೈದ್ಯರು ಇಂಜೆಕ್ಶನ್ಸ್ ಮಾಡುತ್ತಿರುತ್ತಾರೆ. ಡಾಕ್ಟರರು ಪ್ರಭಾವೀ ಆಯುರ್ವೇದಿಕ ಔಷಧಗಳನ್ನೂ ಮತ್ತು ಹೋಮಿಯೋಪಥಿಕ್ ಔಷಧಗಳನ್ನೂ ಉಪಯೋಗಿಸುತ್ತಾರೆ. ಇಂಜಕ್ಶನ್‌ಗಳನ್ನು ಯಾರಾದರೂ ಮಾಡಬಹುದು! ಆದರೆ ಇಂಜಕ್ಶನ್ ಯಾವ ಅವಸ್ಥೆಯಲ್ಲಿ ಮಾಡಬೇಕು ಯಾವ ಅವಸ್ಥೆಯಲ್ಲಿ ಮಾಡಬಾರದೆಂಬದರ ಯಥಾರ್ಥ ಜ್ಞಾನವು ವೈದ್ಯರಿಗೆ ಬೇಕು. ಅವಸ್ಥಾಭೇದದಿಂದ ಆಯುರ್ವೇದೀಯ ಔಷಧಗಳನ್ನು ಎಲ್ಲೆಲ್ಲಿ ಕೊಡಬೇಕೆಂಬ ವಿಷಯದ ಸಮ್ಯಕ್ ಜ್ಞಾನವು ಡಾಕ್ಟರರಿಗೆ ಇರಲಿಕ್ಕೇ ಬೇಕು. ನಮ್ಮ ಆಯುರ್ವೇದ ಶಾಸ್ತ್ರಕಾರರು ನಾಡೀ ಪರೀಕ್ಷೆಯ ಕೆಲವು ಭಾಗ, ರಸ ವೈದ್ಯಕದ ಕೆಲವು ಭಾಗ ಅಥವಾ ಇನ್ನೂ ಕೆಲವು ಬೇರೆ ವಿಷಯಗಳನ್ನು ವಿದೇಶೀ ವೈದ್ಯಕ ಪದ್ಧತಿಯಿಂದ ತೆಗೆದುಕೊಂಡು ಆತ್ಮಸಾತ್ ಮಾಡಿದ್ದಾರೆ ಎಂದು ಕೆಲವು ವಿದ್ವಾಂಸರ ಅಭಿಪ್ರಾಯವಿರುತ್ತದೆ. ರೇವಾಚಿನಿ, ಕಬಾಬಚಿನಿ, ದಾಲಚಿನಿ, ಚೋಪಚಿನಿ ಮುಂತಾದ ಎಷ್ಟೋ ಔಷಧಗಳು ಪರದೇಶಿಯವಿರುತ್ತವೆ. ದೋಷ ದೂಷ್ಯ ಮತ್ತು ರಸವೀರ್ಯವಿಪಾಕ ಹಾಗೂ ಪ್ರಭಾವ ಇತ್ಯಾದಿ ನಮ್ಮ ಆಯುರ್ವೇದೀಯ ವಿಚಾರಸರಣಿಗೆ ಅನುಸರಿಸಿ ನಾವು ಪರದೇಶಿಯ ಔಷಧಗಳನ್ನು ಆತ್ಮಸಾತ್ ಮಾಡಿದ್ದೇವೆ ಮತ್ತು ಇನ್ನೂ ಹೊಸ

ಹೊಸ ವಿಷಯಗಳನ್ನು ಆತ್ಮಸಾತ್ ಮಾಡಲಿಕ್ಕೆ ಆಯುರ್ವೇದಿಕರು ಸಿದ್ಧರಾಗಬೇಕು. ಯಾಕಂದರೆ ಆಯುರ್ವೇದ ಅಂದರೆ (आयुषः वेदः—आयुर्वेदः The Science of life) ಡಾಕ್ಟರರು ವೃಥಾಭಿಮಾನ ಬಿಡಬೇಕು. ಆಯುರ್ವೇದವನ್ನಾದರೂ ತಮ್ಮ ಶಾಸ್ತ್ರವೆಂದೇ ಅವರು ತಿಳಿದುಕೊಳ್ಳಬೇಕು. ಜ್ಞಾನದ ಮೇಲಿನ ಮಾಲ್ಕಿ ಹಕ್ಕು ಯಾವತ್ತೂ ಜಗತ್ತಿನದಿದೆ. "Polio Myelitis ಎಂಬ ರೋಗದಮೇಲೆ ಆಯುರ್ವೇದಿಯ ಔಷಧಗಳು ಉತ್ಕೃಷ್ಟ ಕೆಲಸ ಮಾಡುತ್ತವೆ. ಮುಂಬಯಿಯ ಸುಪ್ರಸಿದ್ಧ ವೈದ್ಯರಾದ ಶ್ರೀಮಾನ್ ವೇದಪಾಠಕ ಇವರು ನೂರಾರು ರೋಗಿಗಳಿಗೆ ಉಪಚಾರಮಾಡಿ ಇದನ್ನು ಸಿದ್ಧಪಡಿಸಿದ್ದಾರೆ. ಕ್ಷಯ, ಸಂಗ್ರಹಣಿ, ಪಾಂಡುರೋಗ, ಅರ್ಧಾಂಗವಾತ, ವಾತರೋಗ ಇತ್ಯಾದಿ ರೋಗಗಳಮೇಲೆ ವೈದ್ಯರು ಯಶಸ್ವಿ ಚಿಕಿತ್ಸೆ ಮಾಡುತ್ತಾರೆ. ಬಿಲ್ವ, ಕುಟಜ, ಚಿರಾಯಿತ, ಸೋಮಲ, ಸುವರ್ಣ, ತಾಮ್ರ ಇತ್ಯಾದಿಗಳ ವೈದ್ಯಕೀಯ ಉಪಯೋಗವನ್ನು ಪಾಶ್ಚಿಮಾತ್ಯರು ಆಯುರ್ವೇದ ಪದ್ಧತಿಯಿಂದಲೇ ಕಲಿತುಕೊಂಡರು. "Plastic Surgery" ಯು ಆರ್ಯರದೇ ಇರುತ್ತದೆ. ಕಂಣಿನ ಎಷ್ಟೋ ಆಪ್‌ರೇಶನ್ನದ ಮೂಲ ತತ್ವಗಳನ್ನು ಪಾಶ್ಚಿಮಾತ್ಯರು ಸುಶ್ರುತದಿಂದಲೇ ಕಲಿತುಕೊಂಡರು. ಅಂದ ಮೇಲೆ ಇಂಥ ವಾದ ವಿವಾದದಲ್ಲಿಯೇ ವೇಳೆಗಳೆಯದೆ ಎಲ್ಲರೂ ಪ್ರಯತ್ನ ಮಾಡಿ [illegible] ಸುಸಂಪನ್ನ ಭಾರತೀಯ ವೈದ್ಯಕನನ್ನು ತಯಾರ ಮಾಡೋಣ. ಇದರಿಂದ ಯಾರಿಗೂ ಹಾನಿ ತಟ್ಟಲಿಕ್ಕಿಲ್ಲ. ಸನಾತನಿ ವೈದ್ಯರು ಇದರಿಂದ ಗಾಬರಿಯಾಗುವ ಕಾರಣವಿಲ್ಲ. ಆಯುರ್ವೇದದ ತತ್ವಗಳು ತ್ರಿಕಾಲಾಬಾಧಿತವಿರುತ್ತವೆ. ಸತ್ಯಕ್ಕೆ ಸಾವಿಲ್ಲ, ಅಸತ್ಯವಿದ್ದುದಕ್ಕೆ ನಾಶ ತಪ್ಪಿದ್ದಲ್ಲ. ಅಂತೂ ಆಯುರ್ವೇದಕ್ಕೆ ಹತ್ತಿದ ಜಂಗನ್ನು ತೆಗೆದು ಶುದ್ಧ ಸ್ವಚ್ಛ ಸ್ವರೂಪದಲ್ಲಿ ಆಯುರ್ವೇದವು ಜಗತ್ತಿನ ರಣರಂಗದಲ್ಲಿ ಬರಬೇಕು. ಭಾರತದ ಮೂವತ್ತುಮೂರು ಕೋಟಿ ಜನಸಾಮಾನ್ಯರ ಆರೋಗ್ಯ ಭಾಗ್ಯವೇ ನಮ್ಮ ಧ್ಯೇಯವು;

॥ उत्तिष्ठत जाग्रत प्राप्य वरान्निबोधत ॥

# ಗ್ರಂಥವಿಶೇಷ

ಈ ಪುಸ್ತಕವು ವೈದ್ಯ ಮಿತ್ರರಿಗೆ ಉತ್ತಮ ಗೆಳೆಯನಂತೆ ಅವರ ಅಡಚಣಿಯ ವೇಳೆಯಲ್ಲಿ ಉಪಯುಕ್ತವಾಗುವದು. ಅದರಂತೆ ಡಾಕ್ಟರರಿಂಗಾದರೂ ಇದರ ಉಪಯೋಗ ಚನ್ನಾಗಿ ಆಗುವದು. ಆಯುರ್ವೇದೀಯ ಔಷಧಗಳನ್ನು ಬೇರೆ ಬೇರೆ ಅವಸ್ಥೆಯಲ್ಲಿ ಹೇಗೆ ವಾಪರಿಸಬೇಕೆಂಬುದು ಗೊತ್ತಾಗುವದು. ಅವರಿಗಾಗಿ ಈ ಪುಸ್ತಕದಲ್ಲಿ ಎಷ್ಟೋ ಆಯುರ್ವೇದೀಯ ಔಷಧಗಳ ಯೋಜನೆಯನ್ನು [ಪ್ರಿಸ್ಕ್ರಿಪ್‌ಶನ್ಸ] ಕೊಟ್ಟಿದೆ. ಇಂಜೆಕ್ಶನ್ ಮಾಡುವದಾದರೆ ಅವುಗಳ ಗುಣದೋಷ ವಿವೇಚನವು ಇದರಲ್ಲಿಗೊತ್ತಾಗುವದು. ಈ ಗ್ರಂಥವು ಅತ್ಯಂತ ಸುಲಭ ಭಾಷೆಯಲ್ಲಿ ಬರೆಯಲ್ಪಟ್ಟದ್ದು ಅತ್ಯಂತ ಸಂಕ್ಷೇಪದಿಂದ ಬರೆದಿದ್ದೇವೆ. ಪ್ರತಿಯೊಂದುರೋಗದ ಮಹತ್ವದ ಲಕ್ಷಣಗಳನ್ನು [Key Symptoms] ಕೊಟ್ಟಿರುತ್ತೇವೆ. ಇದರಿಂದ ವೈದ್ಯರಿಗೆ ನಿದಾನ (Diagnosis) ಮಾಡಲಿಕ್ಕೆ ಅನುಕೂಲವಾಗುವದು. ಭೇದಕ ನಿದಾನ (Differential Diagnosis) ದಿಂದ ರೋಗ ಪರೀಕ್ಷೆ ಮಾಡಲಿಕ್ಕೆ ಸುಲಭವಾಗುವದು. ಚಿಕಿತ್ಸೆಯ ಪ್ರಾರಂಭದಲ್ಲಿ ಸುಲಭ ಔಷಧಗಳನ್ನು ಕೊಟ್ಟು ನಂತರ ಇಂಜೆಕ್ಶನ್ನುಗಳ ಮಾಹಿತಿ ಕೊಟ್ಟಿರುತ್ತೇವೆ ಮತ್ತು ಹೋಮಿಯೋಪಥಿ, ಬಾಯೋಕೆಮಿಸ್ಟ್ರಿ ಇತ್ಯಾದಿ ಪದ್ಧತಿಯೊಳಗಿನ ವಿಶೇಷ ಔಷಧಗಳನ್ನು ಕೊಟ್ಟಿದ್ದೇವೆ. **ಮೇ ಆ್ಯಂಡ ಬೇಕರ್ಸ,** ಬೂಟ್ಸ, ಝೇಂಡೂ, ಡಿಶ್ಯಾನ್ ಮೊದಲಾದ ದೇಶಿ ವಿದೇಶೀ ಕಂಪನಿಗಳ ಪೇಟೆಂಟ್ಸ ಆ ಆ ರೋಗದಲ್ಲಿ ವಿವರಿಸಿದ್ದೇವೆ. ಇದರಿಂದ ಹಳ್ಳಿಯ ವೈದ್ಯರಿಗೆ ಸಹ ದೊಡ್ಡ ದೊಡ್ಡ ರೋಗಗಳ ಚಿಕಿತ್ಸೆ ಮಾಡಲಿಕ್ಕೆ ಅನುಕೂಲವಾಗುವದು.

೧೯೩೩ನೇ ಇಸ್ವಿಯಿಂದ ವೈದ್ಯಕ ಅಭ್ಯಾಸವನ್ನು ಪ್ರಾರಂಭ ಮಾಡಿದ ನಂತರ ಇಲ್ಲಿಯವರೆಗೆ ಅಧ್ಯಯನ, ಅಧ್ಯಾಪನ ಮತ್ತು ಸ್ವಾನುಭವಗಳಿಂದ ಬಂದ ಅನುಭವಗಳನ್ನು ಈ ಗ್ರಂಥದಲ್ಲಿ ವಿವರಿಸಿದ್ದೇವೆ. ವೈದ್ಯಗುರು ದಾ. ಅ. ಹಲಸೀಕರ, ವೈದ್ಯ ಪಂಚಾನನ ಗಂಗಾಧರಶಾಸ್ತ್ರಿ ಗುಣೆ, ಡಾಕ್ಟರ ಅ. ವಿ. ಕೇತಕರ, M.B.B.S; ಗುರುವರ್ಯ ವೇಣೀ ಮಾಧವ ಶಾಸ್ತ್ರಿ ಆಯುರ್ವೇದಾಚಾರ್ಯ, ವೈದ್ಯ ವಿ. ಮ. ಗೋಗಟೆ, ಶ್ರೀ. ಡಾಕ್ಟರ ವಿ. ಕೃ. ಏಲಾಪೂರ, L.C.P.S., ಡಾ. ಈ. ಜೆ. ಬೋರ್ಜೇಸ್, L.R.C.P.

M.R C.S., ಡಾ. ಕಲ್ಲಿ ಸಿವ್ಹಿಲ್ ಸರ್ಜನ್ ಮೊದಲಾದ ಗುರುಗಳ ಚಿಕಿತ್ಸಾ ಪದ್ಧತಿಯ ಪರಿಣಾಮವು ಮತ್ತು ಸಂಸ್ಕಾರವು ಈ ಗ್ರಂಥದ ವಿಷಯದಮೇಲೆ ಅಲ್ಲಲ್ಲಿ ಕಂಡುಬರುವದು ಸ್ವಾಭಾವಿಕವೇ ಸರಿ. ಲೇಖಕನು ಸದರೀ ಮಹನೀಯರಿಗೆ ಅತ್ಯಂತ ಕೃತಜ್ಞನಾಗಿದ್ದಾನೆ. ಅನೇಕ ವೈದ್ಯ ಮಿತ್ರರ ಆಗ್ರಹದಮೂಲಕ ಕೆಲ ವಿದ್ಯಾರ್ಥಿ ಮಿತ್ರರ ಉತ್ತೇಜನದ ಮೂಲಕ ಈ ಗ್ರಂಥವನ್ನು ಬರೆಯಲಿಕ್ಕೆ ಪ್ರಾರಂಭಿಸಿದ್ದೇನೆ.

## ಗ್ರಂಥ ಪರಿಚಯ

ಪ್ರಸ್ತುತ ಗ್ರಂಥದಲ್ಲಿ ರೋಗಗಳ ವಿಸ್ತಾರವನ್ನು ಕೆಳಗೆ ಕಾಣಿಸಿದ ವಿಶಿಷ್ಟ ಕ್ರಮದಿಂದ ಮಾಡಲ್ಪಟ್ಟದೆ.

೧] **ಸಾಮಾನ್ಯ ವರ್ಣನೆ:–** ಇದರಲ್ಲಿ ರೋಗಗಳ ಹೆಸರಿನ ವಿಚಾರ, ಅದೇ ಪ್ರಕಾರ ವಿಶಿಷ್ಟ ಇತಿಹಾಸ, ಅಥವಾ ಇನ್ನೂ ಕೆಲವು ಉಪಯುಕ್ತ ವಿಷಯದ ಪರಾಮರ್ಶವು ಕಂಡುಬರುವದು.

೨] **ಕಾರಣ ಮೀಮಾಂಸೆ** (Etiology) :– ಯಾವ ಕಾರಣಗಳಿಂದ ರೋಗೋತ್ಪತ್ತಿಯಾಗುವದೋ ಆ ಕಾರಣಗಳ ವಿಚಾರವನ್ನು ಇದರಲ್ಲಿ ಬರೆಯಲ್ಪಟ್ಟದೆ. ಕ್ರಿಮಿಗಳ ವಿಚಾರ ಮತ್ತು ಇತರ ಪರಿಸ್ಥಿತಿಯ ವಿಚಾರವೂ ಇದರಲ್ಲಿರುವದು.

೩] **ಕಾಲಸಂಪ್ರಾಪ್ತಿ** (Incubation period) :– ಶರೀರದಲ್ಲಿ ರೋಗ ಜಂತುಗಳ ಪ್ರವೇಶವಾದ ನಂತರ ರೋಗದ ಸ್ವರೂಪ ಕಂಡುಬರುವ ತನಕ ನಡುವಿನ ಕಾಲಾವಧಿಗೆ ಕಾಲಸಂಪ್ರಾಪ್ತಿಯೆನ್ನಬಹುದು. ಉದಾ:– ಕೆಟ್ಟನೀರು ಕುಡಿಯುವದರಿಂದ ಕಾಲರಾ ಕ್ರಿಮಿಗಳು ಶರೀರದಲ್ಲಿ ಹೊಕ್ಕು ಕಾಲರಾ ಪ್ರಾರಂಭವಾಗುವವರೆಗೆ ಎಷ್ಟು ವೇಳೆ ಬೇಕಾಗುತ್ತದೆಯೋ ಅದಕ್ಕೆ ಕಾಲಸಂಪ್ರಾಪ್ತಿಯೆಂದು ಅನ್ನುತ್ತಾರೆ.

೪] **ಸಂಪ್ರಾಪ್ತಿ** (Pathology) :– ಪೆಥಾಲಾಜಿ ವಾತ, ಪಿತ್ತಾದಿ ದೋಷಗಳು ಸ್ವಕಾರಣಗಳಿಂದ ಪ್ರಕುಪಿತವಾಗಿ ಸ್ವಂತ ಸ್ಥಾನವನ್ನು ಬಿಟ್ಟು ರೋಗೋತ್ಪತ್ತಿ ಮಾಡುತ್ತವೆ. ಇದಕ್ಕೆ ಸಂಪ್ರಾಪ್ತಿಯೆಂದು ಅನ್ನುತ್ತಾರೆ.

೫] **ಲಕ್ಷಣ** ಮತ್ತು **ಭಾವನೆಗಳು** (Signs & Symptoms):– ಬೇನೆಗಳಲ್ಲಿ ವೈದ್ಯ ಡಾಕ್ಟರರಿಗೆ ಕಂಡುಬರುವ ಚಿನ್ಹಗಳಿಗೆ ಲಕ್ಷಣ

ವೆನ್ನುತ್ತಾರೆ. ಉದಾ:- ನಾಲಿಗೆ ಕಪ್ಪಾಗುವದು, ಕಂಣುಗಳು ಕೆಂಪು ಆಗುವದು, ನಾಡಿ ಮಂದ ಅಥವಾ ತೀವ್ರವಾಗುವದು ಇತ್ಯಾದಿ. ಮಾನಸಿಕ ಲಕ್ಷಣಗಳಿಗೆ ಭಾವನಾ ಎನ್ನುತ್ತಾರೆ. ಉದಾ:- ತಲೆಶೂಲೆ, ನೀರಡಿಕೆ, ಬವಳಿ ಬರುವದು ಮುಂತಾದವುಗಳು.

೬] **ಉಪದ್ರವ** (Complications) :— पश्चात्जाता उपद्रवा: ಒಂದು ರೋಗದಲ್ಲಿ ಮತ್ತೊಂದು ರೋಗವು ಕೂಡುವದು. ಅಡ್ಡಬೇನೆ, ಉದಾ:- ಜ್ವರದಲ್ಲಿ ಭೇದಿ, ಕೆಮ್ಮು ಮೊದಲಾದ ಬೇನೆಗಳಾಗುವದು.

೭] **ರೋಗ ನಿದಾನ** (Diagnosis) :— ಇದರಲ್ಲಿ ರೋಗ ಪರೀಕ್ಷೆಯ ಸಮ್ಮಂಧಿ ವಿಚಾರ ಮಾಡಿದೆ.

೮] **ಭೇದಕ ನಿದಾನ** (Differential diagnosis) :— ಇದರಿಂದ ಒಂದು ರೋಗಕ್ಕೆ ಮತ್ತೊಂದು ರೋಗದ ವ್ಯತ್ಯಾಸವು ಕಂಡು ಬರುವದು.

೯] **ಸಾಧ್ಯಾಸಾಧ್ಯತ್ವ** (Prognosis): — ಇದರಲ್ಲಿ ಯಾವ ರೋಗವು ಸಾಧ್ಯವದೆ, ಯಾವ ರೋಗ ಅಸಾಧ್ಯವದೆ ಎಂಬುದರ ವಿವೇಚನವನ್ನು ಕೊಟ್ಟಿದ್ದೇವೆ.

೧೦] **ದೋಷ ದೂಷ್ಯ ವಿಚಾರ** ಮತ್ತು **ಸ್ಥಾನ ಸಂಶ್ರಯ.**

೧೧] **ಚಿಕಿತ್ಸಾ**(Treatment) :—ಇದರಲ್ಲಿ ಮೊದಲು ಆಯುರ್ವೇದೀಯ ಔಷಧಗಳನ್ನು ವಿವರಿಸಿ, ನಂತರ ಆಯುರ್ವೇದಿಕ ಇಂಜೆಕ್ಶನ್ನುಗಳನ್ನು ಕೊಟ್ಟಿದ್ದೇವೆ. ಆ ಮೇಲೆ ಆ್ಯಲೋಪಥಿಕ ಔಷಧಗಳನ್ನು ಮತ್ತು ಇಂಜೆಕ್ಶನ್ನುಗಳನ್ನು ಬರೆದಿದ್ದೇವೆ. ಕೊನೆಗೆ .ಹೋಮಿಯೋಪಥಿ, ಬಾಯೋಕೆಮಿಕ್ ಮೊದಲಾದ ಪದ್ಧತಿಯ ಔಷಧಗಳನ್ನು ಕೊಟ್ಟು ಮೇ ಆ್ಯಂಡ್ ಬೇಕರ್ಸ, ಬೂಟ್ಸ, ಝೋಂಡೂ, ಡಿಶ್ಯಾನ್ ಮುಂತಾದ ದೇಶಿ-ವಿದೇಶಿ ಕಂಪನಿಗಳ ಪೇಟೆಂಟ ಔಷಧಗಳ ವರ್ಣನೆಯನ್ನು ಮಾಡಿದ್ದೇವೆ.

೧೨] **ಪಥ್ಯಾಪಥ್ಯ**:— ಇದರಲ್ಲಿ ರೋಗಿಯು ಯಾವ ಆಹಾರವನ್ನು ತಕ್ಕೊಳ್ಳಬೇಕು, ಯಾವ ಆಹಾರವನ್ನು ತಕ್ಕೊಳ್ಳಬಾರದು ಎಂಬುದರ ವಿಚಾರವನ್ನು ಕೊಟ್ಟಿದ್ದೇವೆ,

# ಜ್ವರನಿದಾನ ಮತ್ತು ಚಿಕಿತ್ಸೆ

ಜ್ವರಗಳ ವ್ಯಾಪಕ ಮತ್ತು ಭಯಾನಕ ಸ್ವರೂಪವನ್ನು ಲಕ್ಷಕ್ಕೆ ತೆಗೆದುಕೊಂಡು ಪ್ರಾರಂಭದಲ್ಲಿ ಜ್ವರಗಳ ವಿಚಾರವನ್ನು ಮಾಡಿದೆ. ಮೊದಲ ಎಲ್ಲರ ಅತ್ಯಂತ ಪರಿಚಿತ ಚಳಿಜ್ವರದ ವಿಚಾರವನ್ನು ಮಾಡೋಣ—

## (1) ಶೀತಪೂರ್ವಕ ಜ್ವರ (Malaria)

೧ ಸಾಮಾನ್ಯ ವರ್ಣನೆ:– ಇದರಲ್ಲಿ ಚಳಿ ಬಂದು ಜ್ವರಬರುತ್ತವೆ. ಇದು ವೈಯಕ್ತಿಕ ಅಥವಾ ಪಿಡಗುರೂಪಿನಿಂದ ಬರುವದು. ಮಲ್ನಾಡ, ಬಂಗಾಲ, ಆಸಾಮ ಇತ್ಯಾದಿ ತಂಪು ಮತ್ತು ನೀರು ಹೆಚ್ಚು ಇದ್ದ ಪ್ರದೇಶ ದಲ್ಲಿಯೂ ಮತ್ತು ಕಬ್ಬು, ತೇಗು ಬೆಳೆಯುವ ಪ್ರದೇಶದಲ್ಲಿಯೂ ಇದು ವಿಶೇಷವಾಗಿ ಕಂಡುಬರುವದು. ಪ್ರತಿವರ್ಷ ಈ ಜ್ವರದಿಂದ ಲಕ್ಷಾವಧಿ ಜನರು ಬಳಲುತ್ತಾರೆ.

೨ ಕಾರಣ ಮೀಮಾಂಸೆ (Etiology) ಮಲೇರಿಯಾದ ವಿಶಿಷ್ಟ ಜಂತುಗಳು (Malarial Parasites) ಈ ಜ್ವರದ ಮುಖ್ಯ ಕಾರಣ ವಿರುತ್ತದೆ. ಎನಾಫೆಲಿಸ್ ಎಂಬ ಹೆಣ್ಣು ಜಾತಿಯ ಗುಂಗಾಡು ಕಡಿದನಂತರ ಈ ಕ್ರಿಮಿಗಳು ರಕ್ತದಲ್ಲಿ ಪ್ರವೇಶಮಾಡಿ ಜ್ವರವನ್ನು ಹುಟ್ಟಿಸುತ್ತವೆ.

### ಆಯುರ್ವೇದ ವಿಚಾರಸರಣಿಯ ವಿಶೇಷ

ಸೊಳ್ಳೆಗಳು ಕಚ್ಚಿದವರಿಗೆಲ್ಲಾ ಚಳಿಜ್ವರ ಬಂದೇಬರುತ್ತದೆಂಬುದಿಲ್ಲ. ಮನುಷ್ಯ ದೇಹದಲ್ಲಿರುವ ನೈಸರ್ಗಿಕ ಪ್ರತೀಕಾರ ಶಕ್ತಿಯೇ ಇದಕ್ಕೆ ಕಾರಣ ವಾಗಿದೆ. ಅಂತೇ ಆಯುರ್ವೇದದಲ್ಲಿ "ವಿಕಾರೋ ಧಾತು ವೈಷಮ್ಯಂ" ಧಾತುಗಳ ವೈಷಮ್ಯವನ್ನೇ ವಿಕಾರವೆನಬೇಕು ಎಂದು ಹೇಳಿದೆ. ಶರೀರದಲ್ಲಿ ವಿಕಾರ ಉತ್ಪನ್ನವಾಗದೆ ಅಂದರೆ ದೋಷ ವಾತ, ಪಿತ್ತ, ಕಫ, ದೂಷ್ಯ ಸಪ್ತಧಾತುಗಳಲ್ಲಿ ವಿಕಾರ ಉಂಟಾಗದೆ ರೋಗಗಳು ಹುಟ್ಟುವದಿಲ್ಲ. ಕೆಲವು ಪುರಾಣಮತವಾದಿಗಳಾದ ವೈದ್ಯರು ಕ್ರಿಮಿಗಳ ಅಸ್ತಿತ್ವವನ್ನೇ ಒಪ್ಪಲು ಸಿದ್ಧರಿಲ್ಲ. ಆದರೆ ಅದೇನೂ ಯೋಗ್ಯವೆನಿಸದು. ಉದಾ:– ಶುದ್ಧ ಪ್ರಕೃತಿಯ ಹೆಣ್ಣನ್ನು ಹೋದವರಿಗೆ ಗರ್ಮಿ, ಪರಮಾ ಮೊದಲಾದ ರೋಗಗಳಾಗುವ ದಿಲ್ಲ. ಆದರೆ ಆತನೇ (ತನ್ನ ದೋಷಧಾತುಗಳು ಸಮಸ್ಥಿತಿಯಲ್ಲಿದ್ದಾಗ)

ಕೆಟ್ಟ ಹೆಂಣನ್ನು ಹೋದರೆ ಮೇಲಿನ ರೋಗಗಳುಂಟಾಗುತ್ತವೆ. ಇಂಥಲ್ಲಿ ಕ್ರಿಮಿಗಳನ್ನು ರೋಗದ ಕಾರಣವೆಂದು ಒಪ್ಪಲೇ ಬೇಕಾಗುತ್ತದೆ. ಆದ್ದರಿಂದ ಕ್ರಿಮಿಗಳು ಮತ್ತು ಬೇರೆ ಕಾರಣ ಅಂದರೆ, ವಾತವೇ ಮೊದಲಾದ ತ್ರಿದೋಷ ಗಳು ಮತ್ತು ರಸ ರಕ್ತಾದಿ ಸಪ್ತ ಧಾತುಗಳಲ್ಲಿ ವಿಕೃತಿ ಯಾಗುವದು, ಇವೆ ರಡೂ ಕಾರಣಗಳು ಅತಿ ಮಹತ್ವದವಾಗಿವೆ.

ಬೀಜ ಶ್ರೇಷ್ಠವೋ ಕ್ಷೇತ್ರ ಶ್ರೇಷ್ಠವೋ ಎಂದು ವಾದಿಸುವಲ್ಲಿ ಹುರುಳೇನು? ಫಲಕ್ಕೆ ಎರಡೂ ಅಷ್ಟೇ ಮಹತ್ವದವು. ಪಡುವಣದವರು ಕ್ರಿಮಿ ಶಾಸ್ತ್ರದಲ್ಲಿ ಬಹಳ ಮಹತ್ವದ ಅಪೌಲ್ಯ ಶೋಧ ಮಾಡಿದ್ದಾರೆ. ಅಲ್ಲದೆ ಅದರ ಮೇಲೆ ಸಲ್ಫಾಡ್ರಗ್ಸ್, **ಪೆನಿಸಿಲಿನ್**, ಸ್ಟ್ರೆಪ್ಟೊಮೈಸಿನ್ ಮೊದಲಾದ ಒಳ್ಳೇ ಪ್ರಭಾವೀ ಔಷಧಗಳನ್ನೂ ಕಂಡುಹಿಡಿದಿದ್ದಾರೆ. ಇದೆಲ್ಲ "ಮಿಥ್ಯಾ" ಸುಳ್ಳೆಂದು ದುರ್ಲಕ್ಷಿಸಿದರೆ ಆಯುರ್ವೇದಿಕರು ಜಗತ್ತಿನಲ್ಲಿ ಹಿಂದುಳಿಯುವದು ಖಂಡಿತ. ಇದೆಲ್ಲವನ್ನೂ ಕೈಗೂಡಿಸಿಕೊಂಡುದುದಲ್ಲದೆ ಆಯುರ್ವೇದ ಪದ್ಧತಿಯಂತೆ ಹೊಸ ಸಂಶೋಧನೆ ಮಾಡುವದು ಇಂದಿನ ಸ್ವತಂತ್ರ ಭಾರತಕ್ಕೆ ಅಗತ್ಯದ ಕೆಲಸವಾಗಿದೆ.

ಕ್ರಿಮಿ ಶಾಸ್ತ್ರವನ್ನು ಅಧ್ಯಯನ ಮಾಡುವಲ್ಲಿ ಕುರುಡು ನಂಬಿಗೆ ತಕ್ಕದ್ದಲ್ಲ. ಒಂದು ವಿಶಿಷ್ಟ ಮಟ್ಟದವರೆಗೆ ಕ್ರಿಮಿಗಳಿಗೆ ಮಹತ್ವವಿದೆ, ಹೀಗೆಂದು ಬರೇ ಕ್ರಿಮಿಗಳ ಬೆನ್ನೇಹತ್ತಿದರೂ ಸಾಲದೆಂಬದನ್ನು ಪಶ್ಚಿಮ ದವರು ಒಪ್ಪಿಕೊಳ್ಳುತ್ತಾರೆ. ಇಂಥಲ್ಲಿ ನಮಗೆ ತ್ರಿಕಾಲಾಬಾಧಿತವಾದ ಆಯುರ್ವೇದದ ತತ್ವಗಳೇ ದಾರಿತೋರಬಲ್ಲವು. ಅಂತೂ ಹಲವಾರು ರೋಗ ಗಳಲ್ಲಿ ಕ್ರಿಮಿಗಳ ಸಂಬಂಧ ಬಂದಿದೆ ಎಂದು ಗಾಬರಿಗೊಳ್ಳಬೇಕಾಗಿಲ್ಲ. ಮೇಲಿನ ವಿವೇಚನೆಯಂತೆ ಬೀಜ ಹಾಗೂ ಕ್ಷೇತ್ರಗಳ ಸರಿಯಾದ ವಿಚಾರ ಮಾಡಿದರೆ ಚಿಕಿತ್ಸೆ ಮಾಡುವಲ್ಲಿ ತೊಂದರೆಯಾಗಲಿಕ್ಕಿಲ್ಲ.

## ಕಾಲ ಸಂಪ್ರಾಪ್ತಿ

ಸೊಳ್ಳೆಗಳು ಕಚ್ಚಿದ ೩-೪ ದಿನಗಳ ನಂತರ ಜ್ವರಕ್ಕೆ ಆರಂಭ ವಾಗುತ್ತದೆ. ಒಮ್ಮೊಮ್ಮೆ ೧೦-೧೨ ದಿನಗಳ ಮೇಲೂ ಜ್ವರ ಬರಬಹುದು.

## ಪ್ರಕಾರಗಳು

ಆಯುರ್ವೇದದಲ್ಲಿ ಕೊಟ್ಟಿರುವ ವಿಷಮ ಜ್ವರದ ಪ್ರಕಾರಗಳು ಚಳಿ ಜ್ವರಕ್ಕೆ ತುಂಬಾ ಹೋಲುತ್ತವೆ.

೧] **ಸತತ:**– "ಸತತಃ ಅವಿಸರ್ಗೀಸ್ಯಾತ್" ಯಾವಾಗಲೂ ಬಿಡದೇ ಬರುವ ಜ್ವರ, ಯಾವಾಗಾದರೊಮ್ಮೆ ತುಸು ಬೆವರು ಬರುತ್ತದೆ, ಚಳಿ ಹತ್ತುತ್ತಲೇ ಇರುತ್ತದೆ.

೨] **ಸಂತತ:**– "ದ್ವೌಕಾಲಾನುವರ್ತತೆ" ದಿನಾಲು ಎರಡು ವೇಳೆ ಚಳಿಯಾಗಿ ಜ್ವರ ಬರುತ್ತದೆ, ಬೆವರು ಬಂದು ಜ್ವರ ಬಿಡುತ್ತದೆ.

೩] **ತೃತೀಯಕ:**– "ತೃತೀಯಕಃ ತೃತಿಯೇಽನ್ಹಿ" ಒಂದು ದಿನ ಕಳೆದು ಬರುವ ಜ್ವರಕ್ಕೆ ತೃತೀಯಕ ಜ್ವರವೆಂದು ತಿಳಿಯಬೇಕು.

೪] **ಚಾತುರ್ಥಿಕ:**– "ಚತುರ್ಥಕಃ ಚತುರ್ಥೇ ಅನ್ಹಿ" ನಾಲ್ಕನೇ ದಿನಕ್ಕೆ ಬರುವ ಜ್ವರ ಚಾತುರ್ಥಿಕ.

೫] **ಚಾತುರ್ಥಿಕ ವಿಪರ್ಯಯ:**– "ಆದಾವಂತೇ ಚ ಮುಂಚತಿ" ಎರಡು ದಿನ ಜ್ವರ ಬಂದು ನಡುವೆ ಒಂದು ದಿನ ಜ್ವರ ಬರುವದಿಲ್ಲ, ಇದಲ್ಲದೆ ಚಳಿ ಜ್ವರಗಳಲ್ಲಿ ಸನ್ನಿಪಾತದ ಲಕ್ಷಣಗಳೂ ಕಾಣಿಸಿ ಕೊಳ್ಳುತ್ತವೆ. ಉದಾ:– ವಾಂತಿ, ಅತಿಸಾರ, ಭ್ರಮೆ, ಬಡಬಡಿಕೆ, ಮೂರ್ಛೆ ಮೊದಲಾದವು. ಈ ಪ್ರಕಾರವು ಒಳ್ಳೇ ಭಯಂಕರವಾಗಿದ್ದು, ಇದರಲ್ಲಿ ಮರಣವುಂಟಾಗುತ್ತದೆ.

ಅ್ಯಲೋಪಥಿಯಲ್ಲಿ ಈ ಭೇದಗಳಿಗೆ ಬಿನಾಯನ್ ಅಥವಾ ಸಿಂಪಲ್ ಟರ್ಶಿಯನ್, ಕ್ವಾರ್ಟನ್, ಕ್ವೊಟಿಡಿಯನ್, ಮಲಿಗ್ನಂಟ, ಸೆರೆಬ್ರಲ್ ಮಲೇರಿಯಾ ಮುಂತಾದ ಹೆಸರುಂಟು. ಚಾತುರ್ಥಿಕ ವಿಪರ್ಯಯದ ಹೆಸರನ್ನು ಮಾತ್ರ ಇಲ್ಲಿ ಎತ್ತಿದಂತಿಲ್ಲ.

**ಸಂಪ್ರಾಪ್ತಿ:**—ಮೊದಲು ರಕ್ತದಲ್ಲಿ ಕ್ರಿಮಿಗಳು ಹೊಕ್ಕನಂತರ ಅವು ರಕ್ತ ಗೋಲಕಗಳಲ್ಲಿ ಪ್ರವೇಶ ಮಾಡುತ್ತವೆ. ಅಲ್ಲಿ ಅವುಗಳ ಬೆಳೆವಣಿಗೆಯಾಗುತ್ತದೆ. ಮತ್ತು ೪೮ ತಾಸುಗಳ ನಂತರ ಅಥವಾ ೪೮–೭೨ ತಾಸುಗಳಲ್ಲಿಯೂ ವಿಭಾಜನ [ಸೆಲ್ ಡಿವ್ಹಿಜನ್] ಪದ್ಧತಿಗನುಸರಿಸಿ ಒಂದೊಂದು

ಕ್ರಿಮಿಗೆ ೧೮ ರಿಂದ ೨೦ ರ ವರಿಗೆ ಕ್ರಿಮಿಗಳು ಉಂಟಾಗುತ್ತವೆ. ಆ ಮೇಲೆ ಅವು ರಕ್ತಗೋಲಗಳ ಆವರಣವನ್ನೊಡೆದು ಮತ್ತೆ ರಕ್ತದಲ್ಲಿ ಕೂಡಿಕೊಳ್ಳುತ್ತವೆ. ಕ್ರಿಮಿಗಳೊಡನೆಯೇ ಅವುಗಳ ಗರ [ಕ್ರಿಮಿಗಳ ಮಲಮೂತ್ರ] ದೋಷ [ಟಾಗ್‌ಝಿನ್] ವೂ ರಕ್ತದಲ್ಲಿ ಕೂಡುವದರಿಂದ ಚಳಿಯಾಗಿ ಜ್ವರ ಬರುತ್ತವೆ. ಕ್ರಿಮಿಗಳ ಪ್ರಭೇದಕ್ಕೆ ಅನುಸರಿಸಿ ಆ ಪ್ರಮಾಣದಂತೆ ೨೪-೪೮ ಅಥವಾ ೭೨ ತಾಸುಗಳಲ್ಲಿ ಚಳಿಜ್ವರಕ್ಕೆ ಆರಂಭವಾಗುತ್ತದೆ. ಈ ಕ್ರಿಮಿಗಳು ಒಳ್ಳೇ ನಿಯಮಿತತನ [ರೆಗ್ಯುಲರ] ವುಳ್ಳವುಗಳಾಗಿವೆ. ಇವಕ್ಕೆ ಬೇಸರ ಅಥವಾ ವೈಗಳ್ಳತನ ಗೊತ್ತಿಲ್ಲ! ಇದರಿಂದಾಗಿ ಚಳಿಯು ಹೊತ್ತಿಗೆ ಸರಿಯಾಗಿಯೇ ಬರುತ್ತದೆ. ಒಮ್ಮೆ ಚಳಿ ಬಂದವೆಂದರೆ ಸಾವಿರಾರು ರಕ್ತ ಕಣಗಳ ವಿಧ್ವಂಸವಾಗಿ ಹೋಗುತ್ತದೆ. ಅಂತೆಯೇ ಚಳಿಜ್ವರದಲ್ಲಿ ರಕ್ತಕ್ಷಯವು ಬಹಳ ಬೇಗನೇ ಉಂಟಾಗುತ್ತದೆ. ಮತ್ತು ಪಾಂಡುರೋಗ, ಕಾಮಣಿ, ಮೊದಲಾದ ಉಪದ್ರವಗಳೂ ತಲೆದೋರುತ್ತವೆ.

**ಲಕ್ಷಣಗಳು ಮತ್ತು ಭಾವನೆ [ಸಾಯಿನ್ಸ್ ಆ್ಯಂಡ ಸಿಮ್‌ಟಮ್ಸ್]**

**೧ ಚಳಿಯಾಗೋಣ:**—ದೊಡ್ಡಕಾಗಿ ಚಳಿಯಾಗೋಣ. ಆಗ ಬೆನ್ನು ಹುರಿ ಹಾಗೂ ಎಲವುಗಳು ನೋಯುತ್ತವೆ. ಕೈಕಾಲುಗಳು ಬಳಬಳ ಎನ್ನುತ್ತವೆ. [ಹಳೇ ತರಹಕ್ಕೆ ಬಿದ್ದ ಹಾಗೆ ಗೊತ್ತಾದ ಹೊತ್ತಿಗೆ ಮೈಗೆ ಮುಳ್ಳು ಬರುತ್ತವೆ. ಇನ್ನುಳಿದ ಲಕ್ಷಣಗಳು ಹೆಚ್ಚಾಗಿರುವದಿಲ್ಲ] ಈ ಸ್ಥಿತಿ ಸುಮಾರು ೧-೨ ತಾಸುಗಳವರೆಗೆ ಇರುತ್ತದೆ.

**೨) ಜ್ವರ:**—ತುಂಬಾ ಜ್ವರಗಳು ತುಂಬುತ್ತವೆ. [೧೦೩ ರಿಂದ ೧೦೫ ಡಿಗ್ರಿ] ಒಮ್ಮೊಮ್ಮೆ ೧೦೭ ರ ವರೆಗೂ ಜ್ವರ ಏರಿದ ಉದಾಹರಣೆಗಳು ಉಂಟು. [ಇಂಥ ವೇಳೆಯಲ್ಲಿ ರೋಗಿಯು ಎಚ್ಚರತಪ್ಪುತ್ತಾನೆ] ಈ ಜ್ವರಗಳ ಅವಸ್ಥೆ ೩ ರಿಂದ ೪ ತಾಸುಗಳ ವರೆಗೆ ಇರುತ್ತದೆ.

**೩) ಸ್ವೇದ:**—ಆ ಮೇಲೆ ಝೋರನೆ ಬೆವೆತು ಜ್ವರಗಳು ಆರುತ್ತವೆ. [ಈ ವೇಳೆಯಲ್ಲಿಯೇ ರೋಗಿಗೆ ತಾನು ಆರೋಗ್ಯವಾಗಿದ್ದೇನೆಂದು ಕಂಡು ಅಪಥ್ಯ ಮಾಡುವ ದುರ್ಬುದ್ಧಿ ಉಂಟಾಗುತ್ತದೆ. ಬಾಯಿಗೆ ರುಚಿ ಇರುವದಿಲ್ಲ. ಇದರಿಂದಾಗಿ ಕರಿದ, ಹುಳಿ, ಕಾರದ ಪದಾರ್ಥಗಳನ್ನು ತಿನ್ನುತ್ತಾನೆ. ಅದರಿಂದ ಯಕೃತ್ ಮತ್ತಷ್ಟು ಕೆಟ್ಟು ಕಾಮಣಿ, ಉದರ, ಮೈಯಲ್ಲಾ

ಬಾವು, (ಡ್ರಾಪ್ಸಿ) ಕ್ಷಯ, ಮುಂತಾದ ವಿಕಾರಗಳಾಗಿ ರೋಗಿಯು ಸತ್ತ ಉದಾಹರಣೆ ನೂರಾರುಂಟು] ಇದಲ್ಲದೆ ವಾಂತಿ, ಭೇದಿ, ತಲೆ ಶೂಲೆ, ತಲೆ ತಿರುಗುವಿಕೆ, ಬಡಬಡಿಕೆ, ಬಾಯಿ ಕಹಿಯಾಗುವಿಕೆ, ನೀರಡಿಕೆಯೇ ಮುಂತಾದ ಲಕ್ಷಣಗಳೂ ಕಾಣಿಸಿಕೊಳ್ಳುತ್ತವೆ.

## ಉಪದ್ರವಗಳು [ಕಾಂಪ್ಲಿಕೇಶನ್ಸ]

**ಪ್ಲೀಹವೃದ್ಧಿ**, ಯಕೃತ್ ವೃದ್ಧಿ, ಪಾಂಡು, ಕಾಮಲಾ, ರಕ್ತ ಮೂತ್ರ, ಉದರ, ಮೈಯಲ್ಲಾ ಬಾವು, ಕ್ಷಯ ಇತ್ಯಾದಿಗಳು.

## ನಿದಾನ ಹಾಗೂ ಭೇದಕ ನಿದಾನ

## [ ಡಾಯಗ್ನೋಸಿಸ್ ಹಾಗೂ ಡಿಫ್ರೆನ್ಶಿಯಲ್ ಡಾಯಗ್ನೋಸಿಸ್]

ವ್ಯಕ್ತ ಲಕ್ಷಣಗಳ ಚಳಿಜ್ವರದ ನಿದಾನ ಮಾಡುವದು ತೀರ ಸುಲಭ. ತನಗೆ ಚಳಿಜ್ವರ ಬಂದಿರುವದನ್ನು ರೋಗಿಯು ತನ್ನ ಬಾಯಿಂದ ತಾನೇ ಹೇಳುತ್ತಾನೆ. ಆದರೆ ಲಕ್ಷಣಗಳು ಅವ್ಯಕ್ತವಾಗಿದ್ದಾಗ ನಿದಾನ ಮಾಡುವದು ಒಳ್ಳೇ ತೊಡಕಿನದಾಗಿರುತ್ತದೆ. ಇಂಥ ವೇಳೆಯಲ್ಲಿ ಸಾಧ್ಯವಿದ್ದರೆ ರಕ್ತವನ್ನು ಪರೀಕ್ಷಿಸಿಕೊಳ್ಳಬೇಕು. ಹಳ್ಳಿಗಳಲ್ಲಿ ರಕ್ತ ಪರೀಕ್ಷೆ ಅಸಾಧ್ಯವಾಗಿದ್ದಾಗ ಉಪಶಯ–ಅನುಪಶಯ, ಪದ್ಧತಿಯಿಂದ ರೋಗ ನಿದಾನ ಮಾಡಬೇಕು.

ಶರೀರದಲ್ಲಿ ಅಂತರ ವಿದ್ರಧಿ ಅಥವಾ ಮತ್ತೆಲ್ಲಿಯಾದರೂ ಕೀವಾಗುವಕ್ರಿಯೆ [ಪಸ್‌ಫಾರ್‌ಮೇಶನ್] ಯಾಗುತ್ತಿದ್ದಾಗಲೂ ಚಳಿಯಾಗಿ ಜ್ವರ ಬರುತ್ತಿದೆ. ಆದರೆ ಅದು ಮಲೇರಿಯಾ ಜ್ವರವಲ್ಲವೆಂಬದನ್ನು ಚೆನ್ನಾಗಿ ತಿಳಿದಿರಬೇಕು. ಅಜ್ಞಾನದಿಂದ ಇಂಥಲ್ಲಿ ಕ್ವಿನಾಯಿನ್ ಕೊಡುವದರಿಂದ ಅದೆಷ್ಟೋ ದುಷ್ಪರಿಣಾಮುಗಳನ್ನು ಭೋಗಿಸಬೇಕಾಗುತ್ತದೆ.

ಸಾನ್ನಿಪಾತಿಕ (ಸೆರೆಬ್ರಲ್) ಮಲೇರಿಯಾದಲ್ಲಿ ಮಸ್ತಿಷ್ಕಾವರಣ ಶೋಥ [ಮೆನಿಂಜಾಯಟಿಸ್] ದ ಚಿಕಿತ್ಸೆ ಮಾಡಲ್ಪಟ್ಟು, ರೋಗಿ ಕೈ ಬಿಡುತ್ತಾನೆ.

ಆಂತ್ರಿಕ [ಕಾಲೇರಿಕ್] ಮಲೇರಿಯಾ ದಲ್ಲಿ ಕಾಲರಾದ ಲಕ್ಷಣಗಳಿರುತ್ತವೆ. ಇದರಲ್ಲಿ ಮಲವನ್ನು ಪರೀಕ್ಷಿಸಿದಾಗ ಅದರಲ್ಲಿ ಮಲೇರಿಯಾದ ಕ್ರಿಮಿಗಳು ಕಂಡು ಬರುತ್ತವೆ.

ಅವ್ಯಕ್ತ ಲಕ್ಷಣದ ಮತ್ತೊಂದು ಪ್ರಕಾರದಲ್ಲಿ ತುಸು ಚಳಿಯಾಗಿ ವಾಂತಿ ಬಹಳವಾಗುತ್ತದೆ. ಮೂಗು ಒಡೆದು ರಕ್ತ ಬಹಳವಾಗಿ ಹೋಗುತ್ತದೆ. ಹೆಚ್ಚಾಗಿ ಜ್ವರವಿರುವದೇ ಇಲ್ಲ. ಇಂಥಲ್ಲಿ ರೋಗಿಗೆ ಶೀತಜ್ವರ (ಮಲೇರಿಯಾ) ದ ಉಪಚಾರದಿಂದ ಗುಣವಾಗುತ್ತದೆ.

## ಸಾಧ್ಯಾಸಾಧ್ಯತ್ವ (ಪ್ರಾಗ್ನಾಸಿಸ್)

ಸರಿಯಾದ ಚಿಕಿತ್ಸೆಯಿಂದ ಮಲೇರಿಯಾ ಜ್ವರವನ್ನು ಪೂರಾ ಗೆಲ್ಲಬಹುದು. ಅಪಥ್ಯದಿಂದ ತಿರುತಿರುಗಿ ಜ್ವರಬರುತ್ತದೆ. ತಿರುಗಿ ಬಂದ (ರಿಲ್ಯಾಪ್ಸ) ಜ್ವರದ ಚಿಕಿತ್ಸೆ ಕಠಿಣವಾಗುತ್ತದೆ. ಸಾನ್ನಿಪಾತಿಕ ಚಳಿಜ್ವರ ಕಷ್ಟಸಾಧ್ಯವೆಂದರಿಯಬೇಕು.

## ದೋಷ ದೂಷ್ಯ ವಿಚಾರ

ಇದರಲ್ಲಿ ವಾತ ಹಾಗೂ ಪಿತ್ತ ದೋಷಗಳ ದುಷ್ಟಿಯಾಗಿರುತ್ತದೆ. ಹಾಗೆಯೇ ಪಿತ್ತಾಶ್ರಯೀ ರಕ್ತಧಾತುವು ಕ್ಷೀಣವಾಗಿರುತ್ತದೆ. ಹಳೇ (ಕ್ರಾನಿಕ್) ವಿಕಾರದಲ್ಲಿ ರಸ, ಮಾಂಸ, ಶುಕ್ರ ಮೊದಲಾದ ಧಾತುಗಳು ಕ್ಷೀಣವಾಗುತ್ತವೆ.

# ಚಿಕಿತ್ಸೆ

**ಆಯುರ್ವೇದೀಯ:—** ಪ್ರಾರಂಭಕ್ಕೆ ತ್ರಿಫಳಾ ೧ ಮಾಸಿ, ಘೋಡಾಚೋಳಿ ೨ ಗುಂ., ಸ್ವಾದಿಷ್ಟ ವಿರೇಚನ-೧ ಮಾಸಿ, ಇಚ್ಛಾಭೇದಿ ೧ ಗುಂ, ಇತ್ಯಾದಿಗಳಲ್ಲಿ ಒಂದನ್ನು ಮಾತ್ರ ವಿರೇಚನ ಕೊಡಬೇಕು.

೧) ಸಪ್ತಪರ್ಣಿ ಈ ವನಸ್ಪತಿಯು ಮಲೇರಿಯಾದ ಮೇಲೆ ಅತ್ಯಂತ ಪ್ರಭಾವೀ ಔಷಧವಿದೆ ಎಂದು ಕರ್ನಲ್ ಚೋಪ್ರಾ, ಇವರು ಅನೇಕ ರೋಗಿಗಳ ಮೇಲೆ ಪ್ರಯೋಗ ಮಾಡಿ ಸಿದ್ಧಮಾಡಿರುತ್ತಾರೆ. ಇದರ ತೊಗಟೆಯ ಕಷಾಯವನ್ನು ವಾಪರಿಸಬೇಕು. ಪ್ರ—೨—ಮಾಸಿಯಂತೆ ಎರಡು ಸಪ್ತಕದವರೆಗೆ.

೨) **ಶೇಫಾಲಿ:–** ಪಾರಿಜಾತದ ಎಲೆಯ ಕಷಾಯವನ್ನು ಉಪಯೋಗ ಮಾಡಬೇಕು. ೨ ಸಪ್ತಕ ಕೊಡಬೇಕು. ಪ್ರ. ೧–೨– ಮಾಸಿ.

(3 **ಪಂಚತಿಕ್ತ ಕಷಾಯ :**— ಚಿರಾಯಿತ, ಅಮೃತಬಳ್ಳಿ, ಬೇವು ಮರದರಿಷಣ, ಮತ್ತು ಸಪ್ತಪರ್ಣಿ ಈ ಐದು ವನಸ್ಪತಿಗಳ ಕಷಾಯ ಕೊಡಬೇಕು.

4) ಅ–ಇಂಧ್ರಜವಿ, ಕಹಿಪಡುವಲ, ಕಟುಕಾ.

ಆ– ಕಹಿಪಡುವಲ, ಸಾರಿವಾ, ಮುಸ್ತಾ, ಪಾಠಾ, ಕಟುಕರೋಹಿಣಿ.

ಇ— ಪಟೋಲ, ನಿಂಬ, ತ್ರಿಫಲಾ, ಮನೂಕಾ, ಮುಸ್ತಾ, ವತ್ಸಕ,

ಈ— ಕಿರಾತ, ಅಮೃತಬಳ್ಳಿ, ಚಂದನ, ಶುಂಠಿ.

ಉ— ನೆಲ್ಲೀಚಟ್ಟು, ಜೇಕಿನಗಡ್ಡಿ, ಅಮೃತಬಳ್ಳಿ, ಜೇನುತುಪ್ಪ ಈ ಕಷಾಯಗಳನ್ನು ಸಂತತ, ಸತತ, ಇತ್ಯಾದಿ ವಿಷಮಜ್ವರದ ಮೇಲೆ ಕೊಡಬೇಕು.—

## ಸಿದ್ಧೌಷಧಿಗಳು

ಜ್ವರಾಕುಂಶ, ಮಹಾಜ್ವರಾಂಕುಶ, ತ್ರಿಭುವನಕೀರ್ತಿ, ನಾರಾಯಣ ಜ್ವರಾಂಕುಶ, ಆರೋಗ್ಯವರ್ಧಿನಿ, ಅಮೃತಾರಿಷ್ಟ, ರೋಹಿತಕಾರಿಷ್ಟ. ಇತ್ಯಾದಿ ಔಷಧಗಳನ್ನು ಸಾವಸ್ಥಿಕವಾಗಿ ಕೆಳಗೆ ಕಾಣಿಸಿದ ಪ್ರಕಾರ ವಾಪರಿಸಬೇಕು.—

**ವಾತಭೂಯಿಷ್ಟತಾ:**— ತ್ರಿಭುವನಕೀರ್ತಿ೨–ಗುಂ-- ಸತ್ವ–೪–ಗುಂ– ಈ ಪ್ರಮಾಣದಂತೆ ಚೀಟುಕಟ್ಟಿಮುಂಜಾನೆ ಸಾಯಂಕಾಲ ತುಳಸೀರಸ ಮತ್ತು ಜೇನುತುಪ್ಪದಲ್ಲಿ. ಮಧ್ಯಾಹ್ನ ಮತ್ತು ರಾತ್ರಿ ಅಮೃತಾರಿಷ್ಟ, ೧ತೊ ಶುದ್ಧೋದಕ ೧ ತೊ, ಇದರಂತೆ ಎರಡು ವೇಳೈ ತಕ್ಕೊಳ್ಳಬೇಕು.

**ಪಿತ್ತಭೂಯಿಷ್ಟತಾ :**— ಮಹಾಜ್ವರಾಂಕುಶ, ೪ ಗುಂಜಿ. ಪ್ರವಾಳ ೪ ಗುಂ ಅಮೃತಸತ್ವ ೪ ಗುಂ ಈ ಮಿಶ್ರಣದ ೨ ಚೀಟುಮಾಡಿ ನೆಲ್ಲೀ ಕಷಾಯದಲ್ಲಿ ಕೊಡಬೇಕು.

**ಅಮೃತಾರಿಷ್ಟ:**—೧ತೊ. ಶುದ್ಧೋದಕ–೧ತೊ. ೨–ಭಾಗ ಮದ್ಯಾಹ್ನ ಮತ್ತು ರಾತ್ರಿ.

**ಯಕೃತ್‌ಪ್ಲಿಹಾವೃದ್ಧಿ** :- ೧)ಆರೋಗ್ಯವರ್ಧಿನಿ ೨ ಗುಂ.
ಶುದ್ದ ನವಕ್ಷಾರ ೪ ಗುಂ. } ೨ ಚೀಟು

ಇದರ ಮಿಶ್ರಣವನ್ನು ಗೋಮೂತ್ರದಲ್ಲಿ ಇಲ್ಲವೆ ಕುಟಿಕಿಯ (ಕಟುಕರೋಣಿಯ) ಕಷಾಯದಲ್ಲಿ ಕೊಡಬೇಕು.

೨) ರೋಹಿತಕಾರಿಷ್ಟ ೧ತೊ.
ಶುದ್ಧೋದಕ ೧ತೊ. }

೨ ಭಾಗ ಮಧ್ಯಾಹ್ನ ಮತ್ತು ರಾತ್ರಿ

**ಹಳೇ ಪರಿವರ್ತಿತಜ್ವರ** (Chronic Relapse) ಇದಕ್ಕೆ ಮಲ್ಲ ಸಿಂದೂರ, ಸಮೀರಪನ್ನಗ, ಅಥವಾ ಅಷ್ಟಮೂರ್ತಿ, ಇತ್ಯಾದಿ ಸೋಮಲಕಲ್ಪ (Arsenic Preparations) ಸೂಕ್ಷ್ಮ ಪ್ರಮಾಣದಲ್ಲಿ ಕೊಡಬೇಕು. ಪ್ರಮಾಣ ೧/೧೦–೧/೪ ಗುಂಜಿ.

**ಪಾಂಡುಃ—** ಲೋಹಾಸವ, ಮಂಡೂರ, ನವಾಯಸ, ತಾಪ್ಯಾದಿ ಇತ್ಯಾದಿ

**ಆಯುರ್ವೇದ ಇಂಜಕ್ಶನ್ಸ್ ಃ—** ಹಳೇ ರೋಗದಲ್ಲಿ ನಾಯರ್ ಇಂಜಕ್ಶನ್ ಕೊಡಬೇಕು. ಗರ್ಭಿಣಿಯರಿಗೂ ಸಹ ಕೊಡಲಿಕ್ಕೆ ಬರುತ್ತದೆ ಪ್ರ. 1 c. c. ಇಂಟ್ರಾಮಸ್ಕ್ಯುಲರ

## ಅ್ಯಲೋಪಥಿ

**ರೇಚಕ:–** ಮ್ಯಾಗ್‌ಸಲ್ಫ ೧/೨ ಔಂಸು ಇಲ್ಲವೆ ಕ್ಯಾಲೋಮೆಲ್ ೩ ಗ್ರೇನ ಕೊಟ್ಟು ನಂತರ **ಕ್ವಿನಾಯಿನ** (Quinine) 15 gr. ಕೊಡಬೇಕು. ಕ್ವಿನಿನ್ ಬಾಯ್ ಹಾಯಡ್ರೋಕ್ಲೋರಾಯಿಡ್, ಇನ್ ಸಕ್ರೋಜ ಸೋಲ್ಯೂಶನ್‌ದ 10 gr. ಇನ್ ೨ ಸಿ. ಸಿ. ಯ ಇಂಜಕ್ಶನ್ ಕೊಡುತ್ತಾರೆ. ಇದನ್ನು ಮಾಂಸದೊಳಗೆ ಕೊಡಬೇಕು. ಅಂತಸ್ತ್ವಚೆಯಲ್ಲಿ ಕೊಟ್ಟರೆ ಬಾವು ಬಂದು ಕೀವಾಗುತ್ತದೆ. (ಸೂಚನೆ:- ಗರ್ಭಿಣಿ ಸ್ತ್ರೀಯರಿಗೆ ಕ್ವಿನಿನ್ ಕಡಿಮೆ ಪ್ರಮಾಣದಲ್ಲಿ ಕೊಡಬೇಕು.) ಹಳೇ ವಿಕಾರದಲ್ಲಿ ಕ್ವಿನಾಯಿನ್ ಮತ್ತು ಆರ್ಸೆನಿಕ್ ಮಿಶ್ರಣದ ಇಂಜೆಕ್ಶನ್ಸ ಕೊಡುತ್ತಾರೆ. ೮ ರಿಂದ

೧೪ ವರ್ಷದ ವರೆಗೆ ೫ ಗ್ರೇನ ಇನ್‌ವನ್ನ ಸಿ. ಸಿ. ಕೊಡಬೇಕು. ೮ ವರ್ಷದ ಒಳಗಿನ ಹುಡುಗರಿಗೆ ⅓ c. c. ಕೊಡಬೇಕು. ಚಿಕ್ಕಮಕ್ಕಳಿಗೆ 'ಯು' ಕ್ವಿನಾಯಿನ್ ಕೊಡಬೇಕು. ತೀವ್ರಾವಸ್ಥೆಯಲ್ಲಿ– ಮಲೇರಿಯಾಕ್ಕೆ ಕ್ವಿನಾಯಿನ್ ಬಹಳೇ ಪ್ರಭಾವೀ ಔಷಧವಿರುತ್ತದೆ. ಆದರೆ ಇದರಿಂದ ಪಿತ್ತ ಲಕ್ಷಣಗಳಾಗುತ್ತವೆ. ಕಿವಿಗಳು ಮಂದಾಗುತ್ತವೆ. ಹಾಗೆಯೇ ಹಳೇ ರೋಗದ ಪರಿವರ್ತಿತ ಜ್ವರದಲ್ಲಿ ಕ್ವಿನಾಯಿನ್ ಇದು ಬಹುಶಃ ಉಪಯೋಗ ವಾಗುವದಿಲ್ಲ. ಇಂಥ ವೇಳೆಯಲ್ಲಿ ಆಯುರ್ವೇದಿಕ ಔಷಧಗಳ ಉಪಯೋಗ ಚನ್ನಾಗಿ ಆಗುತ್ತದೆ. ಇದರ ಹೊರ್ತು ಫ್ಲಾಸ್ಮೋಕ್ವೀನ್, ಆ್ಯಟೆಬ್ರಿನ್, ಪ್ಯಲ್ಯುಡ್ರಿನ್ ಕ್ವಿನ್ಯಾಕ್ರಿನ್ ಇತ್ಯಾದಿ ಔಷಧಗಳು ಅತ್ಯಂತ ಪ್ರಭಾವೀ ಇರುತ್ತವೆ. ಕ್ವಿನಾಯಿನ್ ೧೦-ಗ್ರೇನ ಪ್ರವಾಳ ೫-ಗ್ರೇನ ಮತ್ತು ಸುವರ್ಣ ಮಾಕ್ಷಿಕ ೨ ಗ್ರೇನ ಈ ಮಿಶ್ರಣದ ನಾಲ್ಕು ಚೀಟು ನೆಲ್ಲೀಪಾಕದಲ್ಲಿ ಕೊಟ್ಟರೆ ಪಿತ್ತ ಲಕ್ಷಣಗಳು ದೂರಾಗುವದಲ್ಲದೆ ಮಲೇರಿಯಾ ಜ್ವರಗಳು ಸಹಿತ ಕಮ್ಮಿಯಾಗುತ್ತವೆ.

**ಹೋಮಿಯೋ ಪ್ಯಾಥಿ:**–ಚಾಯನಾ, ಆರ್ಸೇನಿಕ್, ಯುಪ್ಯಾಟೋರಿಯಂಪರ್ಫ, ಕ್ಯಾಂಫರ್, ಪಲ್‌ಸ್ಯಾಟಿಲಾ, ಮೊದಲಾದ ಔಷಧಗಳನ್ನು ಪ್ರಕೃತಿ ವಿಚಾರ ಮತ್ತು ವಿಶಿಷ್ಟ ಲಕ್ಷಣ ಸಮುಚ್ಚಯದ ವಿಚಾರಮಾಡಿ ಕೊಡಬೇಕು.

೧) **ಬಾಯೋ ಕೆಮಿಕ್:**—(೧) ನೇಟ್ರಿಮ್‌ಸಲ್ಫ ೨೦೦× [ಪ್ರಮುಖ ಔಷಧ] ಇದರಿಂದ ಮಲೇರಿಯಾದ ಪಿತ್ತ ಲಕ್ಷಣಗಳು ಕಡಿಮೆಯಾಗುತ್ತವೆ. ಬೆವರು ಬಂದು ಜ್ವರ ಕಡಿಮಿಯಾಗುವದು.

೨) **ಫೇರಂಫಾಸ್** ೨೦೦×:—ಅಂಗಮರ್ದ, ಶೀರ್ಷಶೂಲ, ಜ್ವರ, ನೀರಡಿಕೆ, ಇತ್ಯಾದಿ ಲಕ್ಷಣಗಳಮೇಲೆ.

೩) **ಕಲ್ಕೇರಿಯಾ ಫಾಸ್** ೨೦೦× .—ಬಾಲಕರಿಗೆ ವಿಶೇಷ ಉಪಯುಕ್ತ.

೪) **ನಾಯಟ್ರೆಂಮೂರ್** ೨೦೦× :—ಕ್ವಿನಾಯನ್ನದ ದುರುಪಯೋಗ ದಿಂದ ಆಗುವ ಪಿತ್ತ ಲಕ್ಷಣಗಳ ಮೇಲೆ.

**ಪೇಟಂಟ್ಸ್:**— (೧) ಕ್ವಿನೋಹೇಮೋಜೇನ್ (2) Ionizied Quinine, (3) Opo Quinine, etc.

**ಪ್ರತಿಬಂಧಕ ಉಪಾಯಗಳು:**—ಗುಂಗಾಡುಗಳನ್ನು ನಾಶ ಮಾಡ ಬೇಕು. ಹೊಲಸು ನೀರಿನ ಸ್ಥಳಗಳಲ್ಲಿ ಕೆರೋಸಿನ್, ಫಿನಾಯಿಲ್, ಇಲ್ಲವೆ ಡಿ. ಡಿ. ಟಿ. ಹಾಕಬೇಕು. ಡಿ. ಡಿ. ಟಿ. ಇದು ಗುಂಗಾಡುಗಳನ್ನು ನಾಶ ಮಾಡುವದರಲ್ಲಿ ಅತ್ಯಂತ ಶ್ರೇಷ್ಠವದೆ. ಮತ್ತು ಮಚ್ಛರದಾನಿಯುನ್ನು ವಾಪ ರಿಸಬೇಕು.

**ಪಥ್ಯಾಪಥ್ಯ:**—ಕ್ವಿನಾಯನ್ನಿನ ಇಂಜೆಕ್ಶನ್ ತಕ್ಕೊಂಡ ಕೂಡಲೇ ಜ್ವರ ನಿಲ್ಲುತ್ತವೆ. ಆದರೆ ಅಪಥ್ಯ ಮಾಡಿದರೆ ಪುನಃ ತಿರುಗಿ ಬರುತ್ತವೆ. ಆದ್ದರಿಂದ ರೋಗಿಯು ಕೆಳಗೆ ಕಾಣಿಸಿದ ಪದಾರ್ಥಗಳನ್ನು ವರ್ಜ್ಯ ಮಾಡ ಬೇಕು.

ಹಸೀ ಎಂಣೆ, ಕರೆದ ಸಾಮಾನು, ಮೊಸರು, ಬಾಳೇಹಂಣು, ಬರ್ಫ ಹಾಕಿದ ಶೀತ ಪೇಯಗಳು [ಕೋಲ್‌ಡ್ರಿಂಕ್ಸ] ಇತರ ಬರ್ಸಣದ ಪದಾರ್ಥ ಗಳು ಮಸಾಲೆ, ಉಪ್ಪುಖಾರ ಹುಳಿ ಹಾಕಿದ ಪದಾರ್ಥಗಳು.

**ಪಥ್ಯ:**-ಜ್ವರವಿರುವವರೆಗೆ ಹಾಲು, ಕಾಫೀ, ಮೋಸಂಬಿ ರಸ, ಬಾರ್ಲಿನೀರು ಅಥವಾ ಭತ್ತ ಅರಳಿನ ನೀರು ಕೊಡಬೇಕು. ಜ್ವರವು ಕಡಿಮೆಯಾದನಂತರ ಅಕ್ಕೀ ಹುರಿದು ಗಂಜೀ ಮಾಡಿಕೊಡಬೇಕು. ಕ್ರಮೇಣ ಹಾಲು ಅನ್ನ, ಸಾರು ಅನ್ನ, ಮಜ್ಜಿಗಿ ಅನ್ನ, ಕೊಡಬೇಕು. ನಿಂಬೀ ಹಣ್ಣಿನ ಉಪಯೋ ಗವನ್ನು ಮಾಡಲಿಕ್ಕೆ ಅಡ್ಡಿಯಿಲ್ಲ.



# ಆಂತ್ರಿಕ ಸನ್ನಿಪಾತ (ಟಾಯ್‌ಫಾಯಿಡ್)

ಶೀತಪೂರ್ವಕ ಜ್ವರ [ಮಲೇರಿಯಾ] ಮತ್ತು ಆಂತ್ರಿಕ ಜ್ವರ [ಟಾಯ್ ಫಾಯಿಡ್] ಇವುಗಳಲ್ಲಿ ಲಕ್ಷಣಗಳು ಅವ್ಯಕ್ತವಾಗಿರುವಾಗ ನಿದಾನ ಮಾಡುವದು ಕಠಿಣ. ಒಳ್ಳೇ ಹೆಸರಾಂತ ವೈದ್ಯ ಡಾಕ್ಟರುಗಳೂ ಇಲ್ಲಿ ಭ್ರಮೆಗೊಳ್ಳುತ್ತಾರೆ. ನಿದಾನ ತಪ್ಪಿಹೋಗುತ್ತದೆ. ಆಂತ್ರಿಕವು ಶುದ್ಧ ಸ್ವರೂಪದಿಂದಿದ್ದಾಗಲೂ ಅದನ್ನು ಮಲೇರಿಯಾ ಜ್ವರವೆಂದು ಭಾವಿಸಿ ಡಾಕ್ಟರುಗಳು ೨-೩ ಕ್ವಿನೀನು ಇಂಜಕ್ಶನ್ನು ಕೊಟ್ಟು ಮತ್ತು ಹೊಟ್ಟೆಯಲ್ಲಿ ಕ್ವಿನೀನು ಹಾಕಿದ್ದರಿಂದಾಗಿ ಪಿತ್ತ ಕೆರಳಿ ಕ್ವಿನೀನಿನ **ವಿಷ ಬಾಧೆ** (ಹಾಯ್ ಪರ ಕ್ವಿನೀನಿಝಂ) ಯಾದ ಉದಾಹರಣೆಗಳಿಗೇನು ಕಮ್ಮಿಯಿಲ್ಲಾ. ಪ್ರತಿ ಯಾಗಿ ಮಲೇರಿಯಾವನ್ನು ಟಾಯಫಾಯಿಡ್ ಎಂದು ಭಾವಿಸಿ ವೈದ್ಯರು ಆಂತ್ರಿಕದ ಚಿಕಿತ್ಸೆ, ಪ್ರವಾಳವೇ ಮೊದಲಾದ ಸೌಮ್ಯ ಉಪಚಾರ ನಡೆಸಿದ್ದರಿಂದ, ರೋಗಿ ನಿಷ್ಕಾರಣವಾಗಿ ಹಾಸಿಗೆ ಹಿಡಿದ ಉದಾಹರಣೆಗಳೂ ಸಾಕಷ್ಟಿವೆ. ಮಲೇರಿಯಾದ ರೋಗಿಗೆ ಮಲೇರಿಯಾದ ಚಿಕಿತ್ಸೆಯೇ ಆದರೆ ಕೂಡಲೆ ಗುಣಬರುತ್ತದೆ, ಆದ್ದರಿಂದಲೇ, ಶೀತ ಜ್ವರದ ನಂತರವೇ ಆಂತ್ರಿಕದ ವಿವೇಚನೆ ಮಾಡಿದ್ದೂ ವೈದ್ಯಕೀ ವ್ಯವಹಾರದ ಅನುಕೂಲತೆಗಾಗಿಯೇ.

**ಸಾಮಾನ್ಯ ವರ್ಣನೆ:**— ಕಟ್ಟಿನಜ್ವರ ಅಂದರೆ, ಮುದ್ದತ್ತಿನಜ್ವರ ವೆಂಬ ಹೆಸರನ್ನು ಎಲ್ಲರೂ ಬಲ್ಲರು. ಮುದ್ದತ್ತಿಲ್ಲದ ಜ್ವರಗಳಾವು? ಆದರೆ ಕಟ್ಟಿನಜ್ವರವೆಂದರೆ ಸಾಮಾನ್ಯವಾಗಿ, ಆಂತ್ರಿಕ ಸನ್ನಿಪಾತ [ ಟಾಯಫಾಯಿಡ್ ] ಎಂದು ಜನರ ತಿಳುವಳಿಕೆಯಲ್ಲಿದೆ.

ಇದೊಂದು ಒಳ್ಳೇ ಮಹತ್ವದ ಜ್ವರವೆಂದು ಗಣಿಸಲ್ಪಟ್ಟಿದೆ. ಇದರ ಹಬ್ಬುಗೆ ಎಲ್ಲೆಲ್ಲಿಯೂ ಕಂಡುಬರುತ್ತದೆ. ಇದು ಎಲ್ಲಾ ಋತುಗಳಲ್ಲಿಯೂ ಕಾಣಿಸಿಕೊಳ್ಳುತ್ತದೆ. ಅನೇಕ ಉಪದ್ರವ (ಕಾಂಪ್ಲಿಕೇಶನ್ಸ) ಗಳಾಗುವದು

ಇದರಲ್ಲಿಯ ವಿಶೇಷವಾಗಿದೆ. ಸಾಮಾನ್ಯವಾಗಿ ಸರ್ವ ಸಂಸ್ಥೆ (ಸಿಸ್ಟಿಮ್ಸ್) ಗಳಲ್ಲಿ ಕೆಂಬಹುನಾ ಶರೀರದ ಅವಯವಗಳಿಲ್ಲೆಲ್ಲಾ ಇದರ ಉಪದ್ರವ ಬೆಳೆದು ಬರುತ್ತದೆ. ಉಪದ್ರವಗಳಿಲ್ಲದ ಆಂತ್ರಿಕಜ್ವರ ಸುಖಸಾಧ್ಯ ಆದರೆ ಉಪದ್ರವಗಳ ಮಾಲಿಕೆ ಆರಂಭವಾಯಿತೆಂದರೆ ಮಾತ್ರ ಈ ಜ್ವರ ಕಷ್ಟಸಾಧ್ಯ ಇಲ್ಲವೆ ಅಸಾಧ್ಯವೆಂಬ ಮಟ್ಟಕ್ಕೆ ಬರುತ್ತದೆ.

**ನಾಮ:**— ಆಂತ್ರಿಕ ಸನ್ನಿಪಾತವೆಂಬ ಹೆಸರು ಈ ಜ್ವರಕ್ಕೆ ಈಗ ರೂಢವಾಗಿಹೋಗಿದೆ. ಇದರಲ್ಲಿ ಮೊದಲಿಗೆ, ಸಣ್ಣ ಕರಳು ಕ್ರಿಮಿ ದುಷ್ಟ ವಾಗುತ್ತದೆ. ಎಂದೇ ಇದಕ್ಕೆ ಆಂತ್ರಿಕ (ಎಂಟೇರಿಕ್) ಪೆಂಬ ಹೆಸರು ಅನ್ವರ್ಥಕವಾಗಿರುತ್ತದೆ. ಹಾಗೆಯೇ ಇದರಲ್ಲಿ ವಾತವೇ ಮೊದಲಾದ ಮೂರೂ ದೋಷಗಳು ಪ್ರಕುಪಿತವಾಗಿರುವದರಿಂದ ಇದನ್ನು ಸನ್ನಿಪಾತ ವೆಂದೂ ಹೇಳುತ್ತಾರೆ. ಈಬರ್ಥನೆಂಬ ಪಂಡಿತನು ಈ ಕ್ರಿಮಿಯ ಶೋಧ ಮಾಡಿದ್ದರಿಂದ ಇದಕ್ಕೆ ಆತನ ಹೆಸರೇ ಬಿದ್ದಿದೆ.

**ಕಾರಣ ಮೀಮಾಂಸಾ:**— ಈಬರ್ಥ ಬ್ಯಾಸಿಲಸ್ ಎಂಬ ಕ್ರಿಮಿ ಯಿಂದ ಈ ಜ್ವರಕ್ಕೆ ಆರಂಭವಾಗುತ್ತದೆ. ಈ ಕ್ರಿಮಿಗಳು ಹಾಲಿನಲ್ಲಿಂದೋ ನೀರಿನಲ್ಲಿಂದೋ ಹೊಟ್ಟೆಯಲ್ಲಿ ಹೋಗುತ್ತವೆ. ಹಾಲು ಅಥವಾ ನೀರನ್ನು ಕುದಿಸಿ ಕುಡಿದರೆ ಈ ಕ್ರಿಮಿಗಳ ಸಂಸರ್ಗ ತಟ್ಟುವದಿಲ್ಲ. ಚೀನೀ ಜನರು ಬರಿಯ ತಣ್ಣೀರನ್ನು ಎಂದೂ ಕುಡಿಯುವದಿಲ್ಲ. ಅವರು ಬಹಳವಾಗಿ ಚಹಾ ಕಾಫಿಗಳನ್ನೇ ಕುಡಿಯುವದರಿಂದ ಅವರಿಗೆ ಈ ಜ್ವರಗಳ ಪೀಡೆ ಯಾಗುವದಿಲ್ಲವೆಂಬದು ಬಲ್ಲವರ ಅಭಿಪ್ರಾಯವಾಗಿದೆ.

ಜಠರಾಗ್ನಿ ಪ್ರದೀಪ್ತವಾಗಿದ್ದು, ಅಜೀರ್ಣ, ಅಪಚನ, ಬದ್ಧಕೋಷ್ಠವೇ ಮೊದಲಾದ ವಿಕಾರಗಳಿಲ್ಲದಿದ್ದರೆ ಕ್ರಿಮಿಗಳು ಹೊಟ್ಟೆಯನ್ನು ಹೊಕ್ಕೂ ಆಂತ್ರಿಕದ ಬಾಧೆ ತಟ್ಟುವದಿಲ್ಲ. ಜಠರ ರಸ [ ಹಾಯಡ್ರೋಕ್ಲೋರಿಕ್ ಆಸಿಡ್ ] ದ ಪ್ರಭಾವದಿಂದ ಕ್ರಿಮಿಗಳು ಸತ್ತುಹೋಗುತ್ತವೆ. ಅತಿ ಸಂಭೋಗ, ಚಿಂತೆ, ಮಾನಸಿಕ ಆಘಾತ, ಅಧ್ಯಶನ, ಜಾಗರಣ, ಅಲ್ಲದೆ ಮತ್ತೆ ಬೇರೆ ಕಾರಣಗಳಿಂದ ಕೋಷ್ಠಾಗ್ನಿ ಮಂದವಾಗಿದ್ದಾಗ ಕ್ರಿಮಿಗಳ ಪ್ರವೇಶವಾದರೆ ಮಾತ್ರ, ರೋಗಬಾಧೆಯಾಗುತ್ತದೆ. ನೊಣಗಳ ನಿಮಿತ್ತ

ಹಾಗಿ ಈ ಕ್ರಿಮಿಗಳ ಹಬ್ಬುವಿಕೆ ಭರದಿಂದಾಗುತ್ತದೆ. ಮತ್ತು ಶಂಖ, ಶಿಂಪುಗಳಲ್ಲಿಯ ಹುಳ [ ಆಯಿಸ್ಟರ್ಸ ] ಮೀನು ಮುಂತಾದ ನೀರಿನಲ್ಲಿಯ ಪ್ರಾಣಿಗಳನ್ನು ಬೇಯಿಸದೆ ತಿಂದರೆ ಈ ಜ್ವರದ ಬಾಧೆ ಸಂಭವಿಸುತ್ತದೆ.

**ವಯಸ್ಸು:**— ಎರಡರಿಂದ ಇಪ್ಪತ್ತೈದು ವರ್ಷಗಳ ವಯಸ್ಸಿನ ಸ್ತ್ರೀ-ಪುರುಷರಿಗೆ ಇದರ ಸಂಭವ ಹೆಚ್ಚು. ಒಬ್ಬರಿಗೆ ಆಯುಷ್ಯದಲ್ಲಿ ೨-೩ ಸಲ ಆಂತ್ರಿಕ-ಕಟ್ಟನಜ್ವರ ಬಂದ ಉದಾಹರಣೆಗಳು ಅನೇಕವಾಗಿವೆ. ಕೆಲವರು ಈ ಬೇನೆಯಿಂದ ಎದ್ದಮೇಲೆ ಅವರ ಗುರುತು ಹತ್ತದಷ್ಟರ ಮಟ್ಟಿಗೆ ಚನ್ನಾಗಿ ಸುಧಾರಿಸುತ್ತಾರೆ. ತೂಕ ಹೆಚ್ಚಿ ಮೋರೆಯಮೇಲೆ ಗುಲಾಬೀ ಬಣ್ಣ ಬರುತ್ತದೆ. ಕೆಲವರು ಮಾತ್ರ ಅಶಕ್ತರಾಗುತ್ತಾರೆ ಅಲ್ಲದೆ ದೇಹದ ಯಾವ ದಾದರೊಂದು ಅವಯವದಲ್ಲಿ ನಿಃಶಕ್ತಿ ನಿಂತುಕೊಂಡುಬಿಡುತ್ತದೆ.

**ಕಾಲಸಂಪ್ರಾಪ್ತಿ:**— ಏಳರಿಂದ ಹದಿನೈದು ದಿನಗಳಲ್ಲಿ ಕ್ವಚಿತ್ತಾಗಿ ಮೂರೇ ದಿನಗಳಲ್ಲೂ ಇದರ ಪ್ರಭಾವ ಕಂಡು ಬರುವದುಂಟು. ಈ ಕಾಲ ಮರ್ಯಾದೆ ಕಡಿಮೆ ಇದ್ದಷ್ಟೂ ರೋಗದ ಅಬ್ಬರ ಬಹಳ ತೀವ್ರವಾಗಿದ್ದು ಅದು ಕಷ್ಟಸಾಧ್ಯವೂ ಆಗಿರುತ್ತದೆ.

**ಸಂಪ್ರಾಪ್ತಿ [ ಪ್ಯಾಥಾಲಜಿ ]**:— ಮಿಥ್ಯಾ ಆಹಾರ ವಿಹಾರಗಳಿಂದ ಕೋಷ್ಠಾಗ್ನಿ ಮಂದವಾಗಿರುವವರಿಗೆ ಶರೀರದಲ್ಲಿ ಆಂತ್ರಿಕ ಕ್ರಿಮಿಗಳ ಪ್ರವೇಶ ವಾದರೆ ಅವು ಅನ್ನಾಶಯದಿಂದ ಸುರಕ್ಷಿತವಾಗಿ ಹೊರಬಿದ್ದು ಕರುಳಿನಲ್ಲಿ ಪ್ರವೇಶಮಾಡುತ್ತವೆ. ಮತ್ತು ಸಣ್ಣ ಕರುಳಿನ ಕೊನೆಯ ಭಾಗದಲ್ಲಿ ತಮ್ಮ ವಸಹಾತನ್ನೇ ಮಾಡಿಕೊಳ್ಳುತ್ತವೆ. ಈ ಕರುಳಿನ ಕೊನೆಯ ಭಾಗದಲ್ಲಿ ಅನ್ನ ಮಯ ದ್ರವಭಾಗ ಹೆಚ್ಚು ಪ್ರಮಾಣದಲ್ಲಿರುತ್ತದೆ. ಆದರಿಂದಾಗಿ ಈ ಭಾಗ ದಲ್ಲಿಯ ಕ್ರಿಮಿಗಳನ್ನು ನಾಶಮಾಡುವ ಪ್ರತೀಕಾರ ಶಕ್ತಿ ಬಹಳೇ ಕಮ್ಮಿ ಯಾಗಿರುತ್ತದೆ. ಮತ್ತು ಇಲ್ಲಿ ಪೋಷಕ ಅಂಶಗಳೂ ವಿಪುಲವಾಗಿರುತ್ತವೆ. ಆದರಿಂದಲೇ ಈ ಭಾಗ ಕ್ರಿಮಿಗಳ ವಸತಿಗೆ ಒಳ್ಳೇ ಅನುಕೂಲವಾದದ್ದಾಗಿದೆ. ಈ ಕ್ರಿಮಿಗಳು ಕರುಳಿನಲ್ಲಿಯೇ ಅಂತಸ್ತ್ವಚಾ [ ಮ್ಯೂಕಸ್ ಮೆಂಬ್ರೇನ್ ] ವನ್ನು ತಿಂದುಬಿಡುತ್ತವೆ. ಇದರಿಂದ ಅಲ್ಲಿ ವ್ರಣ ( ಅಲ್ಸರ್ ) ಉಂಟಾಗಿ ಆ ಭಾಗಕ್ಕೆ ತುಸು ಬಾವು ಬಂದು ಶೂಲಿಗೂ ಆರಂಭವಾಗುತ್ತದೆ.

ಈ ಹುಣ್ಣುಗಳು ದೊಡ್ಡವಾಗುತ್ತ ನಡೆದರೆ, **ಕರುಳಿಗೆ** (ಪರ್ಫೊರೇಶನ್) **ತೂತುಬಿದ್ದು** ರೋಗಿ ಕೈಬಿಡುತ್ತಾನೆ. ಹಾಗೆಯೇ ಕ್ರಿಮಿಗಳು ಕರುಳಿನಲ್ಲಿಯ ಯಾವದಾದರೊಂದು ಸೂಕ್ಷ್ಮ ರಕ್ತನಾಳವನ್ನು ಕಡಿದರೂ ರಕ್ತಸ್ರಾವ (ಹೆಮರೇಜ್) ವಾಗಿ ರೋಗಿ ಸಾಯುತ್ತಾನೆ. ವಿಷ (ಟಾಕ್ಸಿನ್) ವು ರುಧಿರಾಭಿಸರಣ(ಬ್ಲಡ್ ಸರಕ್ಯೂಲೇಶನ್)ದಲ್ಲಿ ಕೂಡಹತ್ತಿದಂತೆ ಕ್ರಮವಾಗಿ ಜ್ವರ ಏರುತ್ತದೆ. ಸೌಮ್ಯಜ್ವರದಲ್ಲಿಯ ಹುಣ್ಣುಗಳು ಮಾಯುತ್ತಹೋಗಿ ರೋಗಿ ಸುಧಾರಿಸುತ್ತಾನೆ. ಆದರೆ ಕ್ರಿಮಿಗಳ ವೇಗ ಬಹಳವಾಗುವದರಿಂದ, ಅನೇಕ ಉಪದ್ರವಗಳುಂಟಾದರೆ ರೋಗವು ಕಷ್ಟಸಾಧ್ಯವಾಗುತ್ತದೆ.

**ಪ್ರಕಾರ:**— ಈ ಕ್ರಿಮಿಗಳಲ್ಲಿ ಮೂರುವಿಧ. [ಅ] ಬ್ಯಾಸಿಲಸ್, ಟಾಯ್ಫೋಸಸ್, [ಆ] ಪ್ಯಾರಾ ಟಾಯಿಫಾಯಿಡ್ ಎ. ಬ್ಯಾಸಿಲಸ್, [ಇ] ಪ್ಯಾರಾ ಟಾಯಿಫಾಯಿಡ್ ಬಿ. ಬ್ಯಾಸಿಲಸ್ ಈ ಮೂರು ತರಹದ ಕ್ರಿಮಿಗಳಿಂದಾಗುವ ಜ್ವರಗಳಲ್ಲಿಯೂ ಮತ್ತೆ ಮೂರುವಿಧ. [೧] ಟಾಯಿಫಾಯಿಡ್ [೨] ಪ್ಯಾರಾ ಟಾಯಿಫಾಯಿಡ್ ಎ. [೩] ಪ್ಯಾರಾ ಟಾಯಿಫಾಯಿಡ್ ಬಿ.

**ಮುದ್ದತ್ತು:**— ಆಂತ್ರಿಕ (ಟಾಯ್‌ಫಾಯಿಡ್) ಇದರ ಮುದ್ದತ್ತು ಸಾಮಾನ್ಯವಾಗಿ ಇಪ್ಪತ್ತೊಂದು ದಿವಸಗಳು. ತೀವ್ರತೆ ಹೆಚ್ಚಾಗಿದ್ದರೆ, ಅಪಥ್ಯವಾದರೆ, ೪೨ ಅಥವಾ ೮೪ ದಿನಗಳವರೆಗೂ ಇರುತ್ತದೆ. ಪ್ಯಾರಾ ಟಾಯಿಫಾಯಿಡ್ ಎ. ಅಥವಾ ಬಿ. ಯು ಹೆಚ್ಚು ಸೌಮ್ಯವಾಗಿರುತ್ತದೆ. ಇದರ ಅವಧಿ ೧೪ ದಿವಸಗಳದ್ದಾಗಿದೆ. ಸಾಮಾನ್ಯವಾಗಿ ಮೇಲಿನ ಮುದ್ದತ್ತು ಹೇಳಿದರೂ ಅದು ದೋಷ ದೂಷ್ಯಾನುಸಾರವಾಗಿ ಹೆಚ್ಚು ಕಡಿಮೆಯಾಗುವ ಸಂಭವವೂ ಇರುತ್ತದೆ. ಆಯುರ್ವೇದದಲ್ಲಿ ಸನ್ನಿಪಾತದ ಅವಧಿ ಹೇಳಲ್ಪಟ್ಟದ್ದೂ ಹೀಗೆ– ॥ ಸಪ್ತಮೀ ದ್ವಿಗುಣಾಚೈವ, ನವಮ್ಯೇಕಾದಶೀ ತಥಾ ॥ ಏಷಾ ತ್ರಿದೋಷಮರ್ಯಾದಾ ಮೋಕ್ಷಾಯಚ ವಧಾಯಚ ॥ ಈ ಮಾತಿನ ವಿಚಾರವನ್ನು ತ್ರಿದೋಷ ಪದ್ಧತಿಯನ್ನನುಸರಿಸಿ ಅಗತ್ಯವಾಗಿ ಮಾಡಬೇಕು. ಒಂದೊಂದು ವಾರ ತಿರುಗಿದಂತೆ ಲಕ್ಷಣಗಳಲ್ಲಿಯೂ ಹೆಚ್ಚು ಕಡಿಮೆ ಕಂಡು ಬರುತ್ತದೆ.

**ಲಕ್ಷಣ ಮತ್ತು ಭಾವನೆ:—** (೧) **ಜ್ವರ:-** ಸಾಮಾನ್ಯವಾಗಿ ಈ ವಿಕಾರ ಒಳ್ಳೇ ಮಂದಗತಿಯಿಂದ (ಸ್ಲೋ ಆನ್ ಸೆಟ್) ಆರಂಭವಾಗುತ್ತದೆ. ರೋಗಿಗೂ ಮೊದಲಿಗೆ ಅದರ ಕಲ್ಪನೆ ಬರುವದಿಲ್ಲ. ಮೊದಲಿಗೆ ಬೇಸರ, ಮೈಮುರಿತ, ಕಣ್ಣುರಿ, ಸ್ವಲ್ಪ ತಲೆಹೊಡೆತದಂಥ ಲಕ್ಷಣಗಳು ಕಾಣಿಸಿಕೊಳ್ಳುತ್ತವೆ. ರೋಗಿ ತನ್ನ ಕೆಲಸಮಾಡುತ್ತಲೇ ಇರುತ್ತಾನೆ. ಮುಂದೆ ಕ್ರಮವಾಗಿ ಮೆಟ್ಟಿಲು ಮೆಟ್ಟಿಲಾಗಿ ( ಲ್ಯಾಡರ್‌ಲಾಯಿಕ್ ) ಜ್ವರ ಹೆಚ್ಚಿ ರೋಗಿ ಹಾಸಿಗೆ ಹಿಡಿಯುತ್ತಾನೆ. ದಿನಕ್ಕೆ ·॥· ದಿಂದ ೧ ಅಂಶ (ಡಿಗ್ರಿ) ದಂತೆ ಜ್ವರ ಹೆಚ್ಚಾಗುತ್ತದೆ.

ಬೆಳಗಿನಕಿಂತ ಸಂಜೆಗೆ ಜ್ವರ ಹೆಚ್ಚಾಗುತ್ತದೆ. ಬೆಳಗು ಹಾಗೂ ಸಂಜೆಯ ಜ್ವರಗಳಲ್ಲಿ ೧–೨ ಅಂಶಗಳ ಅಂತರವಿರುತ್ತದೆ. ಮೊದಲ ವಾರದಲ್ಲಿ ಎಲ್ಲಾ ಲಕ್ಷಣಗಳು ಸಾಮಾನ್ಯವಾಗಿಯೇ ಇರುವವು. ಎರಡನೇ ವಾರದಲ್ಲಿ ಲಕ್ಷಣಗಳು ತೀವ್ರವಾಗುತ್ತವೆ. ಜ್ವರ ೧೦೩–೧೦೪ ರ ವರೆಗೂ ಒಮ್ಮೊಮ್ಮೆ ೧೦೭ ಕಿಂತಲೂ ಹೆಚ್ಚಿಗೆ ಏರುತ್ತವೆ. ಎರಡು ವಾರ ತಿರುಗಿದಮೇಲೆ ೨೧ ದಿನಗಳ ಆಂತ್ರಿಕವೇ ಆಗಿದ್ದಲ್ಲಿ ಮೂರನೇ ವಾರಕ್ಕೆ ಕ್ರಮವಾಗಿ ಜ್ವರಗಳು ಇಳಿಯಹತ್ತಿ ಕೊನೆಗೆ ೨೧ ನೇ ದಿನಕ್ಕೆ ಪೂರಾ ಜ್ವರಬಿಡುತ್ತವೆ. ೨೮ ನೇ ದಿನಕ್ಕೆ ಜ್ವರಬಿಟ್ಟ ಉದಾಹರಣೆಗಳೂ ಇವೆ. ಇವೆಲ್ಲಾ ಅವಧಿಗಳಲ್ಲೂ ರೋಗಿಗೆ ಬೆವರು ಬರುವದಿಲ್ಲ.

(೨) **ತಲೆಹೊಡೆತ:–** ತಲೆಹೊಡೆತ ಬಹಳ ತೀವ್ರವಾಗಿರುವುದುಂಟು. ಈ ಲಕ್ಷಣ ಮೊದಲಿಗೆ ಒಳ್ಳೇ ಉಗ್ರವಾಗಿದ್ದು ಕಣ್ಣು ಮೂಗುಗಳಲ್ಲಿ ನೀರು ಸುರಿಯುತ್ತ ಬಹುಶಃ ೧೦ ದಿನಗಳ ವರೆಗೆ ಇರುತ್ತವೆ.

(೩) **ರಕ್ತಪಿತ್ತ:–** ಮೂಗಿನಲ್ಲಿ ರಕ್ತವು ಬರುತ್ತದೆ.

(೪) **ವಾಂತಿಭೇದಿ:–** ಇದು ಪಚನಸಂಸ್ಥೆಯ ವಿಕಾರವಾಗಿರುವದರಿಂದ ಇದರಲ್ಲಿ ಕಾರಿಕೆ, ಅಥವಾ ಅತಿಸಾರವೂ ಸಂಭವಿಸಬಹುದು. ಒಮ್ಮೊಮ್ಮೆ ಮಲಾವರೋಧವೂ ಕಾಣಿಸಿಕೊಳ್ಳಬಹುದು.

(೫) ನಡುನಾಲಿಗೆಯಲ್ಲಿ ಹೊಲಸು (ಕೋಟಿಂಗ) ಮೆತ್ತಿಕೊಂಡಿರುತ್ತದೆ. ಆದರೆ ನಾಲಿಗೆಯ ದಂಡೆಯಲ್ಲಾ ಕೆಂಪಗಾಗಿರುತ್ತದೆ. ಇದು ಆಂತ್ರಿಕ-

ಕಟ್ಟುಜ್ವರದ ವಿಶೇಷ ಲಕ್ಷಣವಾಗಿದೆ. ಅಗ್ನಿ ಮಂದವಾಗುತ್ತದೆ. ನೀರಡಿಕೆ, ಒಳಗೆ ಜಳ, ನಿದ್ದೆ ಬರದಿರೋಣ, ಮೂಗು ತಟ್ಟಸೋಣ, ಮೊದಲಾದ ಸಾಮಾನ್ಯ ಚಿನ್ಹಗಳೂ ಉಂಟಾಗುತ್ತವೆ.

(೬) **ಕೋಷ್ಠ ಶೂಲ:-** ಹೊಕ್ಕಳ ಕೆಳಗಿನ ಬಲಭಾಗದ ಹೊಟ್ಟೆಯಲ್ಲಿ ನೋಯಹತ್ತುತ್ತದೆ. ಅಲ್ಲಿ ಕೈಯಿಂದ ಅದುಮಿದರೆ " ಗುರ್ ಗುರ್ " ಎಂದು ಧ್ವನಿ (ಗರ್ಗ್‌ಲಿಂಗ್) ಯಾಗುತ್ತದೆ.

(೭) **ಪ್ಲೀಹಾವೃದ್ಧಿ:-** ಅಡ್ಡಗೈಯಾಗುತ್ತದೆ. ಈ ಲಕ್ಷಣ ಮಲೇರಿಯಾದಲ್ಲಿಯೂ ಕಂಡು ಬರುವದರಿಂದ ಆಂತ್ರಿಕ ಜ್ವರವನ್ನು ಈ ಕಾರಣದ ಮೂಲಕ ಮಲೇರಿಯಾ ಎಂದು ತಪ್ಪು ತಿಳಿದುಕೊಳ್ಳುವ ಸಂಭವ ಹೆಚ್ಚಾಗಿರುತ್ತದೆ.

(೮) **ನಾಡಿ:-** ನಾಡೀ ಮಂದತರಾಭವೇತ್ ॥ ಈ ಜ್ವರದಲ್ಲಿ ನಾಡಿಗಳ ವೇಗ ಮಂದವಾಗಿರುತ್ತದೆ. ಉದಾ:-ಶೀತಪೂರ್ವಕಾದಿ ಜ್ವರದಲ್ಲಿ ೧೦೩ ಅಂಶ ಜ್ವರವಿದ್ದಾಗ ನಾಡಿಯ ವೇಗ ಪ್ರತಿ ನಿಮಿಷಕ್ಕೆ ೧೩೦ ರ ವರೆಗೆ ಇರುತ್ತದೆ. ಅದೇ ಆಂತ್ರಿಕದಲ್ಲಿ ೧೧೦ ರ ವರೆಗೆ ಇರುತ್ತದೆ.

(೯) **ಮಸೂರಾ:-** ಎರಡನೇ ವಾರದಲ್ಲಿ ಮೈಮೇಲೆ ಗುಲಾಬೀ ಬಣ್ಣದ ಸಣ್ಣ ಬೊಕ್ಕೆಗಳು ಕಾಣಿಸಿಕೊಳ್ಳುತ್ತವೆ. ಈ ಗುಳ್ಳೆಗಳು ಕ್ರಮವಾಗಿ ಎದೆ, ಹೊಟ್ಟೆ, ಮೋರೆ, ಕೈಗಳಮೇಲೆ ಎದ್ದು ತಂತಾನೇ ಅಡಗುತ್ತವೆ.

(೧೦) ಆಂತ್ರಾವರಣದಲ್ಲಿಯ ಗ್ರಂಥಿಗಳು (ಮೆಸೆಂಟೆರಿಕ್ ಗ್ಲ್ಯಾಂಡ್ಸ್) ಬೆಳೆಯುತ್ತವೆ.

(೧೧) ಸಣ್ಣಕರುಳಿನಲ್ಲಿಯ ಪೇಯರ್ಸ ಪ್ಯಾಚಿಸ್ ಎಂಬ ಭಾಗಗಳೂ ಪ್ರದುಷ್ಟವಾಗುತ್ತವೆ.

(೧೨) ಆಧ್ಮಾನ (೧೩) ಮೂತ್ರಾಘಾತ.

(೧೪) **ಗ್ರೀವಾಹುಂಡನ:-** ಕುತ್ತಿಗೆಯನ್ನು ಅತ್ತಿಂದಿತ್ತ ಹೊರಳಿಸುತ್ತಿರುತ್ತಾನೆ.

(೧೫) ಗಲಗ್ರಂಥಿ ಶೋಥ ಮತ್ತು ದಾಹ.

(೧೬) **ಕಂಪ:**– ಕೈಕಾಲುಗಳು ನಡುಗುವದಲ್ಲದೆ, ನಾಲಿಗೆಯೂ ನಡುಗುವದರಿಂದ ರೋಗಿ ತೊದಲುತ್ತಾನೆ.

(೧೭) ಕಾಸ(ಕೆಮ್ಮು) ಶ್ವಾಸನಳಿಕೆ, ಮತ್ತು ಫುಪ್ಫುಸಗಳಲ್ಲಿ ದೋಷ ಹುಟ್ಟಿದರೆ ಕೆಮ್ಮು ಬರುತ್ತದೆ.

(೧೮) **ಪ್ರಲಾಪಕ:**– ಬಡಬಡಿಕೆ ಈ ಜ್ವರದಲ್ಲಿ ರೋಗಿ ಮೆತ್ತಗೆ ಬಡಬಡಿಸುತ್ತಾನೆ.

**ಜ್ವರ ಮರಕಳಿಸೋಣ** (ರಿಲೆಪ್ಸ):– ಜ್ವರಗಳು ನಾರ್ಮಲ್ಲಿಗೆ ಬಂದ ಮೇಲೆ ರೋಗಿಯು ಊಟಮಾಡಿದರೆ ( ಇಲ್ಲಿ ಊಟವೇ ಅಪಥ್ಯ ) ಜ್ವರ ಮರಕಳಿಸಿ ಮತ್ತೆ ೨೧ ದಿನಗಳ ವರೆಗೆ ಬರುತ್ತದೆ. ಅಂತೇ ರೋಗಿಗೆ ಪೂರಾ ಜ್ವರ ಬಿಟ್ಟನಂತರ ಒಂದು ವಾರದ ತರುವಾಯ ಕ್ರಮವಾಗಿ ಸ್ವಲ್ಪ ಸ್ವಲ್ಪೇ ಊಟ ಹಾಕಹತ್ತಿದರೆ ಜ್ವರ ಮರಕಳಿಸುವದಿಲ್ಲ.

**ಉಪದ್ರವಗಳು** (ಕಾಂಪ್ಲಿಕೇಶನ್ಸ):– ಬೇರೆ ಬೇರೆ ಸಂಸ್ಥೆಗಳಲ್ಲಿ ಬೇರೆ ಬೇರೆ ಉಪದ್ರವಗಳಾಗುತ್ತವೆ. [ಅ] ಶ್ವಸನಸಂಸ್ಥೆ:-(೧) ಶ್ವಾಸನಳಿಕಾ ಶೋಥ[ಬ್ರಾಂಕಾಯಟಿಸ್] [೨] ಶ್ಲೇಷ್ಮಕ ಹಾಗೂ ಶ್ವಸನಕ, ಸನ್ನಿಪಾತ, ( ಲೋಬರ ಹಾಗೂ ಬ್ರಾಂಕೋನ್ಯುಮೋನಿಯಾ ) ( ೩) ಫುಪ್ಫುಸಾವರಣ ಶೋಥ, (ಪ್ಲುರಸಿ) [ಆ] ಮೂತ್ರಸಂಸ್ಥೆ:- (೧) ಮೂತ್ರಪಿಂಡ ಶೋಥ ( ನೆಫ್ರಾಯಿಟಿಸ್ ) [೨] ಬಸ್ತಿವಿಕೃತಿ ಇದರಿಂದ ಮೂತ್ರಾಘಾತ, ಮೂತ್ರ ಕೃಚ್ಛ್ರ, ಮೊದಲಾದ ಲಕ್ಷಣಗಳು ಉಂಟಾಗುತ್ತವೆ.

(ಇ) **ಮಜ್ಜಾಸಂಸ್ಥೆ**:– ಮಿದುಳು ಮತ್ತು ಜ್ಞಾನತಂತುಗಳು:- (೧) ಮೂರ್ಛೆ, (೨) ಭ್ರಮೆ, (೩) ಬಡಬಡಿಕೆ [ಡಿಲಿರಿಯಂ], (೪) ಮಸ್ತಿಷ್ಕಾವರಣ ಶೋಥ [ಮೆನಿಂಜಾಯಿಟಿಸ್] ಇತ್ಯಾದಿ.

(ಈ) **ಪಚನಸಂಸ್ಥೆ**:– ಕರುಳಿಗೆ ಛಿದ್ರ(ಪರ್‌ಫೋರೇಶನ್)ವಾಗೋಣ ಇದಲ್ಲದೆ ಸಂದುಗಳಲ್ಲಿ ಶೂಲಿ, ಮಲಗುಹುಣ್ಣು ( ಬೆಡ್‌ಸೊರ್ಸ ) ಕರ್ಣಮೂಲ ಶೋಥ (ಪ್ಯಾರಾ ಟಾಯಿಟಿಸ್) ಕಾಲು ಬಾವು, ಬಸುರಿದ್ದವರಿಗೆ ಗರ್ಭಪಾತ, ತೊಗಲುಸುಲಿಯುವದು, ಕೂದಲುಗಳು ಉದರುವದು, ಮೊದಲಾದ ಉಪದ್ರವಗಳು ಉಂಟಾಗುವವು.

**ನಿದಾನ:–** ಜ್ವರ ಸಂತತವಾಗಿ ನಿಲ್ಲೋಣ, ಬೆವಿಯುದಿರೋಣ, ಮಂದ ನಾಡಿ, ನಾಲಿಗೆಯ ವೈಶಿಷ್ಟ್ಯ, ಕೋಷ್ಠಶೂಲ, ' ಗುರ್ ' ಎಂದು ಹೊಟ್ಟೆ ಯೊದರೋಣ [ಗರ್ಗಲಿಂಗ್] ಮೊದಲಾದ ಲಕ್ಷಣಗಳು ಕಂಡರೆ ನಿದಾನ ಮಾಡಲಿಕ್ಕೆ ಸುಲಭವಾಗುತ್ತದೆ.

**ಭೇದಕ ನಿದಾನ:–** ಶೀತಪೂರ್ವಕ ಜ್ವರ ಮತ್ತು ಆಂತ್ರಿಕ ಜ್ವರ ಇವುಗಳಲ್ಲಿ ಕೆಳಗಿನ ವ್ಯತ್ಯಾಸ ಕಂಡುಬರುತ್ತದೆ.

| ಮಲೇರಿಯಾ | ಟಾಯಫಾಯಿಡ್ |
|---|---|
| ಚಳಿಯಾಗುತ್ತದೆ | ಚಳಿ × × |
| ಬೆವರುತ್ತದೆ | ಬೆವರು × × |
| × × | ಮಧುರಾ |
| ತೀವ್ರನಾಡಿ | ಮಂದನಾಡಿ |
| ಕ್ರಿಮಿಗಳು ಮಲೇರಿಯಲ್ ಪ್ಯಾರಾಸಾಯಟ್ಸ್. | ಟಾಯಫಾಯಿಡ್ ಬ್ಯಾಸಿಲಸ್. |

ಜಂತುಗಳಿಂದಲೂ ಆಂತ್ರಿಕ ಜ್ವರದ ಲಕ್ಷಣಗಳು ಕಂಡುಬರುವ ದುಂಟು. ಇಂಥಲ್ಲಿ ಕ್ರಿಮಿಶೋಧನವಾದರೆ ಜ್ವರ ಬಿಡುತ್ತವೆ.

**ಕ್ಷಯ ಮತ್ತು ಆಂತ್ರಿಕ:–** ಕ್ವಚಿತ್ತಾಗಿ ಆಂತ್ರಿಕ ಜ್ವರದ ಅವಧಿ ಬಹಳ ಅಂದರೆ ೮೪ ದಿನಗಳ ವರೆಗೂ ಹೋದರೆ ಕ್ಷಯ ಉತ್ಪನ್ನವಾದ ಉದಾಹರಣೆಗಳೂ ಉಂಟು. ಕ್ಷಯವಾದಾಗ ಆಂತ್ರಿಕ(ಟಾಯ್‌ಫಾಯಿಡ್)ದ ನಿದಾನಮಾಡಿದರೂ ತಪ್ಪುತ್ತದೆ. ಇಂಥ ಸ್ಥಿತಿಯಲ್ಲಿ ಕ್ಷ ಕಿರಣ (ಎಕ್ಸರೆ), ಕಫ ಮತ್ತು ರಕ್ತಗಳ ಪರೀಕ್ಷೆಗಳಿಂದ ನಿದಾನಮಾಡಲು ಅನುಕೂಲ ವಾಗುವದು.

**ಉಪದಂಶ** (ಸಿಫಿಲಿಸ್) **ಹಾಗೂ ಆಂತ್ರಿಕ:–** ಉಪದಂಶದ ಹಳೆಯ ಅವಸ್ಥೆಯಲ್ಲಿ ಆಂತ್ರಿಕದಂತೆ ಸಂತತವಾಗಿ ಜ್ವರ ಬರುತ್ತವೆ. ಆದರೆ ಅದರಲ್ಲಿ ಆಂತ್ರಿಕದಂತೆ ನಾಡಿ ಮಂದವಾಗಿರುವದಿಲ್ಲ. ಅಲ್ಲದೆ ಉಪದಂಶದ ವಿಶಿಷ್ಟ ಚರಿತ್ರೆ ಇದ್ದೇ ಇರುತ್ತದೆ. ಅಥವಾ ರಕ್ತಪರೀಕ್ಷೆಯಿಂದಲೂ ನಿದಾನ ಮಾಡಬಹುದು.

**ಸಾಧ್ಯಾಸಾಧ್ಯತ್ವ:**— ಉಪದ್ರವ ವಿರಹಿತ ಆಂತ್ರಿಕವು ಸಾಧ್ಯವಾಗಿ ರುತ್ತದೆ. ಆದರೆ ಉಪದ್ರವಗಳ ತೀವ್ರತೆಯು ಬೆಳೆದಂತೆ ರೋಗವು ಕಷ್ಟ ಸಾಧ್ಯ ಇಲ್ಲವೆ ಅಸಾಧ್ಯದ ಮಟ್ಟಕ್ಕೆ ಬಂದುನಿಲ್ಲುತ್ತದೆ. ಮೇದೋಭೂಯಿಷ್ಟತಾ, ಹೃದಯ ದೌರ್ಬಲ್ಯ, ಮಧುಮೇಹ, ಮದ್ಯಪಾನದಿಂದುಂಟಾದ ಯಕೃತಿನ ದೋಷವೇ ಮೊದಲಾದ ಕಾರಣಗಳಿಂದ ರೋಗಿ ಕೈಬಿಡುತ್ತಾನೆ. ಅದರಂತೆ ಪುಪ್ಪುಸ ವಿಕೃತಿ (ಡಬಲ್‌ನ್ಯುಮೋನಿಯಾ) ಮೂತ್ರ ಪಿಂಡವಿಕಾರ ಮತ್ತು ತಜ್ಜನ್ಯ ಮೂತ್ರಾಘಾತ, ಮಸ್ತಿಷ್ಕ ವಿಕೃತಿ, ಆಂತ್ರವ್ರಣ ಇತ್ಯಾದಿ ಉಪದ್ರವಗಳೂ ಪ್ರಾಣಘಾತಕಗಳೇ ಆಗಿವೆ. ರೋಗದ ಕೊನೆಯ ಸ್ಥಿತಿಯಲ್ಲಿ ಬಿಕ್ಕಳಿಕೆ, ರಕ್ತಪಿತ್ತ ಮೊದಲಾದ ಲಕ್ಷಣಗಳು ಕಂಡುಬಂದರೆ ಕಷ್ಟಸಾಧ್ಯ ವೆಂದು ತಿಳಿಯಬೇಕು.

**ವಯಸ್ಸು:**— ಮಕ್ಕಳಿಗಿಂತಲೂ ದೊಡ್ಡವರಲ್ಲಿ ಸಾವಿನ ಪ್ರಮಾಣ ಹೆಚ್ಚಾಗಿ ಕಂಡುಬರುತ್ತದೆ.

**ನಾಡಿ:**— ನಾಡಿಯ ವೇಗವು ತೀವ್ರ ಅಂದರೆ ೧೪೦ ಅಥವಾ ಅದಕ್ಕೂ ಹೆಚ್ಚಾದರೆ ರೋಗಿಗೆ ಅಪಾಯವಾಗುತ್ತದೆ. ಇದಕ್ಕೆ ವಿಪರೀತವಾಗಿ ನಾಡಿ ಕ್ಷೀಣ ( ಥ್ರೆಡೀಪಲ್ಸ ) ವಾದರೂ ರೋಗಿ ಕೈಬಿಡುತ್ತಾನೆ.

**ಜ್ವರ:**— ಜ್ವರವೇಗ ೧೦೭ ಅಂಶಕ್ಕೆ ಏರಿದರೆ ಬಹುಶಃ ರೋಗಿಯ ಆಶೆ ಬಿಟ್ಟುಬಿಡಬೇಕು. ಹಾಗೆಯೇ ಆಕಸ್ಮಾತ್ತಾಗಿ ಜ್ವರಗಳು ೯೭ಕ್ಕೆ ಇಳಿದರೂ (ಕ್ರಾಯಿಸಿಸ್) ಮತ್ತು ನಾಡಿಗಳು ಮಂದ ಮಂದವಾಗಹತ್ತಿದರೂ ರೋಗಿ ಸಾಯುತ್ತಾನೆ. ಬಸುರಿದ್ದಾಗ ಅಥವಾ ಬಾಣಂತಿಯಾದಾಗ ಆಂತ್ರಿಕ ಬಾಧೆ ತೀವ್ರವಾದರೆ ಸಾವಿನ ಸಂಭವ ಹೆಚ್ಚಾಗುತ್ತದೆ. ರೋಗಿಯು ಅವಿಚಾರಿ, ಹಟಮಾರಿ, ಅಪಥ್ಯಮಾಡುವವ, ಹಠಾತ್ತಾಗಿ ಎದ್ದು ಕೂಡೋಣವೇ ಮೊದಲಾದ ಕಾರಣಗಳಿಂದ ಸಾಮಾನ್ಯ ಆಂತ್ರಿಕದಲ್ಲಿಯೂ ಕರುಳಿಗೆ ಛಿದ್ರಗಳಾಗಿ, ತೀರಿಹೋದ ಉದಾಹರಣೆಗಳೂ ಸಾಕಷ್ಟಿವೆ. ಇದಕ್ಕೆ ವಿರುದ್ಧವಾಗಿ ಹಲವಾರು ಉಪದ್ರವಗಳ ಸಂಕರವಾಗಿಯೂ ವೈದ್ಯರ ಅಧೀನನಾಗಿರುವ ಜ್ಞಾಪಕ [ ತಿಳಿವಳಿಕೆಯುಳ್ಳ ] ಸಾತ್ವಿಕನಾದ ರೋಗಿ ಸುಧಾರಿಸಿದ ಉದಾಹರಣೆಗಳೂ ಅಲ್ಪ ಸ್ವಲ್ಪವಿಲ್ಲ.

**ದೋಷದೂಷ್ಯ ವಿಚಾರ:**— ಮೊದಲು ಬಣ್ಣಿಸಿದ ಮೇರೆಗೆ ಇದು ಸಾನ್ನಿಪಾತಿಕ ರೋಗವಾಗಿದೆ. ಅಂದರೆ ಇದರಲ್ಲಿ ವಾತ, ಪಿತ್ತ, ಕಫ ಈ ಮೂರೂ ದೋಷಗಳ ದುಷ್ಟಿಯಾಗಿರುತ್ತದೆ. ಆದರೂ ಪ್ರಕೃತಿಭೇದ ಮತ್ತು ಬೇರೆ ಉಪದ್ರವಗಳ ಪರಿಣಾಮದಿಂದಾಗಿ ಇದರಲ್ಲಿ ಒಳ್ಳೇ ಸ್ವತಂತ್ರ ವಾಗಿ ಪ್ರತಿಯೊಂದು ದೋಷದ ಲಕ್ಷಣಗಳು ಕಂಡುಬರುತ್ತವೆ. ಉದಾ:- ವಾತಾಧಿಕ್ಯವಾಗಿದ್ದರೆ ತಲೆಶೂಲಿ, ಮೈಮುರಿತ, ಹೊಡೆತ, ನಡುಗು, ಶ್ವಾಸ, ಬಿಕ್ಕು, ಬಡಬಡಿಸೋಣ ಇವೇ ಮುಂತಾದ ಲಕ್ಷಣಗಳು; ಪಿತ್ತಾಧಿಕ್ಯವಾಗಿದ್ದರೆ ನೀರಡಿಕೆ, ಒಳಗೆ ಝುಳ, ರಕ್ತಮೂತ್ರ, ಅತಿಸಾರ, ರಕ್ತಪಿತ್ತ, ತಲೆತಿರು ಗೋಣಗಳು; ಕಫಾಧಿಕ್ಯವಾಗಿದ್ದರೆ ಕೆಮ್ಮು, ಕಫಬೀಳುವದು, ಫುಪ್ಫುಸ ವಿಕೃತಿ, [ನ್ಯುಮೋನಿಯಾ] ತಂದ್ರಾ, ಮೊದಲಾದ ಲಕ್ಷಣಗಳು ಕಂಡು ಬರುತ್ತವೆ. ಅಲ್ಲದೆ ರಸ, ರಕ್ತ, ಮಾಂಸ ಮುಂತಾದ ದೂಷ್ಯಗಳು ದೂಷಿತ ವಾಗುತ್ತವೆ

**ಸೂಚನೆ:**— ದೋಷದೂಷ್ಯ ವಿಚಾರವು ಆಂತ್ರಿಕದಲ್ಲಿಯು ಒಳ್ಳೇ ಮಹತ್ವದ ವಿಷಯವಾಗಿದೆ. ಚಿಕಿತ್ಸೆಯ ಸಿದ್ಧಿ ಇದನ್ನೇ ಅವಲಂಬಿಸಿದೆ. ಶುದ್ಧ ಆಯುರ್ವೇದ ಪದ್ಧತಿಯಿಂದ ಉತ್ತಮವಾಗಿ ಆಂತ್ರಿಕದ ಚಿಕಿತ್ಸೆಯನ್ನು ಮಾಡಬರುತ್ತದೆ. ಮತ್ತು ಚನ್ನಾಗಿ ಯಶಸ್ಸೂ ದೊರೆತ ಅನುಭವವಿದೆ. ಅ್ಯಲೋಪಥಿಗೆ ಅನುಸರಿಸಿ ಆಂತ್ರಿಕ ಕ್ರಿಮಿಗಳ ಸಂಶೋಧನೆ ಆದೆಷ್ಟೋ ನಡೆದರೂ ಇನ್ನೂ ಆಂತ್ರಿಕದ ಮೇಲೆ ಪ್ರಭಾವೀ (ಸ್ಪೆಸಿಫಿಕ್) ಔಷಧ ದೊರೆತಿಲ್ಲ. ಅಂತೇ ಚಿಕಿತ್ಸಕ ಡಾಕ್ಟರರನೇಕರಿಗೆ ಆಯುರ್ವೇದವನ್ನು ಅವಲಂಬಿಸಬೇಕಾಗುತ್ತದೆ. ಪರಸ್ಪರ ವಿರುದ್ಧವಾದ ಅನೇಕ ಲಕ್ಷಣಗಳ ತೊಡಕಿದ್ದಾಗ ಚಿಕಿತ್ಸೆಮಾಡುವಲ್ಲಿ ದೊಡ್ಡ ದೊಡ್ಡ ಬಲ್ಲವರೂ ದಿಕ್ಕುತಪ್ಪಿ ಹೋಗುತ್ತಾರೆ. ಆದರೆ ಸೂಕ್ಷ್ಮವಾಗಿ ದೋಷದೂಷ್ಯಗಳ ವಿಚಾರಮಾಡಿ ಆಯುರ್ವೇದದ ಉಪಚಾರಮಾಡಿದರೆ ಇಂಥ ಭಯಂಕರ ಅವಸ್ಥೆಯಲ್ಲಿಯೂ ಆಶೆಯ ಕಿರಣಗಳು ಕಾಣಹತ್ತುತ್ತವೆ.

## ಚಿಕಿತ್ಸೆ

ಮುಖ್ಯವಾಗಿ ಚಿಕಿತ್ಸೆಯಲ್ಲಿ ಎರಡು ಪ್ರಕಾರಗಳಾಗುತ್ತವೆ. ಒಂದು ಪ್ರತಿಬಂಧಕ ಮತ್ತೊಂದು ಪ್ರತೀಕಾರಾತ್ಮಕ.

**ಪ್ರತಿಬಂಧಕ:—** ಈ ರೋಗ ಸಾಂಸರ್ಗಿಕವಾಗಿ ಮತ್ತು ಪಿಡುಗಿನಲ್ಲಿ ಬರುವದುಂಟು. ಆದ್ದರಿಂದಲೇ ಇದು ಹಬ್ಬಬಾರದೆಂದು ಬಹಳ ಎಚ್ಚರ ತಕ್ಕೊಳ್ಳಬೇಕಾಗುತ್ತದೆ. ರೋಗಿಯ ಬಳಿಯಲ್ಲಿ ಬರುವ ಜನರಿಗೆಲ್ಲ ಆಂತ್ರಿಕದ ಇನಾಕ್ಯೂಲೇಶನ್ ಚುಚ್ಚುತ್ತಾರೆ. ಆದರೂ ಇದೊಂದು ಒಳ್ಳೇ ಪ್ರಭಾವೀ ಉಪಾಯವೆಂದು ಒಪ್ಪಲಾಗುವದಿಲ್ಲ. ಅಲ್ಲದೆ ಇವರ ಇನಾಕ್ಯೂಲೇಶನ್ ಬಹಳೇ ತಾಪದಾಯಕವಾಗಿರುತ್ತದೆ.

ರೋಗಿಯ ಮಲಮೂತ್ರಗಳ ಮೂಲಕವಾಗಿ ರೋಗಜಂತುಗಳು ಹಬ್ಬುತ್ತವೆಯಾದ್ದರಿಂದ ಮಲಮೂತ್ರಗಳನ್ನು ನಿರ್ಜಂತುಕ ಅಂದರೆ ಆ ಕ್ರಿಮಿಗಳು ಸಾಯುವಂತೆ ಆ ಮಲಮೂತ್ರಗಳ ವ್ಯವಸ್ಥೆಮಾಡಬೇಕು. ಇದಲ್ಲದೆ ಮನೆಯಲ್ಲಿಯೂ ಸ್ವಚ್ಛತೆಯನ್ನಿಡಬೇಕು. ಸ್ವಲ್ಪಾದರೂ ನೊಣಗಳ ತ್ರಾಸವಾಗಬಾರದು. ನೊಣಗಳಂತಹ ಘಾತುಕ ಪ್ರಾಣಿ ಮತ್ತೊಂದಿಲ್ಲ. ಉಪಚಾರಮಾಡುವವರು ಮಿತಾಹಾರ ವಿಹಾರಗಳಿಂದ ತಮ್ಮ ಪ್ರಕೃತಿಯನ್ನು ಗಟ್ಟಿಯಾಗಿಟ್ಟುಕೊಂಡಿರಬೇಕು. ಊಟಮಾಡುವಾಗ ಕೈಕಾಲುಗಳನ್ನು ಜಳ ಜಳ ತೊಳೆದುಕೊಳ್ಳುವದನ್ನು ತಪ್ಪಬಾರದು. ಹಾಗೆಯೇ ರೋಗಿಯ ಬಟ್ಟೆಬರೆ ಹಾಸಿಗೆಗಳನ್ನು ಶುಚಿಯಾಗಿ ಇಡಬೇಕು.

**ಪ್ರತೀಕಾರಾತ್ಮಕ:—** ಉಪಚಾರಮಾಡುವಾಗ ಆಹಾರ, ವಿಹಾರ ಮತ್ತು ಔಷಧಿಗಳ ಸಂಬಂಧವಾದ ಮಹತ್ವದ ನಿಯಮಗಳನ್ನು ಉಪಚಾರಕರು ಲಕ್ಷ್ಯದಲ್ಲಿಟ್ಟಿರಬೇಕು.

**ಆಹಾರ:—** ಈ ಆಂತ್ರಿಕ ವಿಕಾರದಲ್ಲಿ ಕರುಳಿಗೆ ಬಾವು ಬರುವದರಿಂದ ಅದಕ್ಕೆ ತೂತಾಗುವದನ್ನು ತಪ್ಪಿಸಲೆಂದು ರೋಗಿಗೆ ತೆಳ್ಳಗಿನ ಆಹಾರ (ಲಿಕ್ವಿಡ್‌ಡಾಯಿಟ್) ವನ್ನು ಕೊಡುವದು ಹಿತಕರ. ಹಾಲು, ಮೋಸಂಬೀ ರಸ, ದಾಳಿಂಬರ ರಸ, ಬಾರ್ಲೀ ನೀರು, ಭತ್ತದರಳಿನ ನೀರು, ಕಾಫಿ, ಕಾದಾರಿದ ನೀರು, ಆಗಲೇ ಕಡೆದ ಮಜ್ಜಿಗೆಗಳನ್ನು ಕೊಡಲು ಅಡ್ಡಿಯಿಲ್ಲ. ಇವೆಲ್ಲ ಪೇಯಗಳನ್ನು ಚನ್ನಾಗಿ ಸೋಸಿ ಕೊಡಬೇಕು. ಅದರಲ್ಲಿ ಕಣಗಳು ಮತ್ತು ಎಳೆಗಳು ಸ್ವಲ್ಪ ಕೂಡಾ ಇರಕೂಡದು. ಗಟ್ಟಿಯಾದ ಆಹಾರವು ಕರುಳಿಗೆ ಇಳಿಯುವಷ್ಟರಲ್ಲಿ ತಿಳುವಾಗುತ್ತದೆ; ಅಂದಾಗ ಆಂತ್ರಿಕದಲ್ಲಿ

ಘನಾನ್ನ-ಗಟ್ಟಿಯಾದ ಆಹಾರವನ್ನು ಏಕೆ ಕೊಡಕೂಡದೆಂಬ ವಾದ ಇಂದು ಉಪಸ್ಥಿತವಾಗಿದೆ. ಕೆಲತಜ್ಞರು ಘನಾನ್ನವನ್ನು ಕೊಟ್ಟುಬಿಡುತ್ತಾರೆ. ಆದರೆ ಅದಿನ್ನೂ ಸರ್ವಸಮ್ಮತ ಉಪಚಾರವಾಗಿಲ್ಲ.

**ವಿಹಾರ:**—ರೋಗಿ ಹಾಸಿಗೆಯಲ್ಲಿ ಸ್ವಸ್ಥವಾಗಿ ಮಲಗಿಕೊಂಡಿರುವಂತೆ ಒತ್ತಾಯಮಾಡಬೇಕು. ಹೆಚ್ಚಿನ ಚಟುವಟಿಕೆಯಿಂದ ಕರುಳಿಗೆ ತೂತಾಗುವ ಸಂಭವವಿರುತ್ತದೆ. ಆದ್ದರಿಂದ ಮಲಮೂತ್ರಗಳಿಗಾಗಿಯೂ ಕೂಡ ಎದ್ದು ಕುಳ್ಳಿರಿಸಲಾಗದು.

**ಸ್ಪಂಜಿಂಗ್:**— ಮೈ ಒರೆಸೋಣ:- ಸಂತತವಾಗಿ ಜ್ವರನಿಂತ ಕಾರಣ ಮೈ ನಾರುತ್ತದೆ. ಆದ್ದರಿಂದ ದಿನಬಿಟ್ಟು ದಿನಕ್ಕೆ ರೋಗಿಯ ಮೈ ಒರೆಸಬೇಕು. ಈ ನೀರು ಕಾಸುವಾಗ ಅದರಲ್ಲಿ ಕಹಿಬೇವಿನ ತೊಪ್ಪಲ ಹಾಕಬೇಕು. ಆ ನೀರಿನಲ್ಲಿ ಟಾವೆಲ್ಲು ತೋಯಿಸಿ ಹಿಂಡಿ ಒರೆಸಿ ಮತ್ತೊಂದು ಒಣ ಟಾವೆಲ್ಲಿನಿಂದ ಒರೆಸಬೇಕು. ಪ್ರತಿಸಲಕ್ಕೂ ನೀರು ಬದಲಿಸಬೇಕು. ಯಾವದೇ ಜ್ವರದಲ್ಲಾದರೂ ಈ ಉಪಚಾರಮಾಡಲು ಆತಂಕವಿಲ್ಲ. ಆದರೆ ರೋಗಿಯ ಮೈಗೆ ತಂಗಾಳಿ ತಾಕಬಾರದು ಮತ್ತು ಆಯಾಸವೂ ಆಗಬಾರದು.

**ಜಲಚಿಕಿತ್ಸೆ:**— ಜ್ವರ ೧೦೫° ಕ್ಕಿರುವಾಗ ಅವಗಾಹನ ಸ್ನಾನ-ಕಟಿಸ್ನಾನ ಅಂದರೆ ಟಬ್ಬಾಥಮಾಡುವ ಪದ್ಧತಿಯೊಂದಿದೆ. ಬೆಚ್ಚಗಿನ ಅಥವಾ ತಣ್ಣೀರನ್ನಾಗಲೀ ಉಪಯೋಗಿಸಬೇಕು. ಇದಕ್ಕೆ ಮೊದಲು ರೋಗಿಗೆ ಹುರಿಪು ಬರುವ ಪೇಯ-ಕಾಫಿ ಕೊಡಬೇಕು. ರೋಗಿಯನ್ನು ೧೫ ನಿಮಿಷ ನೀರಿನಲ್ಲಿ ಕುಳ್ಳಿರಿಸಬೇಕು. ಇಷ್ಟರಲ್ಲಿಯೇ ರೋಗಿಗೆ ತಂಡಿಹತ್ತಿದರೆ ಕೂಡಲೇ ಎಬ್ಬಿಸಿಬಿಡಬೇಕು. ಟಬ್ಬಾಥಕೊಡುವಾಗ್ಗೆ ಏಳು ಕೂಡುವ ಯಾವದೇ ಅವಸ್ಥೆಯಲ್ಲಿ ರೋಗಿಗೆ ಧಕ್ಕೆಯಾಗಬಾರದು.

**ನಿಷೇಧ:**—ರಕ್ತಸ್ರಾವ, ಹೊಟ್ಟೆಯುಬ್ಬರ ಮತ್ತು ಹೃದಯದ ಅಶಕ್ತಿಯುಳ್ಳವರಿಗೆ ಟಬ್ಬಾಥಕೊಡಕೂಡದು.

**ಮಾತ್ರಾಬಸ್ತಿ:**— ಗ್ಲಿಸ್‌ರಿನ್ ಸಿರಿಂಜ್:- ಶೌಚಕ್ಕೆ ಆಗದಿದ್ದರೆ ಎರಡು ದಿನಕ್ಕೊಮ್ಮೆ ಗ್ಲಿಸ್‌ರಿನ್ ಪಿಚಕಾರಿ ಕೊಡಬೇಕು. ಹೀಗೆ ಕರುಳನ್ನು ಸ್ವಚ್ಛಮಾಡದಿದ್ದಲ್ಲಿ ವಿಕಾರ ಬೆಳೆಯುತ್ತ ಹೋಗುತ್ತದೆ. ಈ ಜ್ವರದಲ್ಲಿ

ರೇಚಕ ಅಥವಾ ಎನಿಮಾ ಕೊಡಕೂಡದು. ಕಕ್ಕೀಕಾಯಿಯ ಮೇಣವನ್ನು ಸ್ವಲ್ಪ ಪ್ರಮಾಣ ಹಾಲಲ್ಲಿ ಹಾಕಿ ಕುದಿಸಿ ಸೋಸಿಕೊಡುವದರಿಂದ ಮಲಾವ ರೋಧ ಕಮ್ಮಿಯಾಗುತ್ತದೆ.

**ಔಷಧಿ:**— ಆಂತ್ರಿಕದಲ್ಲಿ ಯಾವದೇ ತರಹದ ತೀಕ್ಷ್ಣ, ಜ್ವರಘ್ನ ಮತ್ತು ಜಿವರಿಸುವ ಔಷಧಿಯನ್ನು ಕೊಡಕೂಡದು. ಸಾಮಾನ್ಯವಾಗಿ ಬಲು ಸಾದಾ ಔಷಧಿಗಳಿಂದ ಉತ್ತಮವಾಗಿ ಚಿಕಿತ್ಸೆ ಮಾಡಬರುತ್ತದೆ. ನಿಸರ್ಗದ ವಿರುದ್ಧವಾಗಿ ಯಾವ ಉಪಚಾರವಮಾಡಿದರೂ ಅಪಾಯವೇ ಸಂಭವಿಸುತ್ತದೆ ಹಾಗೆಯೇ ರೋಗಿಯ ಶಕ್ತಿಪಾತವಾಗದಂತೆಯೂ ನೋಡಿಕೊಳ್ಳಬೇಕು. ಇದರಲ್ಲಿ ಹೃದಯ ನಿಃಶಕ್ತವಾಗುತ್ತ ಹೋಗುತ್ತದೆ. ಆರಂಭದಿಂದ ಇದರ ಬಗ್ಗೆ ಎಚ್ಚರದಿಂದಿರಬೇಕಾಗುತ್ತದೆ. ಕೆಳಗಿನಂತೆ ಚಿಕಿತ್ಸೆಯ ಕ್ರಮವನ್ನು ಇಡಬೇಕು.

**ಮೊದಲವಾರ:**— ಚಂದ್ರಪುಟಿ ಪ್ರವಾಳ ೨ ಗುಂಜಿ + ಅಮೃತ ಸತ್ವ ೨ ಗುಂಜಿ ೪. ೪ ತಾಸಿಗೊಮ್ಮೆಯಂತೆ ಹಾಲಿನಲ್ಲಿ. ರಾತ್ರಿ ಮಲಗುವಾಗ ೪ ಗುಂಜಿ ಕಕ್ಕೀಕಾಯಿ ಮೇಣವನ್ನು ಅರ್ಧ ಕಪ್ಪು ಹಾಲು ಅಷ್ಟೇ ನೀರಿನಲ್ಲಿ ಕುದಿಸಿ ಸೋಸಿಕೊಡಬೇಕು.

**ಎರಡನೇವಾರ:**—(೧)ಲಕ್ಷ್ಮೀನಾರಾಯಣ ರಸ ೧ ಗುಂಜಿ + ಅಮೃತ ಸತ್ವ ೨ ಗುಂಜಿ, ೨. ೨ ಮುಂಜಾನೆ ಸಂಜೆಗೆ ದಾಳಿಂಬರ ರಸದಲ್ಲಿ.

(೨) ಸುವರ್ಣ ಸೂತಶೇಖರ ೧ ಗುಂಜಿ + ಪ್ರವಾಳ. ಚ. ಪು. ೨ ಗುಂಜಿ, ೨ ಹಗಲು ರಾತ್ರಿಗಳಲ್ಲಿ ನೆಲ್ಲೀಕಾಯಿ ಪಾಕದಲ್ಲಿ.

(೩) ಗ್ಲಿಸ್‌ರೀನ್ ಪಿಚಕಾರಿಯನ್ನು ದಿನಬಿಟ್ಟು ದಿನಕ್ಕೆ ಕೊಡಬೇಕು.

**ಮೂರನೇ ವಾರ:**— ಇಷ್ಟರಲ್ಲಿ ಹೃದಯ ಅಶಕ್ತವಾಗಿರುತ್ತದೆ. ಇದರ ಮೇಲೆ ಲಕ್ಷ್ಮೀವಿಲಾಸ ಗುಟಿಕಾ ೧ ಗುಂಜಿ + ಪ್ರವಾಳ ಚಂ. ಪು. ೪ ಗುಂಜಿ ತುಳಸೀರಸ + ಜೇನುತುಪ್ಪಗಳಲ್ಲಿ. ನೆಕ್ಕಿಸಬೇಕು. ಇದಲ್ಲದೆ ಎರಡನೇ ವಾರದ ಚಿಕಿತ್ಸೆಯ ಕ್ರಮವನ್ನು ಮುಂದರಿಸಬೇಕು. ಈ ರೀತಿಯಾಗಿ ನಿರುಪದ್ರವ ಆಂತ್ರಿಕದಲ್ಲಿ ಸಾಮಾನ್ಯ ಚಿಕಿತ್ಸೆಮಾಡಬೇಕು. ಆದರೆ ನಡುನಡುವೆ

ಬೇರೆ ಉಪದ್ರವಗಳು ತೊಡಕಾಂಟಾದಾಗ ಆಯಾ ಉಪದ್ರವಗಳಿಗೆ ತಕ್ಕ ಚಿಕಿತ್ಸೆಯನ್ನು ಈ ಕೆಳಗಿನಂತೆ ಮಾಡಬೇಕು.

**ಜ್ವರ:**– ಪ್ರವಾಳ, ಅಮೃತ ಸತ್ವ, ಮೌಕ್ತಿಕ ಇವು ಜ್ವರದಲ್ಲಿ ಒಳ್ಳೇ ಪ್ರಭಾವಿಯಾದ ಔಷಧಿಗಳು. ಹಾಗೆಯೇ ಲಕ್ಷ್ಮೀನಾರಾಯಣ ರಸವನ್ನೂ ಜ್ವರಬಿಡುವವರೆಗೂ ಕೊಡಲಿಕ್ಕೆ ಅಡ್ಡಿಯಿಲ್ಲ. ಮತ್ತು ಜ್ವರ ಹೆಚ್ಚಿಗೆ ಇದ್ದಾಗ (೧೦೩) ಕೋಲನ್ ವಾಟರ ಅಥವಾ ತಣ್ಣೀರಿನ ಪಟ್ಟಿಯನ್ನು ಹಣೆಗೆ ಹಾಕಬೇಕು.

**ಹೃದಯ ದೌರ್ಬಲ್ಯ:**– ಎರಡನೇ ವಾರಕ್ಕೆ ಲಕ್ಷ್ಮೀವಿಲಾಸ ಗುಟಿಕೆಯನ್ನು ನೆಕ್ಕಿಸಲು ಆರಂಭಿಸಿದ ಮೇಲೆ ಹೃದಯ ದೌರ್ಬಲ್ಯ, ಶಕ್ತಿ ಪಾತಗಳು ಸಂಭವಿಸುವದಿಲ್ಲ.

**ಪಿತ್ತವೃದ್ಧಿ:**– ಮೌಕ್ತಿಕ, ಪ್ರವಾಳ, ಸುವರ್ಣ ಸೂತಶೇಖರ, ಸುವರ್ಣಮಾಕ್ಷಿಕ, ಮೌಕ್ತಿಕಯುಕ್ತ ಕಾಮದುಘಾ ಮೊದಲಾದ ಔಷಧಿಗಳನ್ನು ಕೊಡಬೇಕು.

**ಅತಿಸಾರ:**– ಸುವರ್ಣ ಸೂತಶೇಖರ ಅರ್ಧ ಗುಂಜಿ + ಮುಕ್ತಾಶುಕ್ತಿಕ ೧ ಗುಂಜಿ ೨ ಚೀಟು ಬಿಸಿನೀರಿನಲ್ಲಿ.

**ಕಫಜಕಾಸ:**– ಸಿತೋಪಲಾದಿ ೪ ಗುಂಜಿ + ಶೃಂಗ ೧ ಗುಂಜಿ, ಜೇಷ್ಠಮಧು ೪ ಗುಂಜಿ ೪ ಚೀಟು ಅಡಸಾಲದೆಲೆಯ ರಸ ಮತ್ತು ಜೇನಿನಲ್ಲಿ. ಅಲ್ಲದೆ ಕರ್ಪೂರಾದಿವಟಿಯನ್ನು ಕಲ್ಲುಸಕ್ಕರೆಯೊಡನೆ ಬಾಯಿಯಲ್ಲಿ ಹಿಡಿಯಬೇಕು.

**ವಾತದುಷ್ಟಿ:**– ಎಚ್ಚರಿಲ್ಲದಾಗ ಬಡಬಡಿಕೆ, ಓಡೋಣ, ಕಚ್ಚೋಣ, ಹೊಡೆಯೋಣ, ಚೀರುವದು, ನಗುವದೇ ಮೊದಲಾದ ಲಕ್ಷಣಗಳಿದ್ದಾಗ ಮಹಾವಾತ ವಿಧ್ವಂಸ ೧ ಗುಂಜಿ + ಪ್ರವಾಳ ೨ ಗುಂಜಿ ಜೇನಿನಲ್ಲಿ ಅಥವಾ ಕಾಡಿಗ್ಗರಿಗಿನ ರಸ, ತುಳಸೀರಸ ಮತ್ತು ಜೇನುತುಪ್ಪದಲ್ಲಿ ನೆಕ್ಕಿಸಬೇಕು.

**ಬದ್ಧಕೋಷ್ಠ:**– ಅಭಯಾರಿಷ್ಟ ಅರ್ಧತೊಲಿ, ಶುದ್ಧೋದಕ ಅರ್ಧ ತೊಲಿ, ಕೂಡಿಸಿ ೨ ಭಾಗಮಾಡಿ ೨ ವೇಳೆ ಕೊಡಬೇಕು.

**ರಕ್ತಪಿತ್ತ. ಗಂಟಲಿನಿಂದ:**– ಮೃಗಶೃಂಗ, ಪ್ರವಾಳ, ಸುವರ್ಣ ಮಾಕ್ಷಿಕಗಳನ್ನು ಅಡಸಾಲದ ರಸದಲ್ಲಿ ಕೊಡಬೇಕು.

**ಆನಾಹ:**– ಹೊಟ್ಟೆಯುಬ್ಬರ:- ವಾತ ಹೆಚ್ಚಾದ ಲಕ್ಷಣ. ಟವರ್ ಟವರ್ ಶಬ್ದವಾಗುತ್ತದೆ. ಔಡಲಕಟ್ಟಿಗೆಯ ಇದ್ದಲು + ಸೈಂಧಲವಣ ಬಿಸಿನೀರಿನಲ್ಲಿ.

**ಹಾಸಿಗೆ ಹುಣ್ಣು:**–ಸಂಗಜೀರಗಿಪುಡಿ+ಟಂಕಣಖಾರ+ಸೊನ್ನೀಕ್ಯಾವಿ+ ತುಪ್ಪ ಕೂಡಿಸಿದ ಮಲಾಮು ಹಚ್ಚಬೇಕು. ವ್ರಣಶೋಧನ ಮತ್ತು ರೋಪಣ ಚಿಕಿತ್ಸೆಯನ್ನು ಮಾಡಬೇಕು· ಶೋಧನ ತೈಲ, ರೋಪಣ ತೈಲಗಳ ಪಟ್ಟಿ ಹಾಕಬೇಕು. ಉರಿವು ಹೆಚ್ಚಿಗೆ ಇದ್ದಲ್ಲಿ ಶತಧೌತಘೃತ ಹಚ್ಚಬೇಕು. ಮತ್ತು ಜಾತ್ಯಾದಿ ತೈಲ, ಜಾಜೀತೊಪ್ಪಲ ರಸದ ಎಣ್ಣೆಯ ಉಪಯೋಗವನ್ನು ಮಾಡಬಹುದು.

**ರಕ್ತಪಿತ್ತ:** ಮೂಗುಬಾಯಿಗಳಿಂದ ಅಥವಾ ಮಲಮೂತ್ರಗಳಿಂದ:— (೧) ಮೌಕ್ತಿಕ ಅರ್ಧ ಗುಂಜಿ, ಸುವರ್ಣಮಾಕ್ಷಿಕ ೨ ಗುಂಜಿ, ಹರಿದ್ರಾ ಚೂರ್ಣ–ಅರಿಷಿಣಪುಡಿ ೪ ಗುಂಜಿ ದಾಳಿಂಬರ ಪಾಕ ಅಥವಾ ವಾಸಾವಲೇಹ ದಲ್ಲಿ ನೆಕ್ಕಿಸಬೇಕು.

(೨) ಹಿಮ–ಕಾದಾರಿದ ನೀರಿನಲ್ಲಿ ನೀಲಕಮಲದ ಹೂವು, ಬಾಳದ ಬೇರು, ರಕ್ತಚಂದನ,ಕರ್ಪುರ, ದೀಪದ್ರಾಕ್ಷಿಗಳನ್ನು ರಾತ್ರಿ ನೆನೆಹಾಕಿ ಬೆಳಿಗ್ಗೆ ಚೆನ್ನಾಗಿ ಕಿವಿಚಿ ತುಪ್ಪ ಸಕ್ಕರೆ ಹಾಕಿ ಸೋಸಿಕೊಡಬೇಕು.

(೩) ಮೌಕ್ತಿಕ ಅಥವಾ ಪ್ರವಾಳ, ಕಮಲದ ಬೀಜ, ಸುವರ್ಣ ಮಾಕ್ಷಿಕ ಹಾಗೂ ನೀಲಕಮಲಗಳನ್ನು ಕೊಡಬೇಕು.

(೪) ಚಂದ್ರಕಲಾ ೨ ಗುಂಜಿ + ಅಮೃತ ಸತ್ವ ೪ ಗುಂಜಿ, ನೆಗ್ಗಲು ಮುಳ್ಳಿನ ಕಷಾಯದಲ್ಲಿ ಕೊಡಬೇಕು.

(೫) ದಾಹ, ಮೂತ್ರಕೃಚ್ಛ್ರ:– ಉಶೀರಾಸವ ೧ ತೊಲಿ + ಪುನರ್ನ ವಾಸವ ೧ ತೊಲಿ ಸಮಃಭಾಗ ನೀರಿನಲ್ಲಿ ಕೊಡಬೇಕು.

**ಜಂತುಗಳು:**– ಆಂತ್ರಿಕದಲ್ಲಿ ಆರಂಭಕ್ಕೇ ಹೊಟ್ಟೆಯಲ್ಲಿ ಕ್ರಿಮಿಗಳ ಉಪದ್ರವವಾಗುವದುಂಟು. ಇದಕ್ಕೆ ಕಪಿಲಾ ೮ ಗುಂಜಿ, ವಾಯುವಡಂಗ ೮ ಗುಂಜಿಇವುಗಳ ಕಷಾಯ ಅಥವಾ ವಾಯುವಡಂಗ ಹಾಕಿ ಕುದಿಸಿದ ನೀರನ್ನೇ ಕುಡಿಯುಲು ಕೊಡಬೇಕು.

**ಮೂತ್ರಾವರೋಧ** [೧] ಚಂದ್ರಪ್ರಭಾ ೨ ಗುಂಜಿ ನೆಗ್ಗಲೀಮುಳ್ಳಿನ ಕಷಾಯದಲ್ಲಿ ಕೊಡಬೇಕು.

[೨] ಪುನರ್ನವಾ ೩ ಮಾಸಿ, ನೆಗ್ಗಲೀಮುಳ್ಳು ೩ ಮಾಸಿ, ತ್ರಿಫಳಾ ೩ ಮಾಸಿ, ದೀಪದ್ರಾಕ್ಷಿ ೨ ತೊಲಿ ಕಷಾಯಮಾಡಿ ಕೊಡುವದು.

[೩] ಇಷ್ಟಕ್ಕೂ ಮೂತ್ರವಾಗದಿದ್ದಲ್ಲಿ ಮೂತ್ರಶಲಾಕಾ [ಕ್ಯಾಥೇಟರ] ದಿಂದ ಮೂತ್ರಮಾಡಿಸಬೇಕು.

**ಕರ್ಣಮೂಲಶೋಥ:**–ಇದು ಬಹಳೇ ಕಷ್ಟದಾಯಕ. ಮೊದಲಿಗೇ ಕ್ಷೀಣನಾಗಿದ್ದ ರೋಗಿಯನ್ನು ಇದು ಮತ್ತಿಷ್ಟು ಹಣ್ಣು ಮಾಡುತ್ತದೆ. ಇದು ಎಳತಾಗಿದ್ದಾಗ ಶೋಥಹರಲೇಪ ತೇದು ಹಚ್ಚಬೇಕು. ಅಥವಾ ಜಿಗಳೀ ಹಚ್ಚಿ ರಕ್ತತೆಗೆಯಬೇಕು. ಇಷ್ಟಾಗಿಯೂ ಬಾವು ಹೆಚ್ಚಿದರೆ, ಕೀವಾಗುವ ದಕ್ಕೆ ಆರಂಭವಾಗುತ್ತದೆ. ಆದರ ಮೇಲೆ ಕಣಕ ಅಥವಾ ಅಗಸೀ ಪೋಟೀಸು ಹಾಕಬೇಕು. ಇಲ್ಲವೇ ಶಸ್ತ್ರಚಿಕಿತ್ಸೆ ಮಾಡಿಸಬೇಕು. ಆಮೇಲೆ ಶೋಧನ, ರೋಪಣ, ಉಪಚಾರ ನಡೆಯಿಸಬೇಕು.

**ಶೂಲ:**– ಆಂತ್ರಿಕ ಟಾಯ್‌ಫಾಯಿಡ್‌ದಲ್ಲಿ ಕೈಕಾಲು ಮೊದಲಾದ ಯಾವದೊಂದು ಭಾಗಕ್ಕೆ ಶೂಲಿ ಶುರುವಾಗಿ ಒಮ್ಮೊಮ್ಮೆ ಆ ಭಾಗಕ್ಕೆ ಬಾವು ಬರುವದುಂಟು. ಇದರಿಂದಾಗಿ ರಾತ್ರಿಯೆಲ್ಲಾ ನಿದ್ದೆ ಬರುವದಿಲ್ಲ. ಇಲ್ಲಿ ವಾತ ಮೂಲಕವಾದ, ದುಷ್ಟಿಯಾಗಿರುತ್ತದೆ. ಇದಕ್ಕೆ ದಶಮೂಲಾರಿಷ್ಟ ೧ ತೊಲಿ, ಪುನರ್ನವಾಸವ ೧ ತೊಲಿ, ಸಮಭಾಗ ನೀರಿನಲ್ಲಿ. ನಾರಾಯಣ, ಬಲಾ, ಚಂದನ ಬಲಾಲಾಕ್ಷಾದಿ ತೈಲಗಳನ್ನು ಮೇಲೆ ಹಚ್ಚಿ ತಿಕ್ಕಿಸಬೇಕು.

**ಶ್ಲೇಷ್ಮಕ ಶ್ವಸನಕ:**– (ನ್ಯುಮೋನಿಯಾ) ಶೃಂಗಶೃಂಗ, ಸಿತೋಪಲಾದಿ, ಟಂಕಣ ಭಸ್ಮವೇ ಮೊದಲಾದ ಕಫನಾಶಕ ಔಷಧಿಗಳನ್ನು ಕೊಡ

ಬೇಕು. ಅಲ್ಲದೇ ಸುವರ್ಣಸೂತಶೇಖರ, ಮಹಾಲಕ್ಷ್ಮೀವಿಲಾಸ ಇತ್ಯಾದಿ ಮದ್ದನ್ನೂ ಕೊಡುತ್ತಿರಬೇಕು. ಮತ್ತು ದ್ರಾಕ್ಷಾಸವ, ಸಮೀರಪನ್ನಗ, ಮಲ್ಲಸಿಂಧೂರ ಮೊದಲಾದ ಕಫದ ಮೇಲಣ ಔಷಧಿಗಳೂ ತಕ್ಕೊಳ್ಳಲು ಯೋಗ್ಯವಾದುವು.

**ಹೃದಯದೌರ್ಬಲ್ಯ:–** ಗಾಬರಿ, ಎದೆಯಲ್ಲಿ ನೋವುಗಳಿದ್ದರೆ, ತ್ರೈಲೋಕ್ಯಚಿಂತಾಮಣಿಯನ್ನು ಉಪಯೋಗಿಸಬೇಕು.

**ಕರುಳಿಗೆ ತೂತಾಗೋಣ:–** ಇದಕ್ಕೆ ಒಹಳೇ ಕಮ್ಮಿ ಪ್ರಮಾಣದಲ್ಲಿ ಅಫು ಅಥವಾ ಪೋಸ್ತಕಾಯಿ ಪುಡಿ ಅಥವಾ ಕಷಾಯ ಮಾಡಿ ಕೊಡುವದಲ್ಲದೆ, ತುಂಬಾ ವಿಶ್ರಾಂತಿ ಅಂದರೆ ತುಸುವೂ ಅಲುಗಾಡದಷ್ಟರ ಮಟ್ಟಿಗೆ ವಿಶ್ರಾಂತಿ ತಕ್ಕೊಳ್ಳಬೇಕು. ಇಂಥ ಸಂದರ್ಭದಲ್ಲಿ, ಶಸ್ತ್ರವೈದ್ಯರ ಅಭಿಪ್ರಾಯವನ್ನೂ ಕೇಳಬೇಕು.

**ಕರುಳಿನಲ್ಲಿ ರಕ್ತಸ್ರಾವ** ಅಥವಾ **ರಕ್ತಾತಿಸಾರ:–** ಒಮ್ಮೊಮ್ಮೆ ಕರುಳಿನಲ್ಲಿಯ ರಕ್ತನಾಳಗಳನ್ನು ಕ್ರಿಮಿಗಳು ತಿಂದುಬಿಡುವದರಿಂದ, ಅಲ್ಲಿ ರಕ್ತಸೋರುತ್ತದೆ. ಮತ್ತು ಹೀಗೇ ಮುಂದೆ ಅದು ಹೊರಬಿದ್ದು ರಕ್ತಜಾಡಿಸಲೂ ಬಹುದು. ಇದು ಭಾರೀ ಭಯಂಕರ ಉಪದ್ರವ. ಇದಕ್ಕೆ (೧) ಹೊಟ್ಟೆಯ ಮೇಲೆ ಬರ್ಫದಚೀಲ ಇಡಬೇಕು. ಇದು ಆಗದಿದ್ದಲ್ಲಿ ತಣ್ಣೀರಿನ ಪಟ್ಟಿಹಾಕಬೇಕು.

(೨) ಅಫುವಿನ ಆರ್ಕ ಅಥವಾ ಪೋಸ್ತಕಾಯಿ ಕುದಿಸಿದ ನೀರಿನ ಬಸ್ತಿ ಎನಿಮಾ ಕೊಡಬೇಕು.

(೩) ಬಾಯಲ್ಲಿ ಬರ್ಫ ಹಿಡಿಯಲು ಕೊಡಬೇಕು.

**ಕೊನೆಯಲ್ಲಿ ನಾಡಿಗಳು ಮಂದವಾಗೋಣ:–** ತಣ್ಣನ್ನ ಬೆವರು ಬರೋಣ, ಕೈಕಾಲುಗಳು ತಣ್ಣಗಾಗೋಣ, ಬೇರೆ ಯಾವದೇ ಮದ್ದಿನಿಂದ ರೋಗಿ ಸುಧಾರಿಸುವ ಲಕ್ಷಣ ಕಾಣದಿದ್ದಾಗ ಕಡೇ ಉಪಾಯವೆಂದು ಹೇಮಗರ್ಭಮಾತ್ರೆಯನ್ನು ½ ಗುಂಜಿಯಿಂದ ⅓ ಗುಂಜೀ ಪರ್ಯಂತ ಹಸಿ ಸುಂಟಿರಸ, ಜೇನುತುಪ್ಪದಲ್ಲಿ ನೆಕ್ಕಿಸಬೇಕು. ಇದು ಒಳ್ಳೇ ಪ್ರಭಾವಿಯಾದ

ಔಷಧಿಯಾಗಿದೆ. ಆದರೆ ಈ ಔಷಧಿ ಕೊಟ್ಟಮೇಲೆ ಬೇರೆ ಔಷಧಿಗಳು ನಾಟುವದಿಲ್ಲವೆಂಬುದನ್ನು ಲಕ್ಷದಲ್ಲಿಟ್ಟಿರಬೇಕು.

ಇದರಿಂದ ನಾಡಿಗಳು ಚೇತರಿಸಿಕೊಳ್ಳುತ್ತವೆ. ಅಸಾಧ್ಯ ರೋಗಿಯ ನಿಂತ ಮಾತುಗಳು ತಿರುಗಿ ಆರಂಭವಾಗುತ್ತವೆ. ರೋಗಿ ನಾಲ್ಕು ಮಾತು ಗಳನ್ನು ಆಡಲು ಸಮರ್ಥನಾಗುತ್ತಾನೆ. ಇಂಥ ಅಸಾಧ್ಯವಾದ ಅವಸ್ಥೆ ಯಲ್ಲಿಂದಲೂ ರೋಗಿ ಗುಣಹೊಂದಿದ ಉದಾಹರಣೆಗಳಿವೆ.

ರೋಗ ಮುಕ್ತಿಯಾದಮೇಲೆ ಶಕ್ತಿ ಬರುವದಕ್ಕೆ 'ಸುವರ್ಣಮಾಲಿನೀ ವಸಂತ ಒಂದೊಂದು ಗುಂಜಿ ಹಾಲಿನಲ್ಲಿ ಅಥವಾ ಲಘುಮಾಲಿನೀ,' ಮಧು ಮಾಲಿನಿ ವಸಂತ ಇಲ್ಲವೆ ಚವನಪ್ರಾಶ ತಕ್ಕೊಳ್ಳಬೇಕು. ಅಲ್ಬೋಸಾಂಗ (ಡಿಶಾನ್‌ಕಂ) ಸಂಜೆ ಬೆಳಗಿನಲಿ, ಅರ್ಧ ಅರ್ಧ ಚಮಚೆಯಂತೆ ಹಾಲಿನಲ್ಲಿ ತಕ್ಕೊಳ್ಳಬೇಕು. ಇದಲ್ಲದೆ ನಾಫಾಟಾನಿಕ್ (ನ್ಯಾಶನಲ್ ಫಾರ್ಮಸಿ) ವನ್ನು ಒಂದೊಂದು ತೊಲಿ ಸಮಭಾಗ ನೀರಿನಲ್ಲಿ ಊಟದ ನಂತರ ತಕ್ಕೊಳ್ಳುವದು.

## ಅ್ಯಲೋಪಥಿ

ಅ್ಯಲೋಪಥಿಯಲ್ಲಿ ಆಂತ್ರಿಕಕ್ಕೆ ಪ್ರಭಾವಿ (ಸ್ಪೆಸಿಫಿಕ್) ಯಾದ ಔಷಧಿ ಇಲ್ಲ. ಅವರು ಲಕ್ಷಣ, ಉಪದ್ರವಗಳಿಗನುಗುಣವಾಗಿ ಉಪಚಾರಮಾಡು ತ್ತಾರೆ. ಕ್ಲೋರಿನ್ ಮಿಕ್ಸ್‌ಚರ್ ಕೊಡುವ ರೂಢಿಯಿದೆ.

ಕ್ರಿಮಿಗಳ ಉಪದ್ರವವಿದ್ದಾಗ ಸ್ಯಾಂಟೋನಾಯಿನ್ ೧ ಗ್ರೇನು, ಸೋಡಾಬಾಯ್‌ಕಾರ್ಬ ೧ ಗ್ರೇನು ಮತ್ತು ಕ್ಯಾಲೋಮೆಲ್ ⅓ ಗ್ರೇನು ಈ ಮಿಶ್ರಣದ ೪ ಚೀಟುಗಳನ್ನು ೩ ತಾಸಿಗೊಂದರಂತೆ ಕೆಲವರು ಕೊಡುವ ದುಂಟು. ಆದರೆ ಇದು ವಿಷವಾದ್ದರಿಂದ, ಎಚ್ಚರಿಕೆಯಿಂದ ಉಪಯೋಗಿಸ ಬೇಕು.

ಹೃದಯದೌರ್ಬಲ್ಯಕ್ಕೆ ಕೋರ್ಯಾಮಿನ್ ಇಂಜಕ್ಶನ್ನ ಕೊಡುತ್ತಾರೆ. ನ್ಯುಮೋನಿಯಾ ಮುಂತಾದ ಉಪದ್ರವಗಳಲ್ಲಿ ಆಯಾ ಉಪದ್ರವಗಳಿಗೆ ತಕ್ಕ ಪ್ರಭಾವಿಗಳಾದ ಇಂಜಕ್ಶನ್ (ಪೆನಿಸಿಲಿನ್) ಕೊಡುತ್ತಾರೆ.

**ಹೋಮಿಯೋ:-** (೧) ಬ್ಯಾಪ್ಟಿಸಿಯಾ ಎಂಬ ಪ್ರಭಾವಿಯಾದ ಮದ್ದನ್ನು ಮುಖ್ಯವಾಗಿ ಟಾಯಿಫಾಯಿಡ್ ಅಥವಾ ಅದಕ್ಕೆ ಸಮಾನವಾದ ಜ್ವರಗಳಲ್ಲಿ ಕೊಡುವದುಂಟು.

(೨) ಹಾಯೋಸಾಯಮಸ್ ಇದನ್ನು ಬಡಬಡಿಕೆ, ಎಚ್ಚರದಪ್ಪಿದಾಗ ಈ ಮುಂತಾದ ಲಕ್ಷಣಗಳಲ್ಲಿ ಉಪಯೋಗಿಸುತ್ತಾರೆ.

(೩) ಮ್ಯೂರಿ ಆ್ಯಟಿಕ್ ಆ್ಯಸಿಡ್, ರ್ಹಸ್ಟಾಕ್ಸ್‌ಸ್ ಮುಂತಾದವನ್ನೂ ಅವಸ್ಥಾಭೇದದಿಂದ ಕೊಡುತ್ತಾರೆ.

**ಬಾಯೋಕೇಮಿಕ್:-** ಆಂತ್ರಿಕದಲ್ಲಿ ಕಾಲಿಮೂರ್ ಇದು ಮುಖ್ಯವಾದದ್ದು. ಇದರ ಜೊತೆಯಲ್ಲಿ ಕ್ವಚಿತ್ತಾಗಿ, ಫೇರಂಫಾಸನ್ನೂ ಕೊಡವ ರೂಢಿ ಇದೆ. ಕಿಂವಾ ಫೆರಂಫಾಸ್, ಕಾಲಿಮೂರ್‌ಗಳನ್ನು ಆದಲುಬದಲು ಮಾಡಿ ಕೊಡುತ್ತಾರೆ. ಅಲ್ಲದೆ ಕಾಲೀಫಾಸ್ ನೈಟ್ರಮ್‌ಮೂರ್, ನೈಟ್ರಮ್ ಸಲ್ಫ, ಕಾಲೀಸಲ್ಫ ಈ ಔಷಧಿಗಳನ್ನು ಲಕ್ಷಣಗಳ ತಾರತಮ್ಯ ನೋಡಿ ಕೊಡಬೇಕು.



# ಶ್ಲೇಷ್ಮಿಕ ಸನ್ನಿಪಾತ

## Lobar Pneumonia — ಲೋಬರ ನ್ಯುಮೋನಿಯಾ

**ಸಾಮಾನ್ಯ ವರ್ಣನೆ:-** ಆಂತ್ರಿಕದಲ್ಲಿ ಅಥವಾ [ಗ್ರಂಥಿಕ ಸನ್ನಿಪಾತ] ಪ್ಲೇಗಿನಲ್ಲಿ ಶ್ಲೇಷ್ಮಿಕ ಸನ್ನಿಪಾತವು ಉಪದ್ರವ ರೂಪದಿಂದ ಬರುತ್ತದೆ. ಇಲ್ಲವೆ ಇದು ಸ್ವತಂತ್ರವಾಗಿಯೂ ಉಂಟಾಗುತ್ತದೆ. ಇದು ನ್ಯುಮೋಕಾಕಸ್ ಎಂಬ ಕ್ರಿಮಿಗಳಿಂದ ಹುಟ್ಟುತ್ತದೆ. ಆದರೂ ಇದು ಅಷ್ಟೊಂದು ಸಾಂಸರ್ಗಿಕ ವಲ್ಲ. ಇದು ವಾತಾವರಣ ಮೂಲಕ ಹಬ್ಬುತ್ತದೆ. ದೊಡ್ಡವರಲ್ಲಿ ವಿಶೇಷವಾಗಿ ಗಂಡಸರಲ್ಲಿ ಇದರ ಪ್ರಮಾಣ ಹೆಚ್ಚಾಗಿ ಕಂಡುಬರುತ್ತದೆ. ಹೆಣ್ಣುಮಕ್ಕಳು ಬೈಲಲ್ಲಿ ಮಲಗುವದು ಹಾಗೂ ಬರಿಮೈಯಿಂದ ತಿರುಗಾಡುವದು ಕಮ್ಮಿ ಯಾದ್ದರಿಂದ ಹೆಣ್ಣುಮಕ್ಕಳಿಗೆ ಈ ಬೇನೆ ಬರುವದೂ ಕಮ್ಮಿ.

**ಕಾರಣಮೀಮಾಂಸೆ:-** ಬಹಳ ಉಷ್ಣತೆಯಿಂದ ಅಥವಾ ವ್ಯಾಯಾಮ ಮಾಡಿದ್ದರಿಂದಾಗಿ ಮೈ ಬೆವೆತಾಗ ಒಳ್ಳೇ ತಂಪಾದ ಗಾಳಿ ಮೈಗೆ ತಾಕು ವದು, ತೇವಿನಲ್ಲಿ ಮಲಗುವದು, ತಂಪಾದ ಪೇಯಗಳನ್ನು ಕುಡಿಯೋಣ, ಒದ್ದೆ ಬಟ್ಟೆಗಳನ್ನು ತೊಟ್ಟುಕೊಳ್ಳೋಣ, ಬೈಲಲ್ಲಿ ಮಲಗಿದಾಗ ಮಂಜು ಬೀಳೋಣವೇ ಮೊದಲಾದ, ಕಫವನ್ನು ಹೆಚ್ಚಿಸುವ ಆಹಾರ ವಿಹಾರಗಳಿಂದ ಎದೆಯಲ್ಲಿ ಕಫ ಪ್ರಕೋಪವಾದಾಗ, ನ್ಯುಮೋನಿಯಾದ ಕ್ರಿಮಿಗಳು, ಪುಪ್ಪುಸ ದಲ್ಲಿ ಸೇರಿದರೆ ಈ ರೋಗದ ಬಾಧೆ ತಟ್ಟುತ್ತದೆ. ಮುಂಬೈಯಂಥ ನಗರ ದಲ್ಲಿ ಬೇಸಿಗೆಯಲ್ಲಿ ಫೂಟಪಾಥದ ಮೇಲೆ ಮಲಗಿದಾಗ, ರಾತ್ರಿ ಒಮ್ಮೆಲೇ ಮಳೆಗಾಳಿಗೆ ಆರಂಭವಾಗಲು ಅದೆಷ್ಟೋ ಜನ ಈ ಬೇನೆಗೆ ಬಲಿ ಯಾಗುತಾರೆ.

**ಕಾಲಸಂಪ್ರಾಪ್ತಿ:-** ಕೆಲವೇ ತಾಸುಗಳಿಂದ ಮೂರು ದಿನಗಳ ವರೆಗೆ.

**ಬಣ್ಣನೇ:-** ಈ ಪ್ರಕಾರದಲ್ಲಿ ಒಮ್ಮೆಲೇ ಚಳಿ ಬಂದು(೧೦೩-೧೦೫)ವರೆಗೆ

ಜ್ವರಬರುತ್ತದಲ್ಲದೆ ನೆಲೆನಿಲ್ಲುತ್ತದೆ. ಸಾಮಾನ್ಯವಾಗಿ ಬಲಫುಪ್ಪುಸದ ಕೆಳಭಾಗ (ಲೋಬ) ದಲ್ಲಿ ಇದರ ಪರಿಣಾಮವಾದದ್ದು ಕಂಡು ಬರುತ್ತದೆ. ಕ್ವಚಿತ್ತಾಗಿ ಎಡಭಾಗದಲ್ಲಿಯೂ ಈ ವಿಕಾರ ಕಾಣಿಸಿಕೊಳ್ಳುತ್ತದೆ. ಎರಡೂ ಫುಪ್ಪುಸಗಳು ವಿಕೃತವಾದಾಗ ಈ ವಿಕಾರ ಡಬಲ್‌ನ್ಯುಮೋನಿಯಾ ಎಂದು ಕರೆಸಿಕೊಳ್ಳುತ್ತದೆ.

**ಅವಧಿ:**— ೭-೯-೧೧ ಅಥವಾ ೧೩. ಈ ವಿಷಮ ದಿನಗಳಲ್ಲಿ ಜ್ವರ ಒಮ್ಮೆಲೇ ಇಳಿದುಬಿಡುತ್ತವೆ. ಇದೇ ಹೊತ್ತಿನಲ್ಲಿ ಹೃದಯಕ್ರಿಯೆ ನಿಂತು ರೋಗಿ ಸಾಯುವದುಂಟು.

**ಲಕ್ಷಣ ಮತ್ತು ಭಾವನೆ:**— ಜ್ವರ ಆರಂಭಕ್ಕೆಯೇ [೧೦೩] ರಿಂದ [೧೦೫] ರ ವರೆಗೆ ಏರಿ ಮುಖ ಕೆಂಪಾಗುತ್ತದೆ. ಬೆವರುವದಿಲ್ಲ. ಬೆಳಗು ಸಂಜೆಯು ಜ್ವರ ಪ್ರಮಾಣದಲ್ಲಿ ೧—೨ ಅಂಶಗಳ ವ್ಯತ್ಯಾಸವಿರುತ್ತದೆ. ಬಾಯಾರಿಕೆ, ತಲೆಶೂಲಿ, ಹಸಿವಿಲ್ಲದಿರೋಣ ಮೊದಲಾದ ಲಕ್ಷಣ ಕಾಣಿಸಿಕೊಳ್ಳುತ್ತವೆ. ೭-೯-೧೧ ಅಥವಾ ೧೩ ನೇ ದಿನಕ್ಕೆ ಒಮ್ಮೆಲೇ ಘೋರನೆ ಮೈ ಬೆವೆತು ಜ್ವರ ಕೂಡಲೇ ಕೆಳಗಿಳಿಯುತ್ತವೆ. (ಕ್ರಾಯಿಸಿಸ್.)

**ಕೆಮ್ಮು:**— ಕ್ರಿಮಿಗಳು ಫುಪ್ಪುಸವನ್ನು ಸೇರಿದಮೇಲೆ ಅಲ್ಲಿ ಸಂರಂಭ (ಕಂಜೆಶನ್) ವನ್ನು ಉಂಟುಮಾಡುತ್ತವೆ. ಆದರಿಂದ ಉಸುರಿಗೆ ತಡೆಯುಂಟಾಗಿ ಕೆಮ್ಮು ಹುಟ್ಟುತ್ತದೆ. ಇದರಿಂದಲೇ ಎದೆನೋಯುತ್ತದೆ. ಅಂತೆಯೇ ಕೆಮ್ಮನ್ನು ತಡೆಯುವ ಪ್ರಯತ್ನವಾಗುತ್ತದೆ. ನಿದ್ದೆ ಬರುವದಿಲ್ಲ.

**ರಕ್ತಷ್ಠೀವನ:**— ದೇಹದಲ್ಲಿಯ ಸ್ವಾಭಾವಿಕ ಶಕ್ತಿ ಮತ್ತು ರೋಗ ಕ್ರಿಮಿಗಳ ತಿಕ್ಕಾಟಕ್ಕೆ ಆರಂಭವಾಗುತ್ತದೆ ಆದರಲ್ಲಿ ಜ್ವರದ ಕಾವು ಬೇರೆ. ಆದರಿಂದಾಗಿ ರಕ್ತನಾಳಗಳು ಒಡೆದು, ರಕ್ತ ಸೋರಹತ್ತಿ, ರಕ್ತ ಕೂಡಿದ ಲೊಡಡಿ ಬೀಳುತ್ತದೆ. ಈ ಸ್ಥಿತಿಯಲ್ಲಿ ಪಿತ್ತ ಮತ್ತು ಅದನ್ನಾಶ್ರಯಿಸಿದ ರಕ್ತ ಪ್ರಕುಪಿತವಾಗಿರುತ್ತದೆ.

**ಶ್ವಸನ:**— ರೋಗದ ವೇಗ ಬೆಳೆದಂತೆ ಫುಪ್ಪುಸಗಳ ಭಾಗ [ಲೋಬ] ನಿರುಪಯೋಗಿಯಾಗಿ ಉಸುರಿನ ವೇಗ ಹೆಚ್ಚುತ್ತದೆ. ಒಮ್ಮೊಮ್ಮೆ ಉಸುರು

ಮಿನಿಟಿಗೆ ೫೦ ರಿಂದ ೬೦ ರ ವರೆಗೆ ಹೆಚ್ಚುತ್ತದೆ. ಇದರಿಂದ ನಾಡಿ ಮತ್ತು ಉಸಿರು ಇವುಗಳ ಪ್ರಮಾಣ ೨ : ೧. ಹೀಗೆ ಬೀಳುತ್ತದೆ. ಉಸುರಿಗೆ ಅಡ್ಡಿಯಾದ್ದರಿಂದ ಎದೆ ಜೋರಿನಿಂದ ಹಾರಹತ್ತಿ ದೀರ್ಘ ಶ್ವಾಸ ತಕ್ಕೊಳ್ಳಲು ಬರುವದಿಲ್ಲ. ಉಸಿರಿನೊಡನೆ ಮೂಗಿನ ಹೊರಳುಗಳೂ ಅಲಗುತ್ತವೆ. ಇದು ಇದರಲ್ಲಿಯ ವಿಶೇಷ ಲಕ್ಷಣವಾಗಿದೆ.

**ಕೀವುಕೂಡಿದ ಕಫ:**— ಕೊನೆಯಲ್ಲಿ ಪ್ರತೀಕಾರ ಶಕ್ತಿಗೆ ಗೆಲುವಾಗುತ್ತದೆ. ಬಹಳಷ್ಟು ಕ್ರಿಮಿಗಳು ಸತ್ತು ಅವು ಕಫದ ಮಾರ್ಗವಾಗಿ ಹೊರಬೀಳುತ್ತವೆ. ಆ ಕ್ರಿಮಿಗಳ ಕೊಳೆತ ಶರೀರದಿಂದಾಗಿ, ಕಫಕ್ಕೆ ಕೊಳಕುನಾತ ಬರುತ್ತದೆ. ಕೀವುಕೂಡಿದ ಕಫದ ಲೊದಡಿ ಬಿದ್ದಹಾಗೆ ಫುಪ್ಪುಸಗಳು ಸ್ವಚ್ಛವಾಗಿ, ಅವುಗಳ ಅತಿಸೂಕ್ಷ್ಮ ಭಾಗಗಳಲ್ಲಿ ಪ್ರಾಣವಾಯು (ಆಕ್ಸಿಜನ್) ಸಂಚರಿಸಹತ್ತುತ್ತದೆ.

**ಶ್ವಸನ ಧ್ವನಿ:**—ಶ್ರವಣ ನಲಿಕಾ (ಸ್ಟೆಥಾಸ್ಕೋಪ) ದಿಂದ ನೋಡಿದರೆ ಸಂರಂಭಾವಸ್ಥೆಯಲ್ಲಿ ಶ್ವಾಸಾವರೋಧಜನ್ಯಧ್ವನಿ (ಕ್ರಿಪಿಟೇಶನ್ಸ) ಕೇಳಬರುತ್ತದೆ ಮುಂದೆ ಕಫದ ಪ್ರಮಾಣ ಹೆಚ್ಚಿದ ಹಾಗೆಲ್ಲ “ಬುಡುಬುಡು” (ಬಬ್ಲಿಂಗ್ ರಾಲ್ಸ) ಶಬ್ದ ಕೇಳಬರುತ್ತದೆ.

**ಉಪದ್ರವಗಳು:**— (೧) ಫುಪ್ಪುಸಾವರಣ ಶೋಥ(ಪ್ಲುರಸಿ) ಕ್ವಚಿತ್ತಾಗಿ ಬಾವು ಬಂದು, ಎದೆಯಲ್ಲಿ ತೀವ್ರವೇದನೆಯಾಗುತ್ತದೆ. **ಒಣ**ಕೆಮ್ಮು ಬರುತ್ತದೆ.

(೨) ಪ್ರಲಾಪ (ಡಿಲರಿಯಂ) (೩) ಹೃದಯ ವಿಕೃತಿ.

(೪) ಹೃದಯಾವರಣ ವಿಕೃತಿ (೫) ಮಸ್ತಿಷ್ಕಾವರಣ ವಿಕೃತಿ.

**ರೋಗ ವಿಶೇಷ:**—ಮೊದಲಿಗೆ ರೋಗಿ ಕೆಟ್ಟಿರುವ ಫುಪ್ಪುಸದ ಭಾಗಕ್ಕೆ ಮಗ್ಗುಲಾಗಿ ಮಲಗುತ್ತಾನೆ. ಆ ಮೇಲೆ ಮತ್ತೊಂದು ಭಾಗಕ್ಕೆ ಮಗ್ಗುಲಾಗಿ ಮಲಗಹತ್ತುತ್ತಾನೆ. ರೋಗದ ಜೋರು ವಿಶೇಷವಾಯಿತೆಂದರೆ ಅವನಿಗೆ ಆತುಕೊಂಡು ಕೂಡುವದೇ ಹೆಚ್ಚು ಅನುಕೂಲವೆನಿಸಹತ್ತು

ತ್ತದೆ. ಈ ವಿಕಾರ ಮೇಲಿಂದ ಮೇಲೆ ಆಗುವದು ಶಕ್ಯವಿರುತ್ತದೆ ಹಲವು ಬಾರಿಗೆ ರೋಗ ಮರುಕಳಿಸುವದರಿಂದು ಫುಪ್ಪಸಗಳು ಅಶಕ್ತವಾಗುವದರಿಂದ ಮುಂದೆ ಕ್ಷಯಕ್ಕೆ ಹಾಕುವ ಸಂಭವವಿರುತ್ತದೆ.

**ನಿದಾನ ಮತ್ತು ಭೇದಕ ನಿದಾನ:—** ಒಮ್ಮೆಲೆ ಭಯಂಕರ ಜ್ವರ, ಕೆಮ್ಮು, ಮೂಗಿನ ಹೊರಳೆಗಳು ಹಾರುತ್ತಿರೋಣ, ಮತ್ತು ಉಸುರಿನ ಗತಿಯು ವೇಗ ಹೆಚ್ಚಾಗೋಣ, ಇವುಗಳ ಮೇಲಿಂದ ನಿದಾನ ಮಾಡಲು ಬರುತ್ತದೆ.

**ಸಾಧ್ಯಾ ಸಾಧ್ಯತ್ವ:—** ಶೆರೆ ಕುಡಿತವೇ ಮುಂತಾದ ಚಟಗಳಿಂದ ಇಲ್ಲವೇ ಬೇರೆ ಕಾರಣಗಳಿಂದ, ರೋಗಿಯ ಹೃದಯು ಮೊದಲಿಗೇ ಅಶಕ್ತವಾಗಿದ್ದರೆ, ಆತನಿಗೆ ಗುಣವಾಗುವದಿಲ್ಲ. ತೀವ್ರ ಉಪದ್ರವಗಳು ಹುಟ್ಟಿದರೂ ರೋಗಿಯು ಆಶೆ ಬಿಡುವದು ಒಳ್ಳೇದು.

**ದೋಷ ದೂಷ್ಯ ವಿಚಾರ:—** ಇದರಲ್ಲಿ ಕಫವಿಕಾರವೇ ಮುಖ್ಯವಾಗಿರುತ್ತದೆ. ವಾತಪಿತ್ತಗಳೂ ಪ್ರದುಷ್ಟವಾಗಿರುತ್ತವೆ. ಎಂದೇ ಇದಕ್ಕೆ ಶ್ಲೇಷ್ಮಿಕ ಸನ್ನಿಪಾತವೆಂದು ಹೆಸರು ಬಿದ್ದಿದೆ.

**ಚಿಕಿತ್ಸೆ:—** ಈ ಬೇನೆಯಲ್ಲಿ ಕೂಡಲೇ ಜ್ವರಗಳನ್ನು ಕಳೆಯುವ, ಬಚನಾಗ ಕೂಡಿದ ಔಷಧಿಗಳನ್ನು ಕೊಡಬಾರದು. ದೋಷಪ್ರತ್ಯನೀಕ ದೋಷಗಳಿಗೆ ಅನುಗುಣವಾಗಿ ಸಾಮಾನ್ಯ ಚಿಕಿತ್ಸೆ ಮಾಡಬೇಕು. ಮೊದಲಿನಿಂದಲೇ ಹೃದಯಕ್ಕೆ ಶಕ್ತಿಕೊಡುವ ಮದ್ದುಗಳನ್ನೇ ಕೊಡುತ್ತಿರಬೇಕು. ಅಂದರೆ ಕೊನೆಯಲ್ಲಿ ಶಕ್ತಿಪಾತವಾಗುವದಿಲ್ಲ. ಮೊದಲಿನ ಎರಡು ದಿನಗಳಲ್ಲಿ ಪ್ರವಾಳ ೨-ಗುಂಜಿ+ಸಿತೋಪಲಾದಿ ೪ ಗುಂಜಿ+ ಅಮೃತ ಸತ್ವ ೪ ಗುಂಜಿ ೪ ಚೀಟು ನಾಲ್ಕು ವೇಳೆ ಜೇನಿನಲ್ಲಿ ನೆಕ್ಕುವದು ತಲೆಯ ಮೇಲೆ ಥಣ್ಣೀರಿನ ಪಟ್ಟಿಯನ್ನಿಡಬೇಕು ಎನಿಮಾ ಅಥವಾ ಜೀಕಳಿ ಕೊಟ್ಟು, ಹೊಟ್ಟೆಯನ್ನು ಸ್ವಚ್ಛ ಮಾಡಿಕೊಳ್ಳಬೇಕು. ಹಾಗೆಯೇ ಅಗಸೀ ಪೋಟೀಸಿನಿಂದ ಎದೆ, ಬೆನ್ನು ಪಕ್ಕಡಿಗಳನ್ನು ಕಾಸಬೇಕು. ಮೂರನೇ ದಿನದಿಂದ ಲಕ್ಷ್ಮೀ ವಿಲಾಸ ಗುಟಿ ೧ ಗುಂಜಿಯನ್ನು ತುಳಸೀ

ರಸ ಮತ್ತು ಜೇನುತುಪ್ಪಗಳಲ್ಲಿ ನಡು ನಡುವೆ ನೆಕ್ಕಿಸಬೇಕು. ಈ ಹೃದ್ಯ ಔಷಧಿಯಿಂದ ಹೃದಯಕ್ರಿಯೆ ನಿಂತುಬಿಡುವ ಗಂಡಾಂತರ ತಪ್ಪಿ ಹೋಗುತ್ತದೆ: ಲೇಪ—ಗುಗ್ಗುಳ, ಕವಡೀ ಲೋಬಾನ, ಅರಿಷಿಣ, ಕೆಂಪುಚಂದನ, ಪುನರ್ನವಾ, ಸಾರಂಗದ ಕೋಡು, ಇವನ್ನು ಹಾಲಿನಲ್ಲಿ ತೇದು ಎದೆ, ಪಕ್ಕಡಿಗಳಿಗೆ ಲೇಪಿಸಬೇಕು. ಆ್ಯಂಟಿಫ್ಲಾಜೆಸ್ಟಿನ್‌ನ್ನಿನಂತೆ ಇದರ ಉಪಯೋಗವಾಗುತ್ತದೆ. ಮುಂದೆ ಪಿತ್ತ ಕೆರಳಿ ರಕ್ತ ಬೀಳಹತ್ತುತ್ತದೆ. ಇದಕೆ ಸುವರ್ಣ ಸೂತಶೇಖರ ೧ ಗುಂಜಿ + ಪ್ರವಾಳ ೧ ಗುಂಜಿ+ಸಿತೋಪಲಾ ೪ ಗುಂಜಿ ೪ ಚೀಟು ೪ ವೇಳೆ. ಅನುಪಾನ—ಆಡಸಾಲದ ರಸ ಮತ್ತು ಜೇನುತುಪ್ಪ. (ಎದೆಯಲ್ಲಿಯ, ಕೆಮ್ಮು, ದಮ್ಮು, ರಕ್ತಪಿತ್ತ ಮೊದಲಾದ ವಿಕಾರಗಳ ಮೇಲೆ ಆಡಸಾಲ ಒಳ್ಳೇ ಪ್ರಭಾವಶಾಲಿಯಾದ ಮದ್ದಾಗಿದೆ. वृषो ऽस पित्ते। ವಾಗ್ಭಟ:—ಹಾಗೆಯೇ ಆಯುರ್ವೇದದಲ್ಲಿ ಜೇನುತುಪ್ಪದ ಅನುಪಾನವನ್ನು ಅಲ್ಲಲ್ಲಿ ಹೇಳಿರುತ್ತದೆ. ಜೇನು, ಕಫಶೋಧಕವಲ್ಲದೆ, ಹೃದಯ ಸ್ನಾಯುಗಳಿಗೆ ಒಳ್ಳೇ ಶಕ್ತಿಯನ್ನು ಕೊಡುವದೆಂದು ಇವತ್ತು ಅಮೇರಿಕೆಯ ಪಂಡಿತರು ಒಪ್ಪುತ್ತಿದ್ದಾರೆ. ಇದರ ಮೇಲಿಂದ ಆಯುರ್ವೇದದಲ್ಲಿ ಹೇಳಿದ ಸಂಗತಿಯೂ ಆದೆಷ್ಟು ಶಾಸ್ತ್ರ ಶುದ್ಧವಾಗಿದೆಯೆಂಬದನ್ನು ಮನಗಾಣಬಹುದಾಗಿದೆ.

**ಎರಡೂ ಪುಪ್ಪುಸಗಳಲ್ಲಿ ಸಂರಂಭ, ಬಾವು ಮತ್ತು ಉಸಿರುಗಟ್ಟೋಣ:**—ಪುನರ್ನವಾ, ಅನಂತಾ, ಜ್ಯೇಷ್ಠಮಧು; ಇವುಗಳ ಕಷಾಯ ಕೊಡಬೇಕು. ಮುಂದೆ ಕಫ ಬೀಳಹತ್ತಿದಾಗ ಮೃಗಶೃಂಗ, ೨ ಗುಂಜಿ+ ಲಕ್ಷ್ಮೀನಾರಾಯಣ ೨ ಗುಂಜಿ+ಸಿತೋಪಲಾದಿ ೪ ಗುಂಜಿ ೪ ಚೀಟು ತುಳಸೀರಸ ಜೇನುತುಪ್ಪದಲ್ಲಿ. ತುಳಸೀರಸ ಉತ್ತಮ ಸ್ವೇದಲ ಬೆವಿಸುವದಿದ್ದು ಕಫವನ್ನು ಕತ್ತರಿಸುತ್ತದೆ.

**ಹೆಚ್ಚಾಗಿ ಕೂಡಿ ಬಿದ್ದ ಕಫದ ಮೇಲೆ:**—(೧) ನೆಲಗುಳ್ಳ, ಮರಗುಳ್ಳ, ತಾರೀಕಾಯಿ, ಅಡಸಾಲ, ಜ್ಯೇಷ್ಠಮಧು, ಮತ್ತು ಕಲ್ಲುಸಕ್ಕರಿಗಳ ಕಷಾಯ ಕೊಡಬೇಕು.

(೨) ಉಳ್ಳೇಗಡ್ಡಿ ಕಲ್ಲುಸಕ್ಕರಿ ಕಷಾಯ ಕೊಡಬೇಕು. ಇದು ಹಳ್ಳಿಯ ಬಡಜನರಿಗೆ ಉತ್ತಮವಾದ ಮದ್ದು ಒಳ್ಳೇ ಗುಣಕಾರಿ.

(೩) ಇದೇ ಸ್ಥಿತಿಯಲ್ಲಿ ಕಫದ ಪ್ರಮಾಣ ಬಹಳವಾಗಿ ಬೆಳೆದರೆ, ರಸ ಸಿಂದೂರ, ಪಂಚಸೂತ, ಅಥವಾ ಮಲ್ಲಸಿಂದೂರಗಳನ್ನು ಸೂಕ್ಷ್ಮ ಪ್ರಮಾಣದಲ್ಲಿ ಅಂದರೆ ೧/೪ ಗುಂಜಿಯಂತೆ ಉಪಯೋಗಿಸಬೇಕು. ಪಂಚಸೂತವಿದು ಉತ್ತಮವಾಗಿ ಕಫ ಶೋಧನೆ ಮಾಡುತ್ತದೆ. ಮಲ್ಲಸಿಂದೂರ ಬಹಳ ತೀಕ್ಷ್ಣ. ಪಿತ್ತ ಲಕ್ಷಣಗಳಿದ್ದಾಗ ಅಥವಾ ಪಿತ್ತ ಪ್ರಕೃತಿಯವರಿಗೆ ಕೊಡಕೂಡದು.

**ಕಫವೃದ್ಧಿ, ಬಡಬಡಿಕೆ ಮತ್ತು ಎಚ್ಚರ ತಪ್ಪೋಣ:**—ದ್ರಾಕ್ಷಾಸವ ಅರ್ಧಔಂಸ, ನೀರು ೧ ಔಂಸ, ಇದರಲ್ಲಿ ಸಮೀರಪನ್ನಗ, ಮಾತ್ರೆಯನ್ನು ೧೦ ಸುತ್ತು ತೇದು ಕೊಡಬೇಕು. ೯—೧೧—೧೩ ನೇ ದಿನಗಳಲ್ಲಿ ಒಮ್ಮೆಲೇ ಜ್ವರ ಬಿಡೋಣ, ನಾಡಿ ನಿಲ್ಲೋಣ, ತಣ್ಣನ್ನ ಬೆವರು ಬರೋಣ, ಉಸಿರು ಮಂದ ಮತ್ತು ಆಳವಾಗಿರೋಣ, ಮಾತು ನಿಲ್ಲೋಣಗಳಲ್ಲಿ ಹೇಮಗರ್ಭವನ್ನು ಕೊಡಬೇಕು. ರೋಗ ಮುಕ್ತಿಯನಂತರ ದ್ರಾಕ್ಷಾಸವ, ಚ್ಯವನಪ್ರಾಶ ಅಥವಾ ಅಭ್ರಕಗಳಂಥ ಪೌಷ್ಟಿಕ ಮತ್ತು ಫುಪ್ಫುಸಗಳಿಗೆ ಬಲಕೊಡುವಂಥ ಔಷಧಿಗಳನ್ನು ಕೊಡಬೇಕು. ಅಂದರೆ ಮತ್ತೆ ಮತ್ತೆ ವಿಕಾರ ಮರುಕಳಿಸುವದಿಲ್ಲ.

## ಆ್ಯಲೋಪಥಿಕ

(೧) ನ್ಯುಮೋನಿಯಾದ ಮೇಲೆ ಆ್ಯಲೋಪಥಿಯವರು ಒಳ್ಳೇ ಪ್ರಭಾವಶಾಲಿಯಾದ ಔಷಧಿಯನ್ನು ಶೋಧಿಸಿದ್ದಾರೆ. (೧) ಎಂ. ಆ್ಯಂಡ್. ಬಿ. ೬೯೩ ಎಂಬ ಗುಳಿಗೆಗಳನ್ನು ಆರಂಭಕ್ಕೆ ಕೊಟ್ಟುಬಿಟ್ಟರೆ ರೋಗ ವಿಶೇಷ ವಿಕೋಪಕ್ಕೆ ಹೋಗುವದಿಲ್ಲ. ಪ್ರಮಾಣ ೨-೩ ಗುಳಿಗೆ ಹಾಲಿನಲ್ಲಿ. ಇದರೊಡನೆ ಸೋಡಾಬಾಯ್‌ಕಾರ್ಬ ಕೊಡುತ್ತಾರೆ.

ಮೇಲ್ಕಂಡ ಗುಳಿಗೆಗಳು ಅಥವಾ ಇವಕ್ಕೆ ಸಮಾನವಾದ ಸಲ್ಫಾಡ್ರಗ್ಸ ಗಳನ್ನು ಒಳ್ಳೇ ಕಾಳಜಿಯಿಂದ, ತಜ್ಞರ ಕಣ್ಣೆದುರು ಉಪಯೋಗಿಸಬೇಕು. ಹೀಗಾಗದಿದ್ದಲ್ಲಿ ಅವುಗಳಿಂದ ಅಪಾಯವೇ ಆಗುತ್ತದೆ. ಸಲ್ಫಾನಿಲಮಾಯಿಡ್‌: ಔಷಧಿಗಳಿಂದ ಮೂತ್ರಪಿಂಡಗಳ ಮೇಲೆ ಕೆಟ್ಟಪರಿಣಾಮವಾಗುತ್ತದೆ. ಕೆಲವರಿಗೆ ಪಿತ್ತ ಲಕ್ಷಣಗಳು ಉಂಟಾಗುತ್ತವೆ. ಅಥವಾ ಎದೆಯಲ್ಲಿ ಹಿಚುಕಿದಂತೆ ತ್ರಾಸವಾಗುತ್ತದೆ. ಪ್ರಮಾಣವು ಹೆಚ್ಚು ಕಮ್ಮಿಯಾಗುವದು ಹಿತ

ಕರನಲ್ಲ. ಈ ಔಷಧಿಗಳು ನಡೆದಾಗ ಪ್ಯಾಕ್ಸಲ್ಫಿನಂಥ ಗಂಧಕ ಕೂಡಿದ ಔಷಧಿಗಳನ್ನು ಕೊಡಬಾರದು.

ಆಹಾರದಲ್ಲಿ ನೀರುಳ್ಳಿ, ಬೊಳ್ಳೊಳ್ಳಿಗಳನ್ನು ಸೇರಿಸಲಾಗದು. ಎಲ್ಲಾ ಬಗೆಯ ಸಲ್ಫಾಡ್ರಗ್ಸಗಳ ಸಂಬಂಧದಲ್ಲಿ ಮೇಲಿನ ನಿಯಮವನ್ನು ಲಕ್ಷದಲ್ಲಿಟ್ಟಿರಬೇಕು. ಸಾಮಾನ್ಯ ಜನರು ಬಲ್ಲವರ ಅಭಿಪ್ರಾಯದವಿನಾ ಈ ಔಷಧಿಗಳ ಉಪಯೋಗ ಮಾಡಕೂಡದು.

(೨) ಪ್ರಭಾವಿಯಾದ ಮತ್ತೊಂದು ಔಷಧಿ ಪೆನ್ಸಿಲಿನ್. ಇದಂತೂ ಇಂದಿನ ಔಷಧೀ ಜಗತ್ತಿನಲ್ಲಿ ಕ್ರಾಂತಿಯನ್ನೇ ಮಾಡಿದೆ. ಯೋಗ್ಯ ವೇಳೆಯಲ್ಲಿ, ತಜ್ಞರಿಂದ ಉಪಚಾರಮಾಡಿಸಿದರೆ, ವಿಕಾರ ಕೂಡಲೇ ಸ್ವಾಧೀನಕ್ಕೆ ಬರುತ್ತದೆ. ಪ್ರಮಾಣ ೧ ಲಕ್ಷ ಯುನಿಟ್ಟಿನಿಂದ ೩ ಲಕ್ಷದ ವರೆಗೆ, ರೋಗ ಮತ್ತು ರೋಗಿಯ ಬಲಾಬಲ ನೋಡಿ ಕೊಡಬೇಕು. ಪ್ರತಿ ೩ ತಾಸಿಗೊಮ್ಮೆಯಂತೆ ಇಂಜೆಕ್ಸನ್ ಕೊಡುವ ಪದ್ಧತಿ ಇದೆ. ಡಿಸ್ಟಿಲ್‌ವಾಟರ್ ಅಥವಾ ಸಲಾಯಿನ್ ಕೂಡಿಸಿ ತಯಾರಮಾಡಿದ ದ್ರಾವಣದ ಆ ಬಾಟ್ಲಿಯನ್ನು ಥರ್ಮಾಸಿನಲ್ಲಿ ಬರ್ಫುಹಾಕಿ ಇಡಬೇಕು. ೨೪ ತಾಸುಗಳಲ್ಲಿ ಒಮ್ಮೆ ಕೊಡುವ ಪೆನಿಸಿಲಿನ್ ಇನ್ ಆಯಲ್ ಎಂಡ್ ವೆಕ್ಸ ಅಥವಾ ಬೇರೆ ಹಲವಾರು ಪ್ರಕಾರಗಳವು ಪೇಟೆಯಲ್ಲಿ ಸಿಗುತ್ತವೆ. ಇವುಗಳನ್ನು ಮಾತ್ರ ಬರ್ಫಿನಲ್ಲಿ ಇಡುವ ಆಗತ್ಯವಿಲ್ಲ. ಪೆನ್ಸಿಲಿನಿಂದಾಗಿ ನ್ಯುಮೋನಿಯಾದಿಂದಾಗುವ ಸಾವಿನ ಸಂಖ್ಯೆ ಕಡಿಮೆಯಾಗಿದೆಯೆಂದು ಹೇಳಬಹುದು.

## ಶ್ವಸನಕ ಸನ್ನಿಪಾತ

### Broncho Pneumonia — ಬ್ರಾಂಕೊ ನ್ಯುಮೋನಿಯಾ

**ಸಾಮಾನ್ಯ ವರ್ಣನೆ:—** ಇದರಲ್ಲಿ ಫುಪ್ಪುಸದ ಸಣ್ಣ ಭಾಗ (ಲೋಬ್ಯುಲ್ಸ) ಗಳು ಕೆಟ್ಟಿರುತ್ತವೆ. ಇದಕ್ಕೇ (ಫ್ಯಾಚೆಸ್) ಅನ್ನುತ್ತಾರೆ. ಸಣ್ಣ ಮಕ್ಕಳಿಗೆ ಕ್ವಚಿತ್ತಾಗಿ ಮುದುಕರಿಗೂ ಈ ವಿಕಾರ ಉಂಟಾಗುತ್ತದೆ.

ಗೊಬ್ಬರ, ಪೈಲಿ, ಗಣಜಲಿ, ಪ್ಲೇಗು, ಕ್ಷಯ, ಮೊದಲಾದ ವಿಕಾರಗಳಲ್ಲಿ ಇದು ಉಪದ್ರವದ ರೂಪವಾಗಿ ಬರುತ್ತದೆ. ಇದು ಪರತಂತ್ರ(ಸೆಕಂಡರಿ)ವ್ಯಾಧಿ.

ಸಾಮಾನ್ಯವಾಗಿ ಫುಪ್ಪುಸಗಳೆರಡರಲ್ಲಿಯೂ ಇದು ಹಬ್ಬಿರುತ್ತದೆ. ಮುದ್ದತ್ತು ಅಜಮಾಸು ೩—ವಾರ

**ಕಾರಣ ಮೀಮಾಂಸೆ:—**ಬಹಳ ತಂಪು ಮತ್ತು ಕಫವರ್ಧಕವಾದ ಆಹಾರ, ವಿಹಾರ, ಮತ್ತು ಮೇಲ್ಕಂಡ ಮುಖ್ಯ ರೋಗಗಳು.

**ಲಕ್ಷಣ ಮತ್ತು ಭಾವನೆ:—** ಈ ವಿಕಾರ ಬಹಳೇ ಸಾವಕಾಶವಾಗಿ ಸುರುವಾಗುತ್ತದೆ. ಜ್ವರ (೧೦೦-೧೦೩) ರ ವರೆಗೆ ಇರುತ್ತವೆ. ಮೊದಲಿಗೆ ಒಣಕೆಮ್ಮಿನಿಂದ ಎದೆ ನೋವಾಗಿ ಮಕ್ಕಳು ಅಳುತ್ತವೆ. ಮುಂದೆ ಕಫ ಹೆಚ್ಚಿ ಕೊಂಡು ಕೊನೆಯಲ್ಲಿಯಂತೂ ಕೀವುಕೂಡಿದ ಕಫ ಬೀಳಹತ್ತುತ್ತದೆ. ಅದಕ್ಕೆ ತೀರ ಕೆಟ್ಟವಾಸನೆ ಇರುವದು, ಸಣ್ಣಮಕ್ಕಳು ಕಫವನ್ನು ನುಂಗಿಬಿಡುವದ ರಿಂದ ಪಚನ ಸಂಸ್ಥೆಯಲ್ಲಿ ವಿಕಾರ ಉಂಟಾಗುತ್ತದೆ. ಈ ವಿಕಾರದಲ್ಲಿ ಹೊಟ್ಟೆ ಪ್ರತಿ ಉಸಿರಿನೊಡನೆ ಹಾರುತ್ತದೆ. ಮೂಗಿನ ಹೊರಳೆ ಅಲಗುತ್ತವೆ. ನಾಡಿ ಮತ್ತು ಉಸರಿನ ಪ್ರಮಾಣ ೩—೧ ರಂತೆ ಆಗುತ್ತದೆ. ಫುಪ್ಪುಸದ ಒಂದೊಂದು ಭಾಗ [ ಪ್ಯಾಚ್ ] ನೆಟ್ಟಗಾಗುವಷ್ಟರಲ್ಲಿ ಮತ್ತೊಂದು ಕೆಡುತ್ತದೆ. ಇದ ರಿಂದಾಗಿ ವಿಕಾರ ತಿರುತಿರುಗಿ ಬಂದು ಜೇನೆ ೩ ತಿಂಗಳ ವರೆಗೂ ಬೆಳೆಯು ತ್ತದೆ. ಕ್ಷಯದಲ್ಲಿ ಈ ವಿಕಾರ ಗಂಟುಬಿದ್ದರೆ ರೋಗಿ ಬೇಗನೆ ಅಪ್ಪಣೆ ತಕ್ಕೊಳ್ಳುತ್ತಾನೆ.

**ಚಿಕಿತ್ಸೆ:—** ಆರಂಭಕ್ಕೆ ಜೇಷ್ಠಮಧು ೨ ಗುಂಜಿ + ಪುಷ್ಕರಮೂಲ ೨ ಗುಂಜಿ + ಬಜಿ ೨ ಗುಂಜಿ ಜೇನಿನಲ್ಲಿ ನೆಕ್ಕುವದು.

**ಉಸಿರು ಕಟ್ಟಾಗೋಣ, ತುಟಿ ಕಪ್ಪಾಗೋಣ:—** (೧) ದ್ರಾಕ್ಷಾ ರಿಷ್ಟ ಅರ್ಧ ಚಮಚೆ ದುಪ್ಪಟ್ಟ ನೀರಿನಲ್ಲಿ. (೨) ಟಂಕಣ, ಬಳೆಗಾರದ ಅರ ಳಿನ ಪುಡಿ ೧ ಗುಂಜಿ + ಜೇಷ್ಠಮಧುವಿನ ಪುಡಿ ೨ ಗುಂಜಿ + ಶೃಂಗಶೃಂಗ ೨ ಗುಂಜಿ, ೪ ಚೀಟು ಜೇನಿನಲ್ಲಿ. (೩) ಮೃಗಶೃಂಗ, ತಾಲೀಸಾದಿ, ಜೇಷ್ಠ ಮಧು ಒಂದೊಂದು ಗುಂಜಿ, ಜೇಷ್ಠಮಧು ಮಾತ್ರ ೨ ಗುಂಜಿ ಜೇನಿನಲ್ಲಿ.

**ಮಲಾವರೋಧ ಮತ್ತು ಕೋಷ್ಠದುಷ್ಟಿ:—** (೧) ಕಫನಾಶಕ ಗುಟಿ ಅರ್ಧ ಗುಂಜಿ ಬಿಸಿನೀರಿನಲ್ಲಿ. (೨) ರೇವಾಚಿನ್ನಿ ಅರ್ಕ ೧ ಗುಂಜಿ ಮತ್ತು ಜೇಷ್ಠಮಧು ೨ ಗುಂಜಿ ಬಿಸಿನೀರಿನಲ್ಲಿ. ಇದು ಉತ್ತಮವಾದ ಕಾರಿಸುವ, ಜಾಡಿಸುವ ಮತ್ತು ಕಫಕತ್ತರಿಸುವ ಔಷಧಿಯಾಗಿದೆ. ಮೇಲಿನ ಎಲ್ಲಾ ಪ್ರಮಾಣಗಳು ಚಿಕ್ಕಮಕ್ಕಳವಾಗಿವೆ. ಉಳಿದೆಲ್ಲ ಚಿಕಿತ್ಸೆಗಳನ್ನು ಶ್ಲೇಷ್ಮಕ ಸನ್ನಿಪಾತದಲ್ಲಿಯಂತೆ ಮಾಡಬೇಕು. ಕೊಬ್ಬರೀಯಣ್ಣೆಯಲ್ಲಿ ಟರ್ಪಂಟಾಯಿಲ್ ಅಥವಾ ನೀಲಗಿರಿ ಯಣ್ಣೆಯನ್ನು ಕೂಡಿಸಿ, ಎದೆಗೆ ತಿಕ್ಕಿ ಬಿಸಿ ಅರಿವೆ ಕಾವು ಕೊಡಬೇಕು.

## ಅ್ಯಲೋಪಥಿ

ಈ ವಿಕಾರಕ್ಕೆ ಕ್ಯಾಂಫರ್ ಇನ್ ಆಯಿಲ್ ಎಸ್. ಯು. ಪಿ. ೩೬ ಅಥವಾ ಇದಕ್ಕೆ ಸಮಾನವಾದ ಸೂಜಿಮದ್ದನ್ನು ಮೊದಲಿಗೆ ಕೊಡುತ್ತಿದ್ದರು. ಆದರೆ ಇತ್ತೀಚಿಗೆ ಸಲ್ಫಾಡ್ರಗ್ಸ ಮತ್ತು ಪೆನ್ಸಿಲಿನ್‌ಗಳನ್ನೇ ಉಪಯೋಗಿಸುತ್ತಾರೆ.

## ಬಾಯೋಕೆಮಿಕ್

ಈ ವಿಕಾರ ಹೆಚ್ಚಾಗಿ ಮಕ್ಕಳಿಗೇ ಉಂಟಾಗುವದು. ಬಾಯೋಕೆಮಿಕ್ ಔಷಧಿಗಳೂ ಚಿಕ್ಕಮಕ್ಕಳಿಗೇ ಚನ್ನಾಗಿ ಹಿಡಿಯುತ್ತವೆ. ಫೆರಂಫಾಸ್, ಕಾಲೀಮೂರ್‌ಗಳನ್ನು ಆದಲುಬದಲು ಮಾಡುತ್ತ ಕೊಡಬೇಕು. ಅಲ್ಲದೆ ನೆಟ್ರಂಮೂರ್, ಕಾಲೀಸಲ್ಫ, ನೆಟ್ರಂಫಾಸ್‌ಗಳನ್ನು ಅವಸ್ಥಾಭೇದದಿಂದ ಕೊಡಬೇಕು.

**ಪಥ್ಯಾಪಥ್ಯ:—** ಸೀತ, ಕರಿದ ಮೊದಲಾದ ಕಫ ಹೆಚ್ಚಿಸುವ ಆಹಾರ ತಕ್ಕೊಳ್ಳಬಾರದು. ಮೈಗೆ ಉಣ್ಣೀಬಟ್ಟೆ ತೊಟ್ಟುಕೊಳ್ಳಬೇಕು. ಮಳೆ, ಚಳಿಗಾಲಗಳಲ್ಲಿ ವಿಶೇಷ ಎಚ್ಚರದಿಂದಿರಬೇಕು.

---

# ವಾತಕಫಪ್ರಧಾನ ಜ್ವರ

## Influenza — ಇನ್‌ಫ್ಲ್ಯುಎಂಝಾ

**ಸಾಮಾನ್ಯ ವರ್ಣನೆ:—** ಮನುಷ್ಯರ ಪ್ರಾಣಧನವನ್ನು ಅಪಹರಿಸುವ ಕುಪ್ರಸಿದ್ಧ ರೋಗಗಳಲ್ಲಿ ಇನ್‌ಫ್ಲ್ಯುಎಂಝಾದ ಕ್ರಮಾಂಕ ಬಹಳೇ ಮೇಲಕ್ಕೇರಿರುತ್ತದೆ. ಇದೊಂದು ಸಾಂಸರ್ಗಿಕ ರೋಗ. ಇದರ ಕ್ರಿಮಿಗಳು (ಬ್ಯಾಸಿಲಸ್ ಇನ್‌ಫ್ಲ್ಯುಎಂಝಾ) ಹವೆಯಲ್ಲಿ ಹಬ್ಬುತ್ತವೆ. ಇದು ಕ್ವಚಿತ್ತಾಗಿ ಪಿಡುಗಿನಿಂದಲೂ ಹಬ್ಬುತ್ತದೆ. ೧೮೯೩ನೇ ಇಸ್ವಿಯಲ್ಲಿ ಇದರದೊಂದು ಹಾವಳಿ ಬಂದಿತ್ತು. ಮೊದಲನೇ ಯುದ್ಧದ ನಂತರ [೧೯೧೮] ಈ ಬೇನೆ ಜಗದ್ವ್ಯಾಪಕ [ಪ್ಯಾಂಡೇಮಿಕ್] ರೂಪವನ್ನು ತಾಳಿತ್ತು. ಮತ್ತು ಪ್ರತ್ಯಕ್ಷ ಮಹಾಯುದ್ಧದಲ್ಲಿ ಮಡಿದುದಕ್ಕಿಂತಲೂ ಹೆಚ್ಚು ಜನ ಈ ರೋಗಕ್ಕೆ ಬಲಿಯಾದರು. ಇದು ಶ್ವಸನ ಸಂಸ್ಥೆಯ ರೋಗವಾಗಿದೆ. ಸಾಮಾನ್ಯವಾಗಿ ಪಿಡುಗು ಇಲ್ಲದಾಗ ಈ ರೋಗ ನೆಗಡಿಯಂತೆ ನಿರುಪದ್ರವಿಯಾಗಿರುತ್ತದೆ. ಇದರ ಕ್ರಿಮಿಗಳ ಸಂಶೋಧನೆಯನ್ನು ೧೮೯೦ ರಲ್ಲಿ ಜಪಾನಿಯ ಶಾಸ್ತ್ರಜ್ಞನೊಬ್ಬ ಮಾಡಿದ.

**ಕಾಲಸಂಪ್ರಾಪ್ತಿ:—** ಎರಡರಿಂದ ಐದು ದಿನಗಳ ವರೆಗೆ

**ಸಂಪ್ರಾಪ್ತಿ:—** ಹೆಚ್ಚು ತಂಪು ಮತ್ತು ವಾತ ಕಫಗಳನ್ನು ಬೆಳೆಸುವ ಆಹಾರ ವಿಹಾರಗಳಿಂದ ಶರೀರದಲ್ಲಿ ಕ್ಲೇದ ಉಂಟಾಗುತ್ತದೆ. ಇದೇ ಹೊತ್ತಿನಲ್ಲಿ ಉಸಿರಿನ ಮಾರ್ಗವಾಗಿ ಈ ಕ್ರಿಮಿಗಳು ಫುಪ್ಫುಸವನ್ನು ಸೇರುತ್ತವೆ. ಆಗ ಪ್ರತೀಕಾರ ಶಕ್ತಿ ಸೋತು ವಿಕಾರಕ್ಕೆ ಆರಂಭವಾಗುತ್ತದೆ. ಹಲವಾರು ಬಾರಿಗೆ ನೈಸರ್ಗಿಕ ಶಕ್ತಿ [ವ್ಹಾಯಟ್ಯಾಲಿಟಿ]ಯ ಬಲದಿಂದ ಎಲ್ಲ ಕ್ರಿಮಿಗಳ ನಾಶವಾಗಿ ಈ ವಿಕಾರ ಸಾಮಾನ್ಯ ನೆಗಡಿಯಂತೆ ಕಾಣುತ್ತದೆ. ಹೀಗಾಗದಿದ್ದಲ್ಲಿ ಕ್ರಿಮಿ ವಿಷ [ಟಾಗ್‌ಝಿನ್]ವು ದೇಹದಲ್ಲಿ ಪಸರಿಸಿ ಬೇನೆ ಉಗ್ರ ರೂಪವನ್ನು ತಾಳುತ್ತದೆ.

**ಲಕ್ಷಣ ಮತ್ತು ಭಾವನೆ:—** ಈ ವಿಕಾರದಲ್ಲಿ ನಾಲ್ಕು ಪ್ರಕಾರಗಳಾಗುತ್ತಿದ್ದು ಅವನ್ನನುಸರಿಸಿ ಲಕ್ಷಣಗಳಲ್ಲಿಯೂ ವ್ಯತ್ಯಾಸವಾಗುತ್ತದೆ.

**ಪ್ರಕಾರಗಳು:—** (೧) ಸಾಮಾನ್ಯ ಜ್ವರಾತ್ಮಕ:- ಇದರಲ್ಲಿ ಪುಪ್ಪುಸಗಳು ವಿಶೇಷವಾಗಿ ವಿಕೃತಿಹೊಂದುವದಿಲ್ಲ. ಗಂಟಲು ಮತ್ತು ಶ್ವಾಸನಳಿಕೆಗಳಲ್ಲಿ ಸಂರಂಭ ( ಕಂಜೆಶ್ಚನ್ ) ಇರುತ್ತದೆ. ರೋಗ ಭರದಿಂದ ಆರಂಭವಾಗುತ್ತದೆ. ತಲೆನೋವು, ಮೈಯಲ್ಲಾ ವಿಲಕ್ಷಣ ಹೊಡೆತ, ಬೆನ್ನಹುರಿಯು ನೋವು, ವಾಂತಿ, ಮಳಮಳಿಕೆ, ತಲೆತಿರುಗುವಿಕೆ, ಕೆಮ್ಮು ಹಾಗು ಅಶಕ್ತತೆಗಳು ಕಂಡುಬರುತ್ತವೆ. ಜ್ವರದ ಪ್ರಮಾಣಕ್ಕೆ ಮಿಕ್ಕಿ ಅಶಕ್ತಿಯಾಗೋಣ, ಹಾಗೂ ಬೆನ್ನುಹುರಿಯ ಹೊಡೆತಗಳು ಇದರ ಸೂಚಕ ಲಕ್ಷಣಗಳಾಗಿವೆ. ಒಂದೇ ದಿನದ ಸಾಧಾರಣ ಜ್ವರ [೧೦೦] ಕ್ಕೆ ಮನುಷ್ಯ ಹಾಸಿಗೆಹಿಡಿಯುವದಿದು ಈ ರೋಗದ ವಿಶೇಷ. ನೆನಪು ಕಡಿಮೆಯಾಗೋಣ, ಕಂಪವಾತ ಮತ್ತು ನಿದ್ದೆಗೇಡುಗಳೂ ಸಂಭವಿಸುತ್ತವೆ.

(೨) **ಶ್ವಸನಾತ್ಮಕ:—** ಇದರಲ್ಲಿ ಕಫ ಪ್ರಧಾನ, ವಾತದುಷ್ಟಿ ಕಾಣಿಸಿಕೊಳ್ಳುತ್ತದೆ. ಸನ್ ೧೯೧೮ ರಲ್ಲಿ ಇದೇ ಮಾದರಿ ಪ್ರಾಮುಖ್ಯವಾಗಿ ಕಂಡು ಬಂತು. ಇದರಲ್ಲಿ ಪುಪ್ಪುಸಗಳೊಳಗಿನ ಶ್ವಾಸನಲಿಕೆಗಳಿಗೆ ಬಾವು ಬರುತ್ತದೆ. ಮುಂದೆ ನ್ಯುಮೋನಿಯಾ, ಪ್ಲುರಸಿ: ಮೊದಲಾದ ಉಪದ್ರವಗಳು ಹುಟ್ಟುತ್ತವೆ. ಪುಪ್ಪುಸಾವರಣದಲ್ಲಿ, ಕೀವಾಗುವ ಸಂಭವವೂ ಇರುತ್ತದೆ. ಎದೆಯಲ್ಲಿ ಕೀವಾದರೆ ರೋಗ ಕಷ್ಟಸಾಧ್ಯವಾಗುತ್ತದೆ. ಕೆಮ್ಮು, ಎದೆಯಲ್ಲಿ ನೋವು, ಕೆಟ್ಟನಾತದ ಕಫ ಬೀಳುವದು, ಮೊದಲಾದಚಿನ್ಹಗಳೂ ತೋರಿ ಬರುತ್ತವೆ.

(೩) **ಅತಿಸಾರಾತ್ಮಕ:—** ಇದರಲ್ಲಿ ಕರುಳು ಕೆಟ್ಟು ರೋಗಿಗೆ ಮಾರಿಕಾದಂತೆ, ಜುಲಾಬಗಳಾಗಹತ್ತಿ ನಿದಾನಕ್ಕೆ ಕಠಿಣವಾಗುತ್ತದೆ. ಆದರೂ, ಜ್ವರ, ಕಫ, ಮೊದಲಾದ ಬೇರೆ ಲಕ್ಷಣಗಳಿಂದ ನಿದಾನ ನಿಶ್ಚಯಿಸಿಕೊಳ್ಳಬೇಕು. ಕಾಲರಾದಲ್ಲಿ ಜ್ವರ, ಕಫಗಳಿರುವದಿಲ್ಲ. ಶಕ್ಯವಿದ್ದರೆ ಆಗಲೇ ಮಲವನ್ನು ತಪಾಸ ಮಾಡಿಸಿದರೆ ಬೇಗನೇ ನಿದಾನ ನಿಶ್ಚಯವಾಗುತ್ತದೆ.

(೪) **ಮಸ್ತಿಷ್ಕ ವಿಕಾರಾತ್ಮಕ:—** ಇದರಲ್ಲಿ ಮಿದುಳು ಮತ್ತು ವಾತನಲಿಕೆ (ನರ್ವ್ಹಜ್) ಗಳು ಪ್ರದುಷ್ಟವಾಗುತ್ತವೆ, ರೋಗಿ ಭ್ರಾಂತನಾಗಿ ಹುಚ್ಚು

### ಹೋಮಿಯೋ

ಯು ಪ್ಯಾಟೋರಿಯಂ, ಗೆಲ್ಸೇಮಿಯಂ, ಆರ್ಸೇನಿಕ್, ಬ್ರಾಯೋನಿಯಾ, ಆಕೋನಾಇಟ್, ಬ್ಯಾಪ್ಟೀಸಿಯಾ ಮೊದಲಾದವು.

### ಬಾಯೋಕೆಮಿಕ್

ನೆಟ್ರಂಸಲ್ಫ, ಫೆರಂಫಾಸ್, ಕಾಲೀಮೂರ್ ಇವು ಮುಖ್ಯವಾದ ಔಷಧಿಗಳಾಗಿವೆ. ನೈಟ್ರಂಮೂರ್, ಕಾಲೀಫಾಸುಗಳನ್ನು ಅವಸ್ಥಾಭೇದದಿಂದ ಕೊಡುವದುಂಟು.

**ಪಥ್ಯಾಪಥ್ಯ:**– (೧) ಉಪವಾಸ (೨) ತೆಳ್ಳಗಿನ ಆಹಾರ (೩) ಕಾಫಿ ಅಥವಾ ಚಹಾ (೪) ಭತ್ತರಳಿನ ಗಂಜಿ, ಸೋಸಿದ ನೀರು ಅಥವಾ ಕಿವಿಚಿದ ಗಂಜಿ (೫)ಜೇನುತುಪ್ಪ ನೀರು, ಒಂದು ಕಪ್ಪು ನೀರಿಗೆ ೨ ಚಮುಚೆ ಪ್ರಮಾಣ. (ಇದು ಗ್ಲುಕೋಜಿನಕಿಂತಲೂ ಒಳ್ಳೇ ಪರಿಣಾಮಕಾರಿ ಮತ್ತು ಪ್ರಭಾವಿ.)

# ಗ್ರಂಥಿಕ ಸನ್ನಿಪಾತ

## ಪ್ಲೇಗು — Plague

**ಸಾಮಾನ್ಯ ವರ್ಣನೆ:**—ಈ ಬೇನೆ ಸಾಮಾನ್ಯವಾಗಿ ಉಷ್ಣಕಟಿಬಂಧದಲ್ಲಿ [ಟ್ರಾಪಿಕಲ್] ಕಾಣಿಸಕೊಳ್ಳುತ್ತದೆ. ಯುರೋಪದಲ್ಲಿ ಇದರ ಹಾವಳಿಯು ಹಲವುಬಾರಿಗಳಾದವು. ನಮ್ಮಲ್ಲಿಯೂ ಕೂಡ ಆಗಿವೆ. ೧೯ನೇ ಶತಮಾನದಲ್ಲಿ, ಇದು ಲಕ್ಷಗಟ್ಟಲೆ ಜನರನ್ನು ಗತಿಗಾಣಿಸಿ ಬಿಟ್ಟಿದೆ. ಈ ಬೇನೆ ಒಳ್ಳೇ ಭಯಂಕರ ಮತ್ತು ತೀವ್ರ ಪ್ರಾಣಘಾತುಕವಾಗಿದೆ. ಗೆಜ್ಜ, ಬಗಲು, ಕುತ್ತಿಗೆಗಳಲ್ಲಿಯ ಗಂಟುಗಳು ಬಾಯುತ್ತವೆ.

**ಕಾರಣ ಮೀಮಾಂಸಾ:**—ಬ್ಯಾಸಿಲಸ್ ಪೆಸ್ಟಿಸ್ ಎಂಬ ಕ್ರಿಮಿಯಿಂದ ಈ ರೋಗ ಹುಟ್ಟುತ್ತದೆ. ಮೊದಲಿಗೆ ಈ ಬೇನೆ ಬರುವದು ಇಲಿಗಳಿಗೆ.

ಅವು ಪಟ ಪಟ ಸಾಯುಹತ್ತುತ್ತವೆ. ಅದೂ ನೀರಿದ್ದಲ್ಲಿ ಹೋಗಿ ಸತ್ತಿರುವದು ಕಾಣಿಸುತ್ತದೆ. ಅವುಗಳ ಸತ್ತ ಮೈಯ್ಯಲ್ಲಿಯ ಚಿಕ್ಕಾಡುಗಳು ಮನುಷ್ಯರನ್ನು ಕಡಿಯುವದರಿಂದ ರೋಗ ಹುಟ್ಟುತ್ತದೆ.

**ಕಾಲಸಂಪ್ರಾಪ್ತಿ:**—೨-ದಿನಗಳಿಂದ ೧೦ ದಿನಗಳವರೆಗೆ.

**ಸಂಪ್ರಾಪ್ತಿ:**—ಕ್ರಿಮಿಗಳು ದೇಹದಲ್ಲಿ ಹೊಕ್ಕನಂತರ ಅವು ರಸವಾಹಿನಿ (ಲಿಂಫ್ಯಾಟಿಕ್) ಗಳ ಮೂಲಕವಾಗಿ ಲಸಿಕಾ ಗ್ರಂಥಿಗಳಲ್ಲಿ ಪ್ರವೇಶ ಮಾಡುತ್ತವೆ. ಆ ಕ್ರಿಮಿಗಳ ವಿಷ (ಟಾಗ್‌ಝಿನ್) ದಿಂದ ತ್ರಿದೋಷ ದುಷ್ಟಿಯಾಗಿ ಜ್ವರ ಮೊದಲಾದ ಬೇರೆ ಲಕ್ಷಣಗಳು ಉಂಟಾಗುತ್ತವೆ.

**ಪ್ರಕಾರ:**— ಇದರಲ್ಲಿ ಎರಡು ವಿಧ. (೧) ಮೇಲೆ ವರ್ಣಿಸಿದ ಗ್ರಂಥಿಕ (೨) ಶ್ಲೇಷ್ಮಕ. ಎರಡನೇ ಪ್ರಕಾರದಲ್ಲಿ ಪ್ಲೇಗಿನ ಕ್ರಿಮಿಗಳು, ಫುಪ್ಫುಸವನ್ನು ಸೇರುವದರಿಂಪ ಶ್ಲೇಷ್ಮಕದಂಥ ಲಕ್ಷಣಗಳು ಉಂಟಾಗುತ್ತವೆ.

**ಲಕ್ಷಣ ಮತ್ತು ಭಾವನೆ:**—ಜ್ವರ—ಕ್ಷಣದ ಹಿಂದೆ ನೆಟ್ಟಗಿದ್ದಾತನಿಗೆ ಒಮ್ಮಿಂದೊಮ್ಮೆ ಚಳಿಯಾಗಿ (೧೦೩° ೧೦೫°) ಜ್ವರ ತುಂಬುತ್ತವೆ ಮೋರೆ ಕೆಂಪಗಾಗುವದು, ತಲೆ ಶೂಲಿ, ಕಣ್ಣಲ್ಲಿ ನೀರು ಸುರಿಯೋಣ, ಕಣ್ಣು ಕೆಂಪಗಾಗೋಣ, ಬಾಯಾರಿಕೆ, ದಾಹ ಮೊದಲಾದ ಲಕ್ಷಣ ಕಾಣಿಸುತ್ತವೆ. ಏಳನೇ ದಿನ ಜ್ವರ ಕೂಡಲೇ ಕೆಳಕ್ಕೆ ಇಳಿಯುತ್ತವೆ. ಆಗಲೇ ರೋಗಿಯು ಕೈಬಿಡುವ ಸಂಭವ ಹೆಚ್ಚು. ಮಳಮಳಿಕೆ, ವಾಂತಿ, ಭೇದಿ, ಬಡಬಡಿಕೆ, ತಲೆ ತಿರುಗುವಿಕೆ, ಮಬ್ಬು ಮುಂತಾದ ಲಕ್ಷಣಗಳೂ ಸಂಭವಿಸುತ್ತವೆ.

**ನಾಡಿಯ ವೇಗ:**—೧೦೦-೧೩೦ ರ ವರೆಗೆ. ನಾಲಿಗೆ ಒಣಗಿ ಅದರ ಮೇಲೆ (ಕೋಟಿಂಗ) ಆವರಣ ಉಂಟಾಗುತ್ತದೆ.

**ಪ್ರಲಾಪ:**— ಇದರಲ್ಲಿ ರೋಗಿ, ಎಚ್ಚರ ತಪ್ಪಿ ಸಿಕ್ಕಂತೆ ಬಡಬಡಿಸುತ್ತಾನೆ. ಓಡುತ್ತಾನೆ, ಹಾಡುತ್ತಾನೆ, ಕುಣಿಯುತ್ತಾನೆ. ಚೀರೋಣ, ಬೈಯ್ಯೋಣ, ಪ್ರಸಂಗದಲ್ಲಿ ಹೊಡೆದಾಟ ಬಡೆದಾಟಗಳನ್ನೂ ಮಾಡುತ್ತಾನೆ. ಇಷ್ಟೇ ಅಲ್ಲದೆ ನೀರಡಿಸಿ ರಾತ್ರಿ ಎದ್ದು ನೀರಿದ್ದಲ್ಲಿಗೆ ಹೋಗಿ ನೀರು ಕುಡಿದ

ಉದಾಹರಣೆಗಳೂ ಇವೆ. ಈ ಸ್ಥಿತಿಯಲ್ಲಿ ಆತನಿಗೆ ಎಚ್ಚರಿಕೆ ಇರುವದಿಲ್ಲ. ಮೂತ್ರ ಕೆಂಪಗಾಗಿ ಬಹಳ ಬಿಸಿಯಾಗಿದ್ದು ಪ್ರಮಾಣವೂ ಅಲ್ಪವಾಗಿರುತ್ತದೆ. ಪಿತ್ತೋದ್ರೇಕವಾದರೆ ಮೂಗಿನಿಂದ, ಫುಪ್ಪುಸದಿಂದ, ಅಥವಾ ಕರುಳಿನಿಂದ ರಕ್ತಸ್ರಾವವಾಗುವದುಂಟು.

**ಗಂಟುಗಳು:**—ಜ್ವರ ಬಂದನಂತರ ಬಹುಶಃ ಗಂಟುಗಳೇಳುತ್ತವೆ. ಮೊದಲಿಗೆ ಗಂಟುಗಳೆದ್ದು ಆ ಮೇಲೆ ಜ್ವರ ಬಂದ ದೃಷ್ಟಾಂತಗಳೂ ಉಂಟು. ಕಾಲಿಗೆ ಚಿಕ್ಕಾಡು ಕಡಿದಿದ್ದರೆ, ಗೆಜ್ಜಿಯಲ್ಲಿ, ಕೈಗೆ ಕಡಿದರೆ, ಬಗಲಲ್ಲಿ, ಮತ್ತು ಕುತ್ತಿಗೆಯ ಸುತ್ತು ಕಡಿದರೆ, ಕುತ್ತಿಗೆಯಲ್ಲಿ ಗಂಟುಗಳೇಳುತ್ತವೆ. ಚಿಕ್ಕಾಡುಗಳು ಕಾಲಿಗೇ ಹೆಚ್ಚಾಗಿ ಕಚ್ಚುವದರಿಂದ, ಗೆಜ್ಜಿಯಲ್ಲಿಯೇ ಗಂಟೇಳುವ ಪ್ರಮಾಣ ಹೆಚ್ಚು. ಗಂಟಿನಲ್ಲಿ ಜೋರಾಗಿ ಶೂಲಿ ಇರುತ್ತದೆ. ಗಂಟಿನಲ್ಲಿ ಕೀವಾಗ ಹತ್ತಿದರೆ, ರೋಗಿ ಬದುಕುವನೆಂದು ಕೆಲವರ ಅಭಿಪ್ರಾಯವಿದೆ.

ಗಂಟು ಚನ್ನಾಗಿ ಹಣ್ಣಾದ ಮೇಲೆ, ಶೂಲಿ ಕಡಿಮೆಯಾಗಿ ತಂತಾನೆ ಒಡೆದು ಹೋಗುತ್ತದೆ. ಗಂಟು ದೊಡ್ಡದಿದ್ದಷ್ಟೂ (ಕೋಳಿ ತತ್ತಿಯಷ್ಟು) ರೋಗ ಸುಖಸಾಧ್ಯವಾಗಿರುತ್ತದೆ.

**ಉಪದ್ರವ:**—ಇದರಲ್ಲಿ ಶ್ಲೇಷ್ಮಕ (ನ್ಯೂಮೋನಿಯಾ) ದ ಉಪದ್ರವ ಕಂಡು ಬರುತ್ತದೆ.

**ನಿದಾನ ಮತ್ತು ಭೇದಕ ನಿದಾನ:**—ಪಿಡಿಗಿನ ದಿನಗಳಲ್ಲಿ ನಿದಾನ ಮಾಡುವದು ತೀರ ಸುಲಭ. ಆದರೆ ಮೊದಲಿಗೇ ಅಕಸ್ಮಾತ್ತಾಗಿ ಒಬ್ಬಾನೊಬ್ಬ ರೋಗಿ ಗಂಟು ಬಿದ್ದರೆ ನಿದಾನ ಮಾಡುವದು ತುಸು ಕಠಿಣ. ಹಾಗೆಯೇ ದೂರದ ಊರಿನ ರೋಗಿ ಬಂದಾಗಲೂ ನಿದಾನ ಸಾಶಂಕವಾಗುತ್ತದೆ. ಆದರೂ ಗಂಟು, ತೀವ್ರ ಜ್ವರ, ಬೆವಿಯದಿರೋಣ, ಬಡಬಡಿಕೆ ಮೊದಲಾದವು ನಿದಾನಕ್ಕೆ ಸುಲಭವಾಗಿವೆ.

ಶರೀರದ ಯಾವದೊಂದು ಭಾಗಕ್ಕೆ ಗಾಯವಾದರೂ ಹದಗಡ್ಲಿಗಳಾಗುವವು. ಆದರೆ ಹದಗಡ್ಲಿಯಲ್ಲಿ ಮೇಲಿಂದಮೇಲೆ ಚಳಿಯಾಗಿ ತುಸು ಜ್ವರ ಬರುತ್ತವೆ. ಇದರಮೇಲಿಂದ ನಿದಾನ ನಿಶ್ಚಿತವಾಗುತ್ತದೆ.

**ಸಾಧ್ಯಾಸಾಧ್ಯತ್ವ:—** ಕಾಲಸಂಪ್ರಾಪ್ತಿ ದೀರ್ಘವಾಗಿದ್ದಷ್ಟೂ ರೋಗಿಯು ಸಾಧ್ಯನೆಂದು ತಿಳಿಯಬೇಕು. ಬಡಬಡಿಕೆ, ಶ್ಲೇಷ್ಮಕ, ನ್ಯುಮೋನಿಯಾ, ತೀವ್ರಜ್ವರಗಳು ಅಸಾಧ್ಯದ ಲಕ್ಷಣಗಳು

## ಚಿಕಿತ್ಸೆ

[ಅ] **ಪ್ರತಿಬಂಧಕ:—** (೧) ಇನಾಕ್ಯುಲೇಶನ್ ಇದು ಪ್ರಭಾವಿಯಾದ ಉಪಚಾರವಾಗಿದೆ. (೨) ಸ್ಥಳಾಂತರ ಮಾಡೋಣ. (೩) ರೋಗಿಯನ್ನು ಜನಸಮ್ಮರ್ದದಿಂದ ಬೇರ್ಪಡಿಸಿ ಸ್ವತಂತ್ರವಾಗಿ ಇಡೋಣ. (೪) ಇಲಿಗಳನ್ನು ಕೊಂದು ನಷ್ಟಮಾಡೋಣ. (೫) ಮನೆ, ಬಟ್ಟೆಬರೆಗಳನ್ನು ಶುಚಿಯಾಗಿಡೋಣ. (೬) ಎಲ್ಲರೂ ತಮ್ಮ ತಮ್ಮ ಆರೋಗ್ಯ ಕಾದುಕೊಂಡಿರೋಣ.

(ಆ) **ಪ್ರತೀಕಾರಾತ್ಮಕ:—** (೧) ಪೂರ್ತಿ ವಿಶ್ರಾಂತಿ. (೨) ತೆಳುವಾದ ಆಹಾರ. (೩) ಗ್ಲಿಸರಿನ್ ಪಿಚಕಾರಿ ಅಥವಾ ನೀರಿನ ಬಸ್ತಿ ಕೊಟ್ಟು ಹೊಟ್ಟೆಯನ್ನು ಸ್ವಚ್ಛಮಾಡೋಣ. (೪) ಸೌಮ್ಯವಿರೇಚನ ಕೊಡಲು ಆತಂಕವಿಲ್ಲ.

**ಜ್ವರ:—** ಜ್ವರ ಬಹಳಿದ್ದಾಗ:- (೧) ಮಹಾಮೃತ್ಯುಂಜಯ ೨ ಗುಂಜಿ + ಪ್ರವಾಳ ಚೂ. ಪುಟ ೪ ಗುಂಜಿ. ಅನುಪಾನ. ತುಳಸೀರಸ ಮತ್ತು ಜೇನುತುಪ್ಪ. (೨) **ಕಾಲಕೂಟ** ರಸ ೨ ಗುಂಜಿ + ಪ್ರವಾಳ ೪ ಗುಂಜಿ. ಅನು. ತುಳಸೀ ರಸ, ಜೇನುತುಪ್ಪ. ಪ್ಲೇಗಿನಮೇಲೆ ಕಾಳಕೂಟ ಮತ್ತು ಮಹಾಮೃತ್ಯುಂಜಯ ರಸಗಳು ಅಪ್ರತಿಮ ಔಷಧಿಗಳಾಗಿವೆ.

**ಕಫ ಪ್ರಕೋಪ:—** (೧) ಸಮೀರಪನ್ನಗ. (೨) ದ್ರಾಕ್ಷಾಸವ.

**ವಾತಪ್ರಕೋಪ ಮತ್ತು ಪ್ರಲಾಪ:—** ಸನ್ನಿಪಾತ ಭೈರವ ಮತ್ತು ಮಹಾವಾತವಿಧ್ವಂಸ.

**ಕಫವಾತ ಪ್ರಾಧಾನ್ಯ:—** ಇಂದ್ರವಾರುಣಿ ೧ ಮಾಸಿ. ಕಪ್ಪುರ ೪ ಗುಂಜಿ. ಕೇರಿನ ಎಣ್ಣೆ ೪ ಗುಂಜಿ.

**ಗಂಟಿನಮೇಲೆ:—** (೧) **ಶೋಥಹರ**ಲೇಪ ಅಥವಾ ಗ್ರಂಥಿಭೇದನ **ಲೇಪ** ಹಾಲಿನಲ್ಲಿ ತೇದು ಹಚ್ಚಬೇಕು. (೨) ಸುಣ್ಣ, ಸಿಂಧೂರ ಮತ್ತು

ಕೋಳೀತತ್ತಿಯಲ್ಲಿಯ ಬಿಳೇ ರಸಗಳ ಲೇಪ ಹಾಕಬೇಕು. ]೩] ಚಿತ್ರಮೂಲ, ಸಾರಂಗದ ಕೊಂಬು + ಹಯಚೋಲಿಕಾ ಮಾತ್ರೆಗಳನ್ನು ಲಿಂಬೀರಸದಲ್ಲಿ ತೇದು ಹಚ್ಚಬೇಕು.

**ಸೂಚನೆ:—** ಜ್ವರವಿದ್ದಾಗ ಗಂಟನ್ನು ಕೊಯ್ಯುವ ಗದ್ದಲಕ್ಕೆ ಹೋಗಬಾರದು, ಜ್ವರವಿಳಿದ ಬಳಿಕ ಸಾಮಾನ್ಯ ಕುರುವಿನಂತೆ ಶೋಧನ ರೋಪಣಗಳ ಉಪಚಾರ ಮಾಡುವದು.

## ಆ್ಯಲೋಪಥಿಕ್

ಈ ವಿಕಾರದಮೇಲೆ ಲಕ್ಷಣಗಳಿಗನುಸಾರವಾಗಿ ಚಿಕಿತ್ಸೆಮಾಡುತ್ತಾರೆ. [೧] ಪ್ರಲಾಪಕ:–ಅಫೀಮು ಅಥವಾ ಅಫೀಮಿನ ಕಲ್ಪಗಳನ್ನು [ಮಾರ್ಫಿನ್] ಉಪಯೋಗಿಸುವದುಂಟು. [೨] ಕ್ಲೋರೋಫಾರ್ಮ ಕೊಡುತ್ತಾರೆ. ತೀವ್ರ ಜ್ವರವಿದ್ದಾಗ ಹಣೆಯ ಮೇಲೆ ಬರ್ಫಿನ ಚೀಲ ಇಡುತ್ತಾರೆ. ನೀರಿನಲ್ಲಿ ಸ್ಪಿರಿಟ್ ಕೂಡಿಸಿ ಆ ನೀರಿನ ಪಟ್ಟಿ ಹಣೆಯ ಮೇಲೆ ಇಡುತ್ತಾರೆ. ಹೃದಯು ದುರ್ಬಲವಾಗಿದ್ದಾಗ ಹೃದಯಕ್ಕೆ ಉತ್ತೇಜನಸಿಗುವ ಔಷಧ ಅಥವಾ ಆಕ್ಸಿಜನ್ ಕೊಡುತ್ತಾರೆ.

## ಬಾಯೋಕೆಮಿಕ್

ಫೇರಂಫಾಸ್, ಕಾಲೀಮೂರ್, ನೈಟ್ರಂಸಲ್ಫ ಮತ್ತು ಕಾಲೀಫಾಸ್ ಈ ಮುಖ್ಯವಾದ ಔಷಧಿಗಳನ್ನು ಲಕ್ಷಣಗಳಿಗನುಗುಣವಾಗಿ ಕೊಡಬೇಕು. ಗಂಟನಲ್ಲಿ ಕೀವಾಗಿ ಒಡೆಯಲೆಂದು ಸಿಲಿಕಾ ಕೊಡಬೇಕು.

# ವಿಸ್ಫೋಟಕ ಜ್ವರ

## Erruptive Fevers — ಇರಪ್ಟೀವ್ಹ ಫೀವರ್ಸ

ಮೈಮೇಲೆ ಬೊಕ್ಕೆಗಳೇಳುವ ಜ್ವರಗಳಿಗೆ ವಿಸ್ಫೋಟಕ ಜ್ವರವೆನ್ನು ತ್ತಾರೆ. ಮೈಲಿ, ಗೊಬ್ಬರ, ಗಣಜಲಿ ಮೊದಲಾದವುಗಳು. ಆಂತ್ರಿಕದಲ್ಲಿಯೂ ಬೊಕ್ಕೆಗಳೇಳುತ್ತವೆ.

### ಮೈಲಿ

**ಸ್ಮಾಲ್‌ಪಾಕ್ಸ** [Small pox] ಸಾಮಾನ್ಯ ವರ್ಣನೆ:— ಇದೊಂದು ಪಿಡುಗಿನಿಂದ ಬರುವ ಸಾಂಸರ್ಗಿಕ ರೋಗವಾಗಿದೆ. ಚಿಕ್ಕಮಕ್ಕ ಳಲ್ಲಿ ಇದರ ಪ್ರಮಾಣ ಹೆಚ್ಚಾಗಿ ಕಂಡುಬರುತ್ತದೆಯಾದರೂ ದೊಡ್ಡವರಿಗೂ ಈ ಬೇನೆ ಬರುವದುಂಟು. ಸಾಮಾನ್ಯವಾಗಿ ಒಂದುಸಲ ಬಂದುಹೋದ ಮೇಲೆ ತಿರುಗಿ ಮೈಲಿಗಳೇಳುವದಿಲ್ಲ. ತಪ್ಪಿ ಮತ್ತೊಮ್ಮೆ ಬಂದರೂ ವಿಕಾರ ಬಹಳೇ ಸೌಮ್ಯರೂಪದಲ್ಲಿರುತ್ತದೆ. ಈ ಬೇನೆಯ ಬಗೆಗಾಗಿ ಜನಸಾಮಾನ್ಯ ರಲ್ಲಿ ಬಹಳಷ್ಟು ತಪ್ಪುತಿಳುವಳಿಕೆ ಹಬ್ಬಿರುತ್ತದೆ. ದುರ್ಗವ್ವಾ, ದ್ಯಾಮವ್ವಾ ಮೊದಲಾದ ದೇವತೆಗಳ ಕೋಪದಿಂದಾಗಿ ಈ ರೋಗ ಬರುತ್ತದೆಯೆಂದು ನಂಬುತ್ತಾರೆ. ಆದಕ್ಕಾಗಿ ಬಲಿ, ಮಂತ್ರ, ತಂತ್ರ ಮೊದಲಾದ ಸಿಕ್ಕ ಸಿಕ್ಕ ಉಪಚಾರ ಕೈಕೊಳ್ಳುತ್ತಾರೆ. ಇದರಿಂದಾಗಿ ಶಾಸ್ತ್ರೀಯ ಉಪಚಾರಗಳತ್ತ ದುರ್ಲಕ್ಷವಾಗಿ ರೋಗಿಗೆ ಹಾನಿತಟ್ಟುತ್ತದೆ. ಹಿಂದುಸ್ತಾನದಲ್ಲಿ ಮೈಲಿ ಎದ್ದು ಕುರುಡು, ಕುಂಟು, ಕುರೂಪಿಗಳಾದ ಜನ ಲಕ್ಷಗಟ್ಟಲೆ ಇದ್ದಾರೆ. ಇದಕ್ಕೆ ಪ್ರತಿಯಾಗಿ ಇಂಗ್ಲಂಡ್ ಅಮೇರಿಕೆಯಂಥ ಪಶ್ಚಿಮದ ದೇಶಗಳಲ್ಲಿಯ ತಜ್ಞರು ಈ ವಿಕಾರವನ್ನು ಬಹು ಮಟ್ಟಿಗೆ ಗೆದ್ದಿದ್ದಾರೆ. ಆ ಜನ ಪ್ರಯತ್ನ ಶೀಲರಾಗಿದ್ದು ದೇವತೆ ದೈವಗಳ ಮೇಲೆ ಕೈಯೂರಿ ಅವರು ಸ್ವಸ್ಥ ಕೂಡುವ ದಿಲ್ಲ. ಅಲ್ಲಿ ದಿನದಿನಕ್ಕೆ ಈ ರೋಗದ ಪ್ರಮಾಣ ಕಮ್ಮಿಯಾಗುತ್ತ ನಡೆದಿದೆ. ನಮ್ಮಲ್ಲಿ ಮನೆತನದ ಪಡತೆ [?] ಇಲ್ಲವೆಂದು ದುರಾಗ್ರಹದಿಂದ ಕೆಲ ಕುಟುಂಬಗಳು ಮೈಲಿ [ವ್ಯಾಕ್ಸಿನೇಶನ್] ಚುಚ್ಚಿಸಿಕೊಳ್ಳುವದಿಲ್ಲ. ಆದರ ದುಷ್ಪರಿಣಾಮವನ್ನು ಅವರು ಭೋಗಿಸಬೇಕಾಗುತ್ತದೆ. ಹೆಚ್ಚಾಗಿ

ಹುಡುಗೆಯರ ಮೋರೆ ಹುಳುಕಾಗೋಣ, ಕಣ್ಣಲ್ಲಿ ಹೂ ಕೂಡೋಣ ಮುಂತಾದ ಪ್ರಸಂಗಗಳಿಂದಾಗಿ ಲಗ್ನ ಕಾಲದಲ್ಲಿ ಅನೇಕ ಆಪತ್ತುಗಳನ್ನು ಎದುರಿಸಬೇಕಾಗುವದು. ಈ ಕಹಿ ಅನುಭವ ಬಂದೇಬರುತ್ತದೆ.

**ಕಾಲಸಂಪ್ರಾಪ್ತಿ:—** ೮ ರಿಂದ ೧೨ ದಿನಗಳ ವರೆಗೆ.

**ಲಕ್ಷಣ ಮತ್ತು ಭಾವನೆಗಳು:— ಜ್ವರ:-** ಚಳಿಯಾಗಿ ಜ್ವರ ೧೦೩·೪ ವರೆಗೆ ಏರುತ್ತವೆ. ನಾಲಿಗೆ ಹೊಲಸಾಗುತ್ತದೆ. ನಿಃಶಕ್ತಿ, ಮಂದಾಗ್ನಿ ಇತ್ಯಾದಿ ಇತರ ಲಕ್ಷಣಗಳೂ ಇದ್ದೇ ಇರುತ್ತವೆ. ಈ ವಿಕಾರದ ನಿದಾನಾತ್ಮಕ ಲಕ್ಷಣಗಳು– ಆಲಸ್ಯ, ಮಬ್ಬು, ಬೆನ್ನುನೋಯೋಣಗಳಾಗಿವೆ. ಅಲ್ಲದೆ ದೇಹದ ಕಾಂತಿ ಬದಲಾಗಿ ತೊಗಲು ಕಪ್ಪಾಗುತ್ತದೆ. ಈ ಲಕ್ಷಣಗಳು ಮೂರು ದಿನಗಳ ವರೆಗೆ ಇದ್ದು ಮುಂದೆ ಜ್ವರ ನಾರ್ಮಲ್ಲಿಗೆ ಬರುತ್ತವೆ. ಮೈಮೇಲೆ ಮೈಲಿಗಳೇಳಹತ್ತುತ್ತವೆ. ಮೊದಲಿಗೆ ಈ ಬೊಕ್ಕೆಗಳಲ್ಲಿ ನೀರು ತುಂಬಿಕೊಂಡು ಮುಂದೆ ಅವುಗಳಲ್ಲಿ ಕೀವಾಗುತ್ತದೆ. ಕೀವಾಗುವ ಹೊತ್ತಿಗೆ ಅಂದರೆ ೯ ನೇ ದಿನಕ್ಕೆ ಮತ್ತೆ ಚಳಿಯಾಗಿ ೧೫ ನೇ ದಿವಸದ ವರೆಗೆ ಜ್ವರ ಬರುತ್ತದೆ. ಆಮೇಲೆ ಕೀವು ಒಣಗಿ ಬೊಕ್ಕೆಗಳು ಹಕ್ಕಳಿಗಟ್ಟಿ ೨೦ ನೇ ದಿನದಿಂದ ಉದುರಹತ್ತುತ್ತವೆ.

**ಮೈಲಿ:—** ಮೊದಲಿಗೆ ಮುಖದ ಮೇಲೆ ಬೊಕ್ಕೆಗಳೇಳಹತ್ತಿ ಮುಂದೆ ಮೈಕೈಗಳಿಗೆಲ್ಲ ಹಬ್ಬುತ್ತವೆ. ಮೂಗಿನಹೊರಳಿ, ಕಿವಿ, ಕಣ್ಣುಗಳಲ್ಲಿಯೂ ಏಳು ವದರಿಂದ ಆಯಾ ಭಾಗದಲ್ಲಿ ಕುಂದುಕಾಣಿಸಿಕೊಳ್ಳುತ್ತದೆ. ಬೇನೆಸೌಮ್ಯವಾಗಿದ್ದರೆ ಗುಳ್ಳೆಗಳು ದೂರ ದೂರಕ್ಕೆ ಏಳುತ್ತವೆ. ತೀವ್ರವಾಗಿದ್ದರೆ ಹತ್ತಿರ ಹತ್ತಿರಕ್ಕೇ ದೊಡ್ಡವಾಗಿ ಏಳುತ್ತವೆ. ಪಿತ್ತ ಹೆಚ್ಚಾಗಿದ್ದರೆ ಬೊಕ್ಕೆಗಳಲ್ಲಿಂದ ಮತ್ತು ಕರುಳಿನಿಂದಲೂ ರಕ್ತ ಹೋಗುತ್ತದೆ. ಇದು ಬಹಳೇ ಭಯಂಕರಪ್ರಕಾರ.

**ಉಪದ್ರವ:—** ಮೆದುಳಿನ ವಿಕಾರದಿಂದ ಬಡಬಡಿಸೋಣ [ಡಿಲಿರಿಯಂ] ವು ಸುರುವಾಗುತ್ತದೆ. ಹೃದಯ ನಿಃಶಕ್ತವಾಗುತ್ತದೆ. ಸಂದು ಗಳು ನೋಯುತ್ತವೆ. ಕ್ವಚಿತ್ತಾಗಿ ಶ್ಲೇಷ್ಮಕ, ಶ್ವಸನಕಗಳೂ ಹುಟ್ಟುತ್ತವೆ. ಚಿಕ್ಕವರಿಗೆ ಬಾಲಗ್ರಹ (ಕನ್ವ್ಹಲ್‌ಶನ್) ಬರುತ್ತದೆ.

# ಚಿಕಿತ್ಸೆ

**ಪ್ರತಿಬಂಧಕ:—** ಮೈಲೀ ಚುಚ್ಚಿಸಿಕೊಳ್ಳೋಣ (ವ್ಹೆಕ್ಸಿನೇಶನ್)ವು ಒಳ್ಳೇ ಪರಿಣಾಮಕಾರಕ ಉಪಾಯವಾಗಿದೆ. ಕಾಲೀ ಮೂರ ಕಿಂಪಾ ವ್ಹಾರಿಓಲಿಯಂ ಈ ಔಷಧಿಗಳೂ ಅತ್ಯಂತ ಗುಣಕೊಡುವ ವೆಂದು ಹೋಮಿಯೋ ತಜ್ಞರು ಅನ್ನುತ್ತಾರೆ. ಅವರು ಚುಚ್ಚುವದನ್ನು ನಂಬುವದಿಲ್ಲ. ಹಸುಗೂಸುಗಳಿಗೆ ೩ ತಿಂಗಳಿನಿಂದ ಮೈಲೀತೆಗೆಯಿಸಲು ಅಡ್ಡೀ ಇಲ್ಲ. ಆದಷ್ಟು ಚಿಕ್ಕ ವಯಸ್ಸಿನಲ್ಲಿ ಮತ್ತು ಬೇಸಿಗೆಯಲ್ಲಿ ಮೈಲೀ ತೆಗೆಯಿಸುವದು ಒಳ್ಳೇದು. ಮಕ್ಕಳು ಬೆಳೆದಮೇಲೆ ತುರಿಸಿಕೊಂಡು ತ್ರಾಸ ಮಾಡಿಕೊಳ್ಳುತ್ತವೆ. ಈ ಚುಚ್ಚುಮದ್ದಿನ ಪರಿಣಾಮ ೫ ರಿಂದ ೭ ವರ್ಷ ಳಗತನಕ ಇರುತ್ತದೆ. ಆದ್ದರಿಂದ ೫ ವರ್ಷಕ್ಕೊಮ್ಮೆ ಮೈಲೀ ಚುಚ್ಚಿಸಿ ಕೊಳ್ಳುವದು ಹಿತವಾದ್ದು. ಚುಚ್ಚುಮದ್ದು ಶುದ್ಧ ಮತ್ತು ಹೊಸದಿಲ್ಲದಿದ್ದರೆ ಮೈಗೆಲ್ಲಾ ಬೊಕ್ಕೆಗಳೇಳುವವು.

**ಪ್ರತೀಕಾರಾತ್ಮಕ:—** ನಿಶ್ಚಿತವಾದ ಉಪಚಾರವಿಲ್ಲ. ಪಿತ್ತದ ಲಕ್ಷಣ ಗಳನ್ನು ಕಡಿಮೆಮಾಡಲಿಕ್ಕೆ ಪ್ರವಾಳ, ಅಮೃತಸತ್ವ, ಚಂದ್ರಕಲಾ, ಮೌಕ್ತಿಕಗಳನ್ನು ಉಪಯೋಗಿಸಬೇಕು. ಉಷ್ಣವೀರ್ಯದ ಯಾವದೇ ಔಷಧಿ,ಅನ್ನ, ಉಪಚಾರ ಕೊಡಕೂಡದು. ಶ್ಲೇಷ್ಮಕ ಮೊದಲಾದ ಬೇರೆ ಬೇರೆಉಪದ್ರವಗಳನ್ನು ಸ್ವತಂತ್ರವಾಗಿ ಚಿಕಿತ್ಸೆಮಾಡಬೇಕು. ಅತಿಸಾರವಿದ್ದರೆ ನಿಲ್ಲಿಸಬಾರದು. ಬಿಲ್ವ, ಅತಿವಿಷ, ಜೇಕಿನಗಡ್ಡಿ ಮೊದಲಾದ ಮದ್ದು ಕೊಡಬೇಕು.

**ಪ್ರಲಾಪಕ ಮತ್ತು ಚಿತ್ತವಿಭ್ರಮಕ್ಕೆ:—** ಚಂದ್ರಕಲಾ ೩ ಗುಂ. + ಪ್ರವಾಳ ೨ ಗುಂ. ಆಕಳಹಾಲಿನಲ್ಲಿ. ಬೊಕ್ಕೆಗಳಿಗೆ ಮೊದಲು ಶತಧೌತಘೃತ ಹಚ್ಚಬೇಕು. ಗುಳ್ಳೆಗಳು ಒಡೆದಮೇಲೆ ಕಾಕುಳ್ಳಿನ ಬೂದಿ ಹಚ್ಚಬೇಕು. ಈ ಭಸ್ಮ ಉತ್ತಮ ಕ್ರಿಮಿನಾಶಕ (ಆ್ಯಂಟಿಸೆಪ್‌ಟಿಕ್) ವಾಗಿದ್ದು ಹುಣ್ಣು ಗಳನ್ನು ಬೇಗ ಮಾಯಿಸುತ್ತದೆ. ಬೋರಿಕ್ ಪಾವಡರಿಗಿಂತ ಇದೊಳ್ಳೇ ಪ್ರಭಾವಶಾಲಿಯಾಗಿದೆ. ಸಂಗಜೀರಿಗಿ ಪುಡಿ + ಬಳಿಗಾರದ ಆರಳಿನ ಪುಡಿ ಗಳನ್ನು ಹಚ್ಚಬಹುದು.

**ಪಥ್ಯಾಪಥ್ಯ:—** ರೋಗಿಗೆ ೧೪ ದಿನಗಳ ನಂತರ ಸ್ನಾನಹಾಕಬೇಕು. ತೆಳ್ಳಗಿನ ಆಹಾರದ ಮೇಲಿಡಬೇಕು. ತಂಪಾದ, ಸ್ವಚ್ಛ, ಬಯಲು ಹವೆ ಮತ್ತು ಸ್ವಚ್ಛತೆಗಳು ಅತ್ಯಗತ್ಯಬೇಕು.

# ಗೊಬ್ಬರ

## Measles — ಮೀಝುಲ್ಸ

**ಸಾಮಾನ್ಯವರ್ಣನೆ:—** ಈ ವಿಕಾರ ಚಿಕ್ಕಮಕ್ಕಳಲ್ಲಿ ವಿಶೇಷವಾಗಿ ಕಂಡುಬರುತ್ತದೆ. ಕ್ವಚಿತ್ತಾಗಿ ಹಿರಿಯರು ಮುದುಕರಿಗೂ ಗೊಬ್ಬರೆದ್ದ ಉದಾಹರಣೆಗಳುಂಟು. ಇದನ್ನು ಪ್ರತಿಬಂಧಿಸುವ ಚುಚ್ಚುಮದ್ದು (ವ್ಹೆಕ್ಸಿನ್) ಇಲ್ಲ. ಇದು ಹವೆಯ ಮೂಲಕ ಹಬ್ಬುವ ರೋಗವಿರಬೇಕೆಂದು ಅನುಮಾನವಿದೆ. ಇದರ ಕ್ರಿಮಿಗಳ ಸಂಶೋಧನೆ ಇನ್ನೂ ಆಗಿಲ್ಲ.

**ಲಕ್ಷಣ ಮತ್ತು ಭಾವನೆ:—** ಮೊದಲಿಗೆ ೪ ದಿನ ೧೦೦° ೧೦೩° ವರೆಗೆ ಬರಿಯ ಜ್ವರ ಬರುತ್ತವೆ. ಬೆವರುವದಿಲ್ಲ. ತಲೆಶೂಲಿ ಇರುತ್ತದೆ. ನೆಗಡಿ ಇದರ ವಿಶೇಷ ಚಿನ್ಹ. ಕಣ್ಣು ಕೆಂಪಗಾಗೋಣ, ಗಂಟಲು ಬಾಯುವದು, ಧ್ವನಿಕೂಡೋಣ ಮೊದಲಾದ ಲಕ್ಷಣಗಳು ಕಾಣಿಸಿಕೊಳ್ಳುತ್ತವೆ. ೪ ನೇ ದಿನಕ್ಕೆ ಜ್ವರ ಕಮ್ಮಿಯಾದಹಾಗೆ ಮೈಮೇಲೆ ಗೊಬ್ಬರಗಳೇಳ ಹತ್ತುತ್ತವೆ.

**ಉಪದ್ರವಗಳು:—** ಗೊಬ್ಬರಗಳು ಹೊರಬೀಳಬೇಕೆಂದು ಅಜ್ಞಾನದಿಂದ ಹುಡುಗರಿಗೆ ಬಾಳೇಹಂಣು, ಎಮ್ಮಿಯ ಹಸೀಹಾಲು, ಉದ್ದಿನ ಹಪ್ಪಳ, ಮೊಸರುಗಳನ್ನು ತಿನಿಸುತ್ತಾರೆ. ಇದರಿಂದ ಅನೇಕ ಉಪದ್ರವಗಳು ಉತ್ಪನ್ನವಾಗುತ್ತವೆ. ಶ್ವಾಸ ನಲಿಕೆಗಳಲ್ಲಿ ಬಾವು, ನ್ಯೂಮೋನಿಯಾ, ಪ್ಲ್ಯುರಸಿ, ಕಿವೀಬಾವು, ಕಿವೀಹೊಡೆತ, ಒಡೆದು ಸೋರುವದು, ಸಂದುಗಳಲ್ಲಿ ಶೂಲಿ, ಮಸ್ತಿಷ್ಕಾವರಣ ಶೋಥ. ಇ.

**ಸಾಧ್ಯಾಸಾಧ್ಯತ್ವ:—** ಉಪದ್ರವಗಳಿಲ್ಲದ ಗೊಬ್ಬರ ಸುಸಾಧ್ಯ. ನ್ಯೂಮೋನಿಯಾ ಮೊದಲಾದ ಉಪದ್ರವಗಳುಂಟಾದಾಗ ಕಷ್ಟ ಸಾಧ್ಯ.

**ಚಿಕಿತ್ಸೆ:—** ಈ ಬೇನೆಗೆ ಭರವಸೆಯ ಪ್ರತಿಬಂಧಕ ಉಪಚಾರವಿಲ್ಲ. ಆದರೂ ಉಪದ್ರವಗಳನ್ನು ಚನ್ನಾಗಿ ಚಿಕಿತ್ಸೆ ಮಾಡಬಹುದಾಗಿದೆ. ಸಾಮಾನ್ಯವಾಗಿ ಹೈಲಿ, ಗೊಬ್ಬರಗಳಿಗೆ ಮದ್ದಿಲ್ಲೆಂಬ ತಪ್ಪು ತಿಳಿವಳಿಕೆಯಿಂದಾಗಿ ಜನರು ದೈವದ ಮೇಲೆ ಭಾರ ಹಾಕಿ ಕೂಡುವದರಿಂದ ಹಲವಾರು ಮಕ್ಕಳು ಸುಮ್ಮನೇ ಸಾಯುತ್ತವೆ. ಈ ಭಾವನೆಯನ್ನು ಹೊತ್ತಿನಲ್ಲಿಯೇ ಕಿತ್ತಿಹಾಕಿ ಕೆಳಗಿನ ಉಪಚಾರ ಮಾಡಬೇಕು.

ಗೋರೋಚನ ಮಿಶ್ರಣವನ್ನು ಆರಂಭದಿಂದಲೇ ಕೊಡುತ್ತಿರಬೇಕು. (ಗೋರೋಚನ ೪ ಗುಂಜಿ + ಪ್ರವಾಳ ೨ ಗುಂಜಿ + ಮೃಗಶೃಂಗ ೩ ಗುಂಜಿ + ಸತ್ವ ೧ ಗುಂಜಿ) ಮೊಲೆ ಹಾಲಿನಲ್ಲಿ.

**ಕಫದ ಕೆಮ್ಮು:—** ಸಿತೋಪಲಾ + ಜೇಷ್ಠಮಧು ಅಥವಾ ದ್ರಾಕ್ಷಾಸವ. ಶ್ಲೇಷ್ಮಕವೇ ಮೊದಲಾದವುಗಳನ್ನು ಸ್ವತಂತ್ರವಾಗಿ ಚಿಕಿತ್ಸೆ ಮಾಡಬೇಕು. ಆದರೆ ಅತ್ಯುಷ್ಣ ಔಷಧಿಗಳನ್ನು ಕೊಡಕೂಡದು.

**ವಾಂತಿ ಭೇದಿ:—** ಪ್ರವಾಳ ಪಂಚಾಮೃತ ಅಥವಾ ಮೌಕ್ತಿಕಯುಕ್ತ ಕಾಮದುಘಾ.

**ಜ್ವರ ಮತ್ತು ಕೆಮ್ಮು:—** ಪರ್ಪಟ (ಕಲ್ಲುಸಬ್ಬಸಿಗಿ), ಜೇಷ್ಠಮಧು, ಆಡಸಾಲ, ಕಲ್ಲುಸಕ್ಕರಿ.

## ಬಾಯೋ ಕೆಮಿಕ್

ಈ ವಿಕಾರ ಹೆಚ್ಚಾಗಿ ಚಿಕ್ಕಮಕ್ಕಳಿಗಾಗುತ್ತಿರುವದರಿಂದ ಮತ್ತು ಮಕ್ಕಳಿಗೆ ಬಾಯೋ ಕೆಮಿಕ್ ಔಷಧಿಗಳು ಚನ್ನಾಗಿ ಹಿಡಿಯುವದರಿಂದ ಈ ಕೆಳಗಿನವು ಹಿತಕರಗಳಾಗಿವೆ.

ಮುಖ್ಯ ಔಷಧಿ ಕಾಲೀ ಮೂರ್. ಅದಲು ಬದಲು ಮಾಡಿ ಫೆರಂಫಾಸನ್ನೂ ಕೊಡಬೇಕು. ಕಾ. ಸ., (ಕಾ. ಮೂ.) ನೈ. ಸ., ನೆ.ಫಾ., ಕಾ.ಫಾ. ಮೊದಲಾದವುಗಳನ್ನು ಲಕ್ಷಣಗಳಿಗೆ ತಕ್ಕಂತೆ ಕೊಡಬೇಕು.

**ಪಥ್ಯಾಪಥ್ಯ:—** ಏಳು ಅಥವಾ ಒಂಭತ್ತನೇ ದಿನಕ್ಕೆ ಮೈಗೆ ನೀರು ಹಣಿಸಬೇಕು. ಹಗುರಾದ ಆಹಾರ ಕೊಡಬೇಕು. ಬಾಳೇಹಣ್ಣು, ಮೊಸರು ಮೊದಲಾದ ಪದಾರ್ಥಗಳನ್ನು ಕೊಡಬಾರದು.

### ಗಣಜಲಿ

ಗಣಜಲಿ ಮತ್ತು ಇದಕ್ಕೆ ಸಮಾನವಾದ ಚಾಪಿ, ತಟ್ಟು ಮೊದಲಾದವು ಮಕ್ಕಳಿಗಾಗುವ ಸಾಮಾನ್ಯ ವಿಕಾರಗಳಾಗಿವೆ. ಮೊದಲು ಸ್ವಲ್ಪ ಜ್ವರ ಬಂದು ಮೈಮೇಲೆ ಗುಳ್ಳೆಗಳೆದ್ದು ೨-೩ ದಿನಗಳಲ್ಲಿಯೇ ಅಡಗುತ್ತವೆ. ಮೈಯ್ಯಲ್ಲಿ ಬೇನೆ ಇದ್ದರೂ ಮಕ್ಕಳು ಪರಿವೆ ಇಲ್ಲದೆ ಆಡುತ್ತಲೇ ಇರುತ್ತಾರೆ. ಪ್ರವಾಳ ಮತ್ತು ಅಮೃತ ಸತ್ವಗಳಂಥ ಸಾಮಾನ್ಯ ಔಷಧಿ ಮತ್ತು ತುಸು ಪಥ್ಯದಿಂದ ಕೆಲಸ ಕೈಗೂಡುತ್ತದೆ.

—o—

## ರಾಜಯಕ್ಷ್ಮಾ (ಕ್ಷಯ)

### Tuberculosis—ಟ್ಯುಬರಕ್ಯುಲಾಸಿಸ್

**ಜ್ವರ ಸಾಮಾನ್ಯ:—** ಜ್ವರವಿರುವ ರೋಗಗಳಲ್ಲಿ ಇದೂ ಒಂದಾದ್ದರಿಂದ ಈಗ ಕ್ಷಯದ ವಿಚಾರ ಮಾಡೋಣ. ಸೀತ ಪೂರ್ವಕ, ಆಂತ್ರಿಕ ಮೊದಲಾದ ದೀರ್ಘಾವಧಿಯ ಜ್ವರಗಳ ನಂತರ ಅಥವಾ ಶ್ಲೇಷ್ಮಕ, ಶ್ವಸನಕಗಳಂತಹ ಫುಪ್ಫುಸ ವಿಕೃತಿಯ ನಂತರವೂ ಕ್ಷಯದ ವಿಕಾರ ಉಂಟಾಗುತ್ತದೆ.

ಪ್ರಾಣವನ್ನು ಕೊಳ್ಳುವ ಹಲವಾರು ರೋಗಗಳಲ್ಲಿ ಕ್ಷಯಕ್ಕೆ ರಾಜಾಧಿರಾಜನ ಪಟ್ಟವಿದೆ, ಅಂತೇ ಇದಕ್ಕೆ ರಾಜಯಕ್ಷ್ಮಾ "ಯಕ್ಷ್ಮಣಾಂ ರಾಜಾ" ಯಂಬ ಹೆಸರು ಬಂದಿದೆ. ಈ ಭಯಂಕರ ಸಾಂಸರ್ಗಿಕ ರೋಗದಿಂದ ಭಾರತದಲ್ಲಿ ಮಿನೀಟಿಗೆ ಒಬ್ಬರಂತೆ ಜನರು ಪ್ರಾಣಕ್ಕೆರವಾಗುತ್ತಾರೆ. ಈ ಬೇನೆಯನ್ನು ಸಕಾಲದಲ್ಲಿ ತಡೆಗಟ್ಟದಿದ್ದರೆ, ರಾಷ್ಟ್ರದ ಸರ್ವನಾಶ ಸಂಭವಿಸಬಹುದಾಗಿದೆ.

**ಕ್ರಿಮಿ ಮತ್ತು ಪ್ರಕಾರ:—** "ಟ್ಯುಬರ್ ಕ್ಯುಲರ್ ಬ್ಯಾಸಿಲಸ್" ಎಂಬ ಕ್ರಿಮಿಯಿಂದ ಈ ಬೇನೆ ಸಂಭವಿಸುತ್ತದೆ. ಈ ಕ್ರಿಮಿಗಳು ನಾಲ್ಕು

ಬಗೆಯಾಗಿವೆ. ಮನುಷ್ಯನಲ್ಲಿ ಹ್ಯೂಮನ್, ದನದಲ್ಲಿ ಬೋವ್ಹಾಯಿನ್, ಹಕ್ಕಿಗಳಲ್ಲಿ ಏವ್ಹಾಯಿನ್ ಮತ್ತು ಮೀನುಗಳಲ್ಲಿ ಪಾಯಸಿನ್, ಎಂದು ಈ ಕ್ರಿಮಿಗಳಿಗೆ ಬೇರೆ ಬೇರೆ ಹೆಸರುಂಟು. ಮೊದಲಿನೆರಡು ಜಾತಿಯ ಕ್ರಿಮಿಗಳೇ ಮನುಷ್ಯ ದೇಹದ ಮೇಲೆ ವಿಶೇಷ ಪ್ರಭಾವ ಬೀರುತ್ತವೆ.

(ಅ) **ಹ್ಯೂಮನ್**:— ಫುಪ್ಫುಸದಲ್ಲಿ ಪರಿಣಾಮ ಮಾಡುವದರಿಂದ ಕಫ ಕ್ಷಯ ಉಂಟಾಗುತ್ತದೆ. ಹವೆಯ ಮೂಲಕ ಈ ಕ್ರಿಮಿ ಹಬ್ಬುತ್ತದೆ.

(ಆ) **ಬೋವ್ಹಾಯಿನ್**:— ದನಗಳ ಹಾಲಿನ ಮೂಲಕವಾಗಿ ಈ ಕ್ರಿಮಿ ಮನುಷ್ಯನ ದೇಹವನ್ನು ಹೊಗುತ್ತದೆ. ಮತ್ತು ಕರುಳು, ಗ್ರಂಥಿ, ಚರ್ಮ, ಎಲವು, ಸಂದು, ಕಂಣು, ಮೂತ್ರಪಿಂಡ, ಬೆನ್ನೆಲಬು ಮೊದಲಾದ ಭಾಗಗಳಲ್ಲಿ ವಿಕಾರನ್ನು ನಿರ್ಮಾಣ ಮಾಡುತ್ತದೆ. ಆಯಾ ಅವಯವಗಳ ದುಷ್ಟಿಗಳಿಗನುಗುಣವಾಗಿ ಆಂತ್ರಕ್ಷಯ,[ಇಂಟೆಸ್ಟಾಯಿನಲ್ ಟೀ. ಬಿ.] ಅಸ್ಥಿಕ್ಷಯ [ಬೋನ್ ಟೀ.ಬಿ.] ಗ್ರಂಥಿಕ್ಷಯ [ಗ್ಲಾಂಡ್ ಟೀ.ಬಿ.] ಸಂಧಿಕ್ಷಯ [ಜಾಯಿಂಟ ಟೀ. ಬಿ.] ಬೆನ್ನೆಲಬಿನ ಕ್ಷಯ [ಸ್ಪಾಯಿನ್ ಟೀ. ಬಿ.] ಗಳೆಂಬ ಹೆಸರು ರೂಢವಾಗಿವೆ. ಕ್ಷಯದ ಅತ್ಯಂತ ತೀವ್ರವಾದ ಪ್ರಕಾರಕ್ಕೆ [ಗ್ಯಾಲೋಪಿಂಗ ಟೀ.ಬಿ.] ಶೀಘ್ರ 'ಸಂಹಾರಕ ಕ್ಷಯ' ಎನ್ನಬಹುದು. ಇದು ಬಲು ಬೇಗ ಪ್ರಾಣ ತಕ್ಕೊಳ್ಳುತ್ತದೆ.

**ಕಾರಣ ಮೀಮಾಂಸಾ ಮತ್ತು ಸಂಪ್ರಾಪ್ತಿ**:— ಇದರಲ್ಲಿ ರಸ, ರಕ್ತವೇ ಮೊದಲಾದ ಸಪ್ತ ಧಾತುಗಳು ಉತ್ತರೋತ್ತರ ಕ್ಷೀಣವಾಗುತ್ತ ಹೋಗುತ್ತವೆ. ಈ ಬೇನೆಗೆ ಅನೇಕ ಕಾರಣಗಳಿವೆ. ಕ್ರಿಮಿ ಇದು ಒಂದು ಕಾರಣವದೆ. ಆದರೆ ಅದೇನು ಏಕಮೇವಾ ದ್ವಿತೀಯ ಕಾರಣವಲ್ಲ. ಅನೇಕ ಜನರ ಫುಪ್ಫುಸದಲ್ಲಿ ಕ್ಷಯದ ಕ್ರಿಮಿ ಕಂಡು ಬಂದರೂ ಅವರಿಗೇನು ಕ್ಷಯ ಹತ್ತಿರುವದಿಲ್ಲ. ಪ್ರತಿಯಾಗಿ ಕ್ಷಯ ಹತ್ತಿರುವ ಪ್ರತಿಯೊಬ್ಬರ ಕಫದಲ್ಲಿ ಕ್ರಿಮಿ ಇದ್ದೇ ತೀರಬೇಕೆಂದೇನಿಲ್ಲ. ಅಂತೇ ಈ ಬೇನೆಯ ನಿದಾನ ಮಾಡುವದು ಬಲು ಗಡುಚಿನದಾಗಿದೆ. ಆಯುರ್ವೇದದಲ್ಲಿ ಇದರ ಬಗ್ಗೆ ಒಳ್ಳೇ ಸುಂದರ ಮತ್ತು ಮಾರ್ಮಿಕ ವರ್ಣನೆ ಬಂದಿದೆ. ಜೀರ್ಣಜ್ವರ, ಅಸ್ಥಿಜ್ವರ, ಅಥವಾ ಕ್ಷಯದ ಭಾವನೆಗಳೆಂಬ, ಕ್ಷಯದ ಪೂರ್ವದ

ಅವಸ್ಥೆಗಳಲ್ಲಿ ಯೋಗ್ಯ ಪರೀಕ್ಷೆ, ತಕ್ಕ ಚಿಕಿತ್ಸೆಗಳಾದರೆ ಪಶ್ಚಾತ್ತಾಪ ಪಡುವ ಪ್ರಸಂಗ ಬರುವದಿಲ್ಲ.

ಕಫ ಪರೀಕ್ಷೆ (ಸ್ಪೂೃಟಂ ಎಗ್‌ಝ್ಯಾಮಿನೇಶನ್) 'ಕ್ಷ' ಕಿರಣ ಪರೀಕ್ಷೆ(ಎಕ್ಸರೇ) ಇತ್ಯಾದಿ ಸಾಧನಗಳಿಂದ ಕ್ಷಯವೆಂದು ಡಾಕ್ಟರರು ನಿಶ್ಚಿತ ನಿದಾನಮಾಡುವ ಹೊತ್ತಿಗೆ, ರೋಗಿ ಗುಣಹೊಂದುವ ಸ್ಥಿತಿಯಲ್ಲಿರುವದಿಲ್ಲ. ಹಾಗೂ ಈ ಸಾಧನೆಗಳೂ ಬಡವರ ತೆಕ್ಕೆಯಲ್ಲಿ ತಕ್ಕವಲ್ಲ. ಇದರಂತೆ ಕ್ಷಯರೋಗ ಚಿಕಿತ್ಸಾಲಯ (ಸೆನೆಟೋರಿಯಂ)ದ ಉಪಚಾರ ಅಥವಾ ಸೂರ್ಯಕಿರಣ ಮಂದಿರ (ಸೊಲೇರಿಯಂ)ದ ಚಿಕಿತ್ಸೆಗಳಂತೂ ಬಡವರ ಪಾಲಿನವಲ್ಲವೇ ಅಲ್ಲ. ಆದ್ದರಿಂದ ಈ ರೋಗದ ಕಾರಣ ಮೀಮಾಂಸೆಯು ಯೋಗ್ಯ ವೇಳೆಯಲ್ಲಿಯೇ ಲಕ್ಷ್ಯಪೂರ್ವಕವಾಗಿ ಆಗಲಿಕ್ಕೆ ಬೇಕು. ಆಯುರ್ವೇದದಲ್ಲಿ ಕೆಳಗಿನ ವಿಚಾರಗಳನ್ನು ಹೇಳಿದ್ದಾರೆ.

॥ ವೇಗಾವರೋಧಾತ್ ಕ್ಷಯಾಚ್ಚೈವ ।
ಸಾಹಸಾದ್ವಿಶಮಾಶನಾತ್ ॥
॥ ತ್ರಿದೋಷೋ ಜಾಯತೇ ಯಕ್ಷ್ಮಾ ।
ಗದೋಹೇತು ಚತುಷ್ಟಯಾತ್ ॥

**ವೇಗಾವರೋಧ:**— ಕ್ಷಯ, ಸಾಹಸ ಮತ್ತು ವಿಷಮಾಶನಗಳೆಂಬ ನಾಲ್ಕು ಕಾರಣಗಳ ಮೂಲಕ ತ್ರಿದೋಷಾತ್ಮಕವಾದ ರಾಜಯಕ್ಷ್ಮ ವಾಗುತ್ತದೆ.

**ವೇಗಾವರೋಧ:**— ಮಲಮೂತ್ರ, ಹಸಿವೆ, ನೀರಡಿಕೆ ಮೊದಲಾದ ದೇಹ ಸಂಬಂಧದ ವೇಗಗಳನ್ನು ತಡೆಯುವದರಿಂದ ಶರೀರದಲ್ಲಿ ಅನೇಕ ತರಹದ ವಿಕೃತಿಗಳುಂಟಾಗುತ್ತವೆ. ಮಲಮೂತ್ರಗಳನ್ನು ಕಟ್ಟುವದರಿಂದ ಮಲಾವರೋಧ, ಅಗ್ನಿಮಾಂದ್ಯ ಮತ್ತು ದೇಹ ವಿಷಮಯವಾಗೋಣ ಎಂಬಿವೇ ವಿಕಾರಗಳುಂಟಾಗುತ್ತವೆ. ಹಾಗೆಯೇ ಹಸಿವು ನೀರಡಿಕೆಗಳನ್ನು ಕಟ್ಟುವದರಿಂದ ದೇಹ ಕ್ಷೀಣವಾಗಿ ಧಾತುಪರಿಪೋಷಣ ಕ್ರಿಯೆ (ಮೆಟೆಬಾಲಿಝಂ)ಯಲ್ಲಿ ವ್ಯತ್ಯಾಸ ಉಂಟಾಗುತ್ತದೆ. ಇದರಿಂದ ಕ್ಷಯಕ್ಕೆ ಅನು

ಕೂಲ ಭೂಮಿ ಸಿದ್ಧವಾಗುತ್ತದೆ. ಆ್ಯಲೋಪಥಿಯಲ್ಲಿ ವೇಗಾವರೋಧ ಕಾರಣಗಳಿಗೆ ವಿಶೇಷ ಮಹತ್ವ ಕೊಟ್ಟಂತಿಲ್ಲ.

**ಕ್ಷಯ:—** ಇಲ್ಲಿ ಕ್ಷಯ ಶಬ್ದಕ್ಕೆ ಒಂದೊಂದೇ ಧಾತುವಿನ ಕ್ಷಯವೆಂಬ ಅರ್ಥ ಅಭಿಪ್ರೇತವಾಗಿದೆ. ರಸಕ್ಷಯ, ರಕ್ತಕ್ಷಯ ಇತ್ಯಾದಿ ಕ್ರಮದಿಂದ ಅನ್ಯೋನ್ಯ ಧಾತುಗಳು ಕ್ಷೀಣವಾಗುತ್ತ ಹೋಗುವದಕ್ಕೆ ಅನುಲೋಮ ಕ್ಷಯವೆನ್ನುತ್ತಾರೆ. ಪ್ರತಿಯಾಗಿ ಅತಿಮೈಥುನದಿಂದ ವೀರ್ಯ-ಓಜಗಳು ಕ್ಷೀಣವಾಗುತ್ತ ಹೋಗಿ ಆಮೇಲೆ ಯಥಾಪೂರ್ವ ಮಜ್ಜಾ, ಅಸ್ಥಿ ಮೊದಲಾದ ಧಾತುಗಳ ಕ್ಷೀಣವಾಗುವದಕ್ಕೆ ಪ್ರತಿಲೋಮ ಕ್ಷಯವೆನ್ನುತ್ತಾರೆ. ಒಂದೇ ವ್ಯಕ್ತಿಗೆ ಅನುಲೋಮ ಪ್ರತಿಲೋಮಗಳೆರಡರ ಪ್ರಕ್ರಿಯೆಯಿಂದಾಗಿ ಕ್ಷಯ ಸಂಭವಿಸುತ್ತದೆ.

**ಸಾಹಸ:—** ಶಕ್ತಿಮೀರಿ ಶಾರೀರಿಕ ಅಥವಾ ಮಾನಸಿಕ ಕೆಲಸ ಮಾಡೋಣಕ್ಕೆ ಸಾಹಸವೆನ್ನುತ್ತಾರೆ. ಈಗಿನ ದಿನಗಳಲ್ಲಿ “ಸಾಯಕಲ್ ವಿಕ್ರಮ” ಅಥವಾ “ವೇಟಲಿಪ್ಟಿಂಗ್” ಮೊದಲಾದ ಸಾಹಸಗಳಿಂದ ಉರಃಕ್ಷತವಾಗಿ ಕ್ಷಯವಾದ ಉದಾಹರಣೆಗಳುಂಟು. ಅತಿಶ್ರಮ, ಅತೀ ವ್ಯಾಯಾಮ, ಅವಿಶ್ರಾಂತ ದೇಹಿಕ ಅಥವಾ ಮಾನಸಿಕ ಶ್ರಮ ಇವುಗಳಿಂದ ಧಾತು ಕ್ಷೀಣವಾಗಿ ಮುಂದೆ ಕ್ಷಯದ ಬೆಳವಣಿಗೆಗೆ ಪೋಷಕ ಪರಿಸ್ಥಿತಿ ನಿರ್ಮಾಣವಾಗುತ್ತದೆ.

**ವಿಷಮಾಶನ:—** ಹೊತ್ತುತಪ್ಪಿ ಊಟ, ಮಿತಿಮೀರಿ ಅಥವಾ ತೀರ ಕಮ್ಮಿ ತಿನಿಸು, ಮೇಲಿಂದಮೇಲೆ ಒಂದೇಸವನೆ ತಿನಿಸು ಮತ್ತು ಅಹಿತಕರ ಆಹಾರ ಇವೆಲ್ಲಾ ಕ್ಷಯದ ಬೆಳವಣಿಗೆಗೆ ಪೋಷಕಗಳಾಗುವದು ನಿಶ್ಚಿತ. ಇವಲ್ಲದೆ ಈ ಕೆಳಗಿನ ಕಾರಣಗಳೂ ಮಹತ್ವದವಾಗಿವೆ.

(೧) **ಆನುವಂಶಿಕತ್ವ:**—ತಾಯಿ ತಂದೆಗಳಲ್ಲಿ ಕ್ಷಯವಿದ್ದರೆ ಮಕ್ಕಳಿಗೂ ಅದು ಬರಬಹುದು.

(೨) **ಘಾತುಕ ನಡಾವಳಿ:**— ಹೆಣ್ಣು ಮಕ್ಕಳಲ್ಲಿ ಈ ಬೇನೆ ವಿಶೇಷವಾಗಿ ಕಂಡುಬರುತ್ತದೆ. ಮೇಲಿಂದಮೇಲೆ ಬಸಿರು ಬಾಣಂತಿತನ, ಕೆಲಸದ ಭಾರ,

ಹೈನಹಾಲುಗಳ ಅಭಾವ ಮುಂತಾದ ಕಾರಣಗಳು ಇದಕ್ಕೆ ಪೋಷಕ ಗಳಾಗಿವೆ. ಕೆಲವು ಸಮಾಜದಲ್ಲಿರುವ ಘೋಷಾಪದ್ಧತಿಯೂ ಬಲು ಘಾತುಕವಾಗಿದೆ.

(೩) **ಬೈಲು ಹವೆ, ಸೂರ್ಯಪ್ರಕಾಶಗಳ ಅಭಾವ:**— ಸೂರ್ಯ ಕಿರಣದಲ್ಲಿ ಕ್ಷಯದ ಕ್ರಿಮಿಗಳನ್ನು ಕೊಲ್ಲುವ ಶಕ್ತಿ ಇದೆ. ಕತ್ತಲಿ, ತೇವು, ಕಟ್ಟಿದ ಹವೆಗಳಲ್ಲಿ ಕ್ರಿಮಿಗಳು ಬೆಳೆಯುತ್ತವೆ.

(೪) **ದೀರ್ಘಾವಧಿಯ ಬೇನೆ:**— ಮಲೇರಿಯಾ, ಟಾಯಿಫಾಯಿಡ್, ಮಧುಮೇಹ, ದಮ್ಮುಗಳೂ ಕ್ಷಯವನ್ನು ತರುವ ಕಾರಣಗಳಾಗಿವೆ.

(೫) ವ್ಯಾಯಾಮವಿಲ್ಲದಿರೋಣ, ಬಗ್ಗಿ ಕೂಡೋಣ ಮತ್ತು ಬಗ್ಗಿ ನಡೆಯೋಣದರಿಂದ ಪುಪ್ಪುಸಗಳ ಶಕ್ತಿ ಕಮ್ಮಿಯಾಗಿ ಕ್ಷಯವುಂಟಾಗುತ್ತದೆ. ಇತ್ತೀಚಿನ ತರುಣ ಹೆಣ್ಣುಮಕ್ಕಳಲ್ಲಿ ಕಂಡುಬರುವ ಬಗ್ಗಿ ನಡೆಯುವ ಫ್ಯಾಶನ್ ಬಲು ಘಾತುಕವಾಗಿದೆ. ಇದಲ್ಲದೆ ನಿದ್ದೆಗೇಡು, ಮುಷ್ಟಿಮೈಥುನ, ಉಪದಂಶ, ಮೆದುಳಿನ ವಿಕಾರ ಮೊದಲಾದವೂ ಕ್ಷಯಕ್ಕೆ ಕಾರಣವಾಗಿವೆ.

ಸಂಪ್ರಾಪ್ತಿ:—ಕಫ ಪ್ರಧಾನ್ಯೈರ್ದೋಷೈಸ್ತು ।
ರುದ್ಧೇಷು ರಸವರ್ತ್ಮಸು॥
ಅತಿ ವ್ಯವಾಯಿ ನೋವಾಪಿ

ಕ್ಷೀಣೇ ರೇತಸ್ಯ ನಂತರಾಃ ॥
ಕ್ಷೀಯಂತೆ ಧಾತ ವಃ ಸರ್ವೇ ।
ತತಃ ಶುಷ್ಯತಿ ಮಾನವಃ ॥

ಕಫಪ್ರಧಾನವಾಗಿರುವ ತ್ರಿದೋಷಗಳಿಂದ ರಸಹರಿಯುವ ಸ್ರೋತಸ್ಸುಗಳು ಕಟ್ಟಿ; (ಅನುಲೊಮಕ್ಷಯ) ಅಥವಾ ಅತಿ ಮೈಥುನದಿಂದ ವೀರ್ಯ ಕ್ಷೀಣವಾಗಿ ಇತರ ಯಥಾಪೂರ್ವ—ಹಿಂದೆ ಹಿಂದಿನ ಧಾತುಗಳು ಕ್ಷೀಣವಾಗುವದರಿಂದ ಮನುಷ್ಯನಿಗೆ ಕ್ಷಯ ಹತ್ತುತ್ತದೆ. (ಪ್ರತಿಲೋಮ) ಹೀಗೆಂದು ಮಾಧವಕಾರರು ಇದರ ಸಂಪ್ರಾಪ್ತಿಯನ್ನು ಹೇಳಿದ್ದಾರೆ. ಇದರಲ್ಲಿ ತ್ರಿದೋಷ ದುಷ್ಟಿಯಂತೂ ಇದ್ದೇ ಇರುವದಲ್ಲದೆ ವಿಶೇಷವಾಗಿ ಹೆಚ್ಚಿ ಕಫ

ಕೊಂಡಿರುತ್ತದೆ. ಚಿಕಿತ್ಸೆ ಮಾಡುವಾಗ ಇದರ ಬಗೆಗಾಗಿ ವಿಶೇಷ ವಿಚಾರ ಮಾಡಬೇಕು.

**ಲಕ್ಷಣ ಮತ್ತು ಭಾವನೆಗಳು:—** ಅಂಸಪಾರ್ಶ್ವಾಭಿತಾಪಶ್ಚ ಸಂತಾಪಃ ಕರಪಾದಯೋಃ। ಜ್ವರಃ ಸರ್ವಾಂಗ ಗಶ್ಚೇತಿ ಲಕ್ಷಣಂ ರಾಜ ಯಕ್ಷ್ಮಣಃ ॥

ಹೆಗಲು ಪಕ್ಕಡಿಗಳ ಎಲವು ಕಾದಿರುತ್ತವೆ. ಕೈಕಾಲು ಉರಿ ಮತ್ತು ಮೈತುಂಬ ಜ್ವರ ಇವು ಕ್ಷಯದ ಲಕ್ಷಣಗಳು. ಇದಲ್ಲದೆ ಬಲಮಾಂಸ ವಿಹೀನತ್ವ, ತೂಕ ಕಡಿಮೆಯಾಗುತ್ತ ಹೋಗೋಣ, ರಕ್ತಷ್ಠೀವನ, ರಾತ್ರಿ ಬೆವರು, ಹಸಿವಿಲ್ಲದಿರೋಣ, ಧ್ವನಿ ಬೀಳೋಣ ಈ ಲಕ್ಷಣಗಳು ಆರಂಭಕ್ಕೆ ಕಂಡು ಬರುವವು.

**ವಿಶೇಷ:—**ಕ್ಷಯರೋಗಕ್ಕೆ ಏಕೆ ಯಾವಾಗ್ಗೆ ಮತ್ತು ಹೇಗೆ ಆರಂಭ ವಾಗುತ್ತದೆಂಬುದನ್ನು ನಿಶ್ಚಿತವಾಗಿ ಹೇಳುವದು ಕಠಿಣವಾಗಿದೆ. ಮೇಲಿನ ಲಕ್ಷಣಗಳು ಬಲು ಮಂದವಾಗಿ ಬೆಳೆಯುತ್ತ ಬರುತ್ತವೆ. ರೋಗಿಗೆ ಇದು ಗೊತ್ತಾಗುವದಿಲ್ಲ. ಅಥವಾ ಅಜ್ಞಾನ, ದುರಭಿಮಾನ ಮತ್ತು ನಾಚಿಕೆ ಗಳಿಂದ ಈ ಲಕ್ಷಣಗಳತ್ತ ಬುದ್ಧಿಪೂರ್ವಕವಾಗಿ ದುರ್ಲಕ್ಷ್ಯವಾಗುತ್ತದೆ.ರೋಗ ಕೈಮೀರಿದ ಮೇಲೆ ಓಡಾಡಲಿಕ್ಕೆ ಆರಂಭವಾಗುವದಿದು ನಿತ್ಯಾನುಭವ.

**ಫುಪ್ಫುಸ ವಿಕೃತಿ:—** ಸಾಮಾನ್ಯವಾಗಿ ಫುಪ್ಫುಸಗಳ ಮೇಲಿನ ತುದಿಗಳು (ಅಪೆಕ್ಸ) ಕೆಡುತ್ತವೆ. ಈ ಭಾಗದಲ್ಲಿ ಚಲನವಲನ ಕ್ರಿಯೆ ಕಡಿಮೆ ಯಾಗಿರುವದರಿಂದ ಅಲ್ಲಿ ಪ್ರಾಣವಾಯು ಸಾಕಷ್ಟು ಸಂಚಾರ ಮಾಡದಿರು ವದೇ ಇದಕ್ಕೆ ಕಾರಣ. ಅದರಲ್ಲೂ ಬಲ ಫುಪ್ಫುಸದ ತುದಿ ಕೆಡುವದು ಹೆಚ್ಚು. ಬಲ ಫುಪ್ಫುಸದ ಕೆಳಕ್ಕೆ ಯಕೃತ್ತು ಇರುವದರಿಂದ ಫುಪ್ಫುಸಕ್ಕೆ ಕೆಳಗಡೆಯ ಗತಿ ಸ್ವಾಭಾವಿಕವಾಗಿ ಕುಂಠಿತವಾಗುವದರಿಂದ ಆ ಫುಪ್ಫುಸದ ಆಕುಂಚನ ಪ್ರಸಾರಣ ಕ್ರಿಯೆ ಕಡಿಮೆಯಾಗಿ ಅದರ ತುದಿಯು ಬೇಗ ಕೆಡಲು ಕಾರಣವಾಗುತ್ತದೆ.

ಫುಪ್ಫುಸಗಳಲ್ಲಿ ಕ್ರಿಮಿಗಳು ಪ್ರವೇಶಿಸಿದಕೂಡಲೇ ಅಲ್ಲಿ ಅವು ವೇಗ ವಾಗಿ ಬೆಳೆದು ಫುಪ್ಫುಸದ ಭಾಗವನ್ನೆಲ್ಲ ಬೇಗ ವ್ಯಾಪಿಸಿಕೊಳ್ಳುತ್ತವೆ. ಅಲ್ಲಿ

ಸಂರಂಭ ಮತ್ತು ಬಾವು ಬಂದು ಒಣ ಕೆಮ್ಮಿಗೆ ಶುರುವಾಗುತ್ತದೆ. ಈ ಸ್ಥಿತಿಯಲ್ಲಿ ವಾತ ಬೆಳೆದಿರುವದು. ಮುಂದೆ ಪಿತ್ತ ದುಷ್ಟಿಯಿಂದ ರಕ್ತ ನಾಳಗಳು ಒಡೆದು ಬಾಯಿಂದ ಕಫದಲ್ಲಿ ರಕ್ತ ಬೀಳಹತ್ತುತ್ತದೆ. ಕೊನೆಯಲ್ಲಿ ಕಫ ಹೆಚ್ಚಿಕೊಂಡಾಗ ಕೀವು ಕೂಡಿದ ದುರ್ವಾಸನೆಯು ಕಫ ಬೀಳತೊಡಗುವದು. ಆಮೇಲೆ ಫುಪ್ಫುಸದ ಅಷ್ಟಷ್ಟು ಭಾಗ ಕೊಳೆತು ಕಳಚಿ ಬಿದ್ದು ಆಯಾ ಭಾಗಗಳು ಪೊಳ್ಳಾಗು (ಕ್ಯಾವ್ಹಿಟಿ) ತ್ತವೆ.

**ಅವಸ್ಥೆ:—** ಇದರಲ್ಲಿ ಮೂರವಸ್ಥೆಗಳನ್ನು ಕಲ್ಪಿಸಿದ್ದಾರೆ. (ಅ) ಪ್ರಥಮಾವಸ್ಥೆ (ವಾತಾವಸ್ಥಾ) ಜ್ವರ:- ಬೆಳಿಗ್ಗೆ (೯೭°) ಕ್ಕೂ ಕಡಿಮೆ ಪ್ರಮಾಣ (ಸಬ್‌ನಾರ್ಮಲ್) ವಿದ್ದು ಮಧ್ಯಾಹ್ನಕ್ಕೆ ಎಲಬುಗಳು ಕಾಯಹತ್ತುತ್ತವೆ. ಜ್ವರ (೯೯°) ಕ್ಕೆ ಏರುತ್ತದೆ. ರಾತ್ರಿ ಬೆವೆಯುತ್ತದೆ. ಶೀಘ್ರನಾಡಿ ಇದರ ವಿಶೇಷ ಲಕ್ಷಣ, ದಿನದಿನಕ್ಕೆ ನಿಃಶಕ್ತಿ ಹೆಚ್ಚುತ್ತದೆ. ಒಣ ಕೆಮ್ಮು, ಅಗ್ನಿಮಾಂದ್ಯ ಮೊದಲಾದ ಲಕ್ಷಣಗಳು ತೋರಿಬರುತ್ತವೆ.

(ಆ) **ದ್ವಿತಿಯಾವಸ್ಥೆ** (ಪಿತ್ತಾವಸ್ಥಾ) :— ಜ್ವರ ಬೆಳೆಯುತ್ತವೆ (೧೦೨°) ಕೈಕಾಲು, ಕಣ್ಣುಗಳಲ್ಲಿ ಉರಿ, ಹೆಗಲು ಪಕ್ಕಡೆಗಳಲ್ಲಿ ಉರಿ, ಎದೆ ನೋವು, ರಕ್ತ ಬಿಳೋಣ, ತೂಕ ಕಡಿಮೆಯಾಗೋಣ, ಬಲಮಾಂಸ ವಿಹೀನತ್ವವು ಹೆಚ್ಚಾಗೋಣ, ಶ್ವಾಸೋಚ್ಛ್ವಾಸದ ವೇಗ ಹೆಚ್ಚಾಗೋಣ, ಧ್ವನಿ ಕೂಡೋಣ.

(ಇ) **ತೃತೀಯಾವಸ್ಥೆ** (ಕಫಾವಸ್ಥಾ) ಜ್ವರದ ಬೆಳವಣಿಗೆ (೧೦೩°) ವರೆಗೆ ಕಫ ತೆಳ್ಳಗೆ ಕೆಟ್ಟ ನಾರ ಹತ್ತಿದ್ದು, ಅದರಲ್ಲಿ ಫುಪ್ಫುಸದ ಕೊಳೆತ ಭಾಗದ ತುಣುಕುಗಳಿರುತ್ತವೆ. ಫುಪ್ಫುಸಗಳಲ್ಲಿ ಪಳ್ಳ ಉಂಟಾಗುತ್ತದೆ. ಕ್ವಚಿತ್ತಾಗಿ ಅತಿಸಾರವಾಗುವದೂ ಉಂಟು. ಕೈಕಾಲುಗಳಿಗೆ ಬಾವು ಕೊನೆಯಲ್ಲಿ ಜಲೋದರವೂ ಆಗಬಹುದು. ಹೆಣ್ಣುಮಕ್ಕಳಿಗೆ ಮುಟ್ಟು ಕಡಿಮೆಯಾಗುತ್ತ ಹೋಗುತ್ತದೆ.

**ನಿದಾನ:—** ಶಕ್ತಿಪಾತ, ತೂಕ ಕಡಿಮೆಯಾಗುವದು, ಸಂಜೆಗೆ ಜ್ವರ, ರಾತ್ರಿ ಬೆವರು, ಕೆಮ್ಮು, ರಕ್ತ ಕೂಡಿದ ಉಗುಳು, ಬೆಳಿಗ್ಗೆ ನಾಡಿ

ತೀವ್ರವಾಗಿರೋಣ ಮೊದಲಾದವು ಕ್ಷಯದಲ್ಲಿ ನಿದಾನ ಮಾಡತಕ್ಕ ಲಕ್ಷಣಗಳು. ಯಾವಾಗಲೂ ಎಲ್ಲ ಲಕ್ಷಣಗಳೂ ಇದ್ದೇ ಇರುವವೆಂದೇನಿಲ್ಲ. ಮೊದಲು ಒಂದೇ ಲಕ್ಷಣ ಕಂಡು ಬರುತ್ತವೆ.

**ಸಾಧ್ಯಾಸಾಧ್ಯತ್ವ:—** ಬಲವುಳ್ಳ ಮನುಷ್ಯರ ಪ್ರಥಮಾವಸ್ಥೆಯಲ್ಲಿದ್ದ ಉಪದ್ರವ ರಹಿತ ಕ್ಷಯವೂ ಕಷ್ಟಸಾಧ್ಯವೇ. ಶಕ್ತಿ ಕ್ಷೀಣವಾಗುತ್ತ ನಡೆಯೋಣ, ರಕ್ತ ಬೀಳೋಣ ಮೊದಲಾದ ಲಕ್ಷಣಗಳು ನಿರಾಶಾಜನಕವಾದವುಗಳೆಂದು ತಿಳಿಯಬೇಕು, ಮೂರನೇ ಅವಸ್ಥೆಯಲ್ಲಿದ್ದ ರೋಗಿ ಬದುಕುವದಿಲ್ಲ. ಪ್ರಥಮಾವಸ್ಥೆಯಲ್ಲಿ ಯೋಗ್ಯ ಚಿಕಿತ್ಸೆಯಾಗಿ ರೋಗಿ ಬದುಕಿಕೊಂಡ ಉದಾಹರಣೆಗಳುಂಟು.

**ಚಿಕಿತ್ಸೆ (ಅ) ಪ್ರತಿಬಂಧಕ:—** ಇದೊಳ್ಳೆ ಭಯಂಕರ ಸಾಂಸರ್ಗಿಕ ರೋಗವಾದ್ದರಿಂದ ಇದು ಮನೆಯಲ್ಲಿ ಇತರರಿಗೆ ಅಂಟಿಕೊಳ್ಳದಂತೆ ಎಚ್ಚರಿಕೆ ತಕ್ಕೊಳ್ಳಬೇಕು. ಈ ಬೇನೆಯವರ ಉಸಿರು ಇನ್ನೊಬ್ಬರಿಗೆ ತಾಕದಂತೆ ನೋಡಿಕೊಳ್ಳಬೇಕು. ಈ ರೋಗಿಯ ವ್ಯವಸ್ಥೆ ಸ್ವತಂತ್ರವಾಗಿರುವದೇ ಮೇಲು. ಆತನ ಉಗುಳು ಮಲಮೂತ್ರಗಳನ್ನು ನಾಶಪಡಿಸಬೇಕು. ಇವುಗಳ ಮೇಲೆ ನೊಣ ಕೂಡಗೊಡಬಾರದು. ಕ್ಯಾರಬೋಲಿಕ್ ಸೋಲ್ಯುಶನ್ ಅಥವಾ ಫಿನಾಯಿಲ್ ನೀರಿನಲ್ಲಿ ರೋಗಿ ಉಗುಳುವಂತೆ ಮಾಡಬೇಕು. ಆತನ ಬಟ್ಟೆಗಳನ್ನು ನೀರಿನಲ್ಲಿ ಕುದಿಸಿ ನಿರ್ಜಂತುಕಗಳನ್ನಾಗಿ ಮಾಡಬೇಕು. ರೋಗಿಗೆ ನೀಲಗಿರಿ ಎಣ್ಣೆಯನ್ನು ಮೂಸಲು ಕೊಡಬೇಕು. ಇದರಿಂದ ಕ್ರಿಮಿಗಳು ಹವೆಯಲ್ಲಿ ಹಬ್ಬುವದಿಲ್ಲ. ಗುಗ್ಗುಳ ಮತ್ತು ಲೋಬಾನಗಳ ಹೊಗೆ ಹಾಕಬೇಕು. ಅಶಕ್ತ ಮನುಷ್ಯರು ಆದಷ್ಟು ರೋಗಿಯ ಹತ್ತರಕ್ಕೆ ಸುಳಿಯಕೂಡದು. ಕ್ಷಯ ಹತ್ತಿದ ತರುಣ, ತರುಣಿಯರ ಲಗ್ನವನ್ನು ಅವರು ಪೂರಾ ಗುಣಹೊಂದಿದವಿನಾ ಮಾಡಕೂಡದು. ಕ್ಷಯದ ಹೆಣ್ಣುಮಗಳಿಗೆ ಬಸಿರೆಂಬುದೊಂದು ದೊಡ್ಡ ಆಪತ್ತೇ ಆಗಿದೆ. ಟ್ಯುಬರ್‌ಕ್ಯೂಲಿನ್‌ದ ಇಂಜೆಕ್ಷನ್ ಕೊಡುತ್ತಾರೆ. ಇತ್ತೀಚೆಗೆ ಬಿ. ಸಿ. ಜಿ. ಯ ಉಪಯೋಗವನ್ನೂ ಪ್ರತಿಬಂಧಕವೆಂದು ಮಾಡಲಾಗುತ್ತದೆ.

(೨) **ಪ್ರತೀಕಾರಾತ್ಮಕ:—** ಕ್ಷಯದ ಮೇಲೆ ಆಯುರ್ವೇದೀಯ ಔಷಧಿಗಳು ಅಪ್ರತಿಮವಾಗಿ ಕೆಲಸ ಮಾಡುತ್ತವೆ. ಸುವರ್ಣ, ಅಭ್ರಕ, ಮೌಕ್ತಿಕ, ಪ್ರವಾಳ ಇವೇ ಕ್ಷಯದ ಮೇಲಿನ ಮುಖ್ಯೌಷಧಿಗಳು. ಸುವರ್ಣ ಭಸ್ಮ ಅತ್ಯಂತ ತೀವ್ರವಾಗಿರುವದರಿಂದ ಅತಿ ಸೂಕ್ಷ್ಮ ಅಂದರೆ ೧೬೦ ಗುಂಜಿ ಪ್ರಮಾಣದಂತೆ ಅದನ್ನು ಉಪಯೋಗಿಸಬೇಕು. ಪ್ರಮಾಣ ಹೆಚ್ಚಾದರೆ ಜ್ವರ ಹೆಚ್ಚುತ್ತವೆ. ಸಹಸ್ರಪುಟಿ ಅಭ್ರಕವನ್ನು ೧೬ ದಿಂದ ೨ ಗುಂಜಿಯ ವರೆಗೆ ಉಪಯೋಗಿಸಬಹುದು. ಮೌಕ್ತಿಕ ಅರ್ಧ ಗುಂಜಿಯವರೆಗೆ ಕೊಡ ಬೇಕು. ಮೇಲ್ಕಂಡ ಮೂರೂ ಔಷಧಿಗಳು ಬಹಳೇ ತುಟ್ಟಿಯಾಗಿರುವದ ರಿಂದ ಬಡವರಿಗೆ ಪೂರೈಸುವದಿಲ್ಲ. ಅಂತೇ ಆಯುರ್ವೇದದಲ್ಲಿ ಕಡಿಮೆ ಬೆಲೆ ಯ ಹೆಚ್ಚು ಗುಣದ ಬಹುಗುಣೀ ಔಷಧಗಳನ್ನು ಹೇಳಿದ್ದಾರೆ.

(೧) ಬೆಳ್ಳೊಳ್ಳಿಯು ಕ್ಷಯದ ಮೇಲಿನ ಅಪ್ರತಿಮ ಔಷಧಿ. (ಸು ಶ್ರು ತ.) ಇದು ಬಡವರ ಕಸ್ತೂರಿಯೆಂದು ಹೆಸರಾಗಿದೆ. ಬೆಳ್ಳೊಳ್ಳಿ ಬೇಳೆಗಳನ್ನು ಸಾಧಾರಣ ಹುರಿದು ಅವುಗಳೊಳಗಿನ ಹಸಿರು ಎಳೆ ತೆಗೆದು ಒಂದು ಗಡ್ಡಿಯಷ್ಟರ ವರೆಗೆ ತಿಂದು ಮೇಲೆ ಹಾಲು ಸಕ್ಕರೆ ಕುಡಿಯ ಬೇಕು. ಹಾಸಿಗೆ ಪಥ್ಯ ಅತ್ಯಗತ್ಯ. ಬಾಳೀ ಎಲೆಯ ನಡುವಿನ ದೇಟನ್ನು ಬಿಸಿ ಮಾಡಿ ರಸ ತೆಗೆದು ಅದರಲ್ಲಿ ಜೇನುತುಪ್ಪ ಬೆರೆಸಿ ಕೊಡಬೇಕು. ಮುಕ್ತಾಶೌಕ್ತಿಕ (ಮುತ್ತುಗಳು ಹುಟ್ಟುವ ಶಿಂಪಿನ) ಭಸ್ಮ, ಕಪರ್ದಿಕ (ಕವಡೀ) ಭಸ್ಮ ಪ್ರವಾಳ ಈ ಔಷಧಿಗಳು ಅಗ್ಗವಾಗಿದ್ದು ಕ್ಷಯದ ಮೇಲೆ ಉಪಯುಕ್ತವಾಗಿವೆ. ಆಡಿನ ಹಾಲು, ಸೂರ್ಯನ ಪ್ರಕಾಶ, ಶುದ್ಧ ಹವೆ ಮತ್ತು ತುಂಬಾ ವಿಶ್ರಾಂತಿಗಳು ಕ್ಷಯದಲ್ಲಿ ಅತ್ಯಂತ ಅವಶ್ಯಕಗಳಾಗಿವೆ.

**ಪ್ರಥಮಾವಸ್ಥೆ :—** ಕ್ಷಯದ ಅನುಮಾನ ಬಂದೊಡನೆ ಸುವರ್ಣ ಭಸ್ಮ ೧೬೦ ಗುಂಜಿ + ಪ್ರವಾಳ ಚಂದ್ರಪುಟಿ ೨ ಗುಂಜಿ + ಅಮೃತ ಸತ್ವ ೪ ಗುಂಜಿ. ನಾಲ್ಕು ಚೀಟು ೪ ವೇಳೆ ಆಡಿನ ಹಾಲಿನಲ್ಲಿ. ಕೆಮ್ಮು ಇದ್ದರೆ ಸೀತೋಪ ಲಾದಿ ಚೂರ್ಣ ೪ ಗುಂಜಿ + ಪ್ರವಾಳ ೨ ಗುಂಜಿ + ಅಭ್ರಕ ೧೬ ಗುಂಜಿ ೨ ಚೀಟು ಸಂಜೆ ಮುಂಜಾನೆ ಜೇನಿನಲ್ಲಿ. ಮತ್ತು ಮಧ್ಯಾನ್ಹ ರಾತ್ರಿ ಊಟದ ನಂತರ ದ್ರಾಕ್ಷಾಸವ ಓಂದೊಂದು ತೊಲೆಯನ್ನು ಅಷ್ಟೇ ಬಿಸಿ

ನೀರಿನಲ್ಲಿ ಕೊಡಬೇಕು. ಕಫ ಬಹಳ ತೆಳುವಾಗಿದ್ದರೆ ಮೃಗಶೃಂಗ ೧ ಗುಂಜಿ+ ತಾಲೀಸಾದಿ ಚೂರ್ಣ ೨ ಗುಂಜಿ + ಅಭ್ರಕ ೧⁄೨ ಗುಂಜಿ ೨ ವೇಳೆ ಜೇನಿನಲ್ಲಿ. ಅಲ್ಲದೆ ಮೇಲೆ ಬರದಂತೆ ದ್ರಾಕ್ಷಾಸವವನ್ನೂ ಕೊಡಬೇಕು. ಜೀರ್ಣ ಜ್ವರ, ಕೆಮ್ಮು, ನಿಃಶಕ್ತಿಗೆ ಸುವರ್ಣ ಮಾಲಿನೀ ವಸಂತ ೨ ಗುಂಜಿ+ ಸಿತೋಪಲಾದಿ ೪ ಗುಂಜಿ ೨ ವೇಳೆ ವರ್ಧಮಾನ ಪಿಪ್ಪಲಿಯೊಡನೆ (೨೦ ತೊಲೆ ಆಡು ಅಥವಾ ಆಕಳ ಹಾಲಿನಲ್ಲಿ ಅಷ್ಟೇ ನೀರು ಬೆರೆಸಿ ದಿನಕ್ಕೆ ಒಂದೊಂದರಂತೆ ಹೆಚ್ಚಿಸುತ್ತ ಏಳು ದಿನಗಳ ಪರ್ಯಂತ ಸಣ್ಣ ಹಿಪ್ಪಲಿಗಳನ್ನೂ ಮತ್ತೆ ಒಂದೊಂದರಂತೆ ಕಡಿಮೆ ಮಾಡುತ್ತ ಒಂದೇ ಹಿಪ್ಪಲಿಗೆ ನಿಲ್ಲಿಸೋಣ. ಇದಕ್ಕೆ ವರ್ಧಮಾನ ಪಿಪ್ಪಲಿ ಅನ್ನುತ್ತಾರೆ. ಇದರಲ್ಲಿ ಕಲ್ಲು ಸಕ್ಕರೆ ಹಾಕಬೇಕು. ಬೆರೆಸಿದನೀರು ಆಟ್ಟಿಸುವ ವರೆಗೆ ಕುದಿಸಬೇಕು.)

**ಪಿತ್ತವೃದ್ಧಿ**ಃ—ಪ್ರವಾಳ ೨ ಗುಂಜಿ + ಸುವರ್ಣ ಮಾಕ್ಷಿಕ ೨ ಗುಂಜಿ+ ಅಮೃತ ಸತ್ವ ೪ ಗುಂಜಿ ಆಕಳ ಹಾಲಿನಲ್ಲಿ. ಅಲ್ಲದೆ ರಾಜ ಮೃಗಾಂಕ, ಸುವರ್ಣ ಭೂಪತಿ, ಹೇಮಾಭ್ರಕರಸ ಸಿಂದೂರ, ತ್ರೈಲೋಕ್ಯ ಚಿಂತಾಮಣಿ ಮೊದಲಾದ ಔಷಧಿಗಳನ್ನು ಬಲಾಬಲ ನೋಡಿ ಯೋಜಿಸಬೇಕು. ಚಂದನ ಬಲಾಲಾಕ್ಷಾದಿ ತೈಲ ಅಥವಾ ತದ್ದೋಷ ನಾಶಕವಾದ ತೈಲಗಳನ್ನು ಮೈಗೆ ಹಚ್ಚಿ ತಿಕ್ಕಿ ಆತಪ ಸೇವನ ಮಾಡಬೇಕು. ಈ ತೈಲಗಳ ಉಪಯೋಗ ಕಾಡ್ಲಿವ್ಹರ್ ಆಯಿಲ್‌ದಂತೆಯೇ ಆಗುತ್ತದೆ.

**ದ್ವಿತೀಯಾವಸ್ಥಾ**-ಃಜ್ವರ ೧೦೨° ತೂಕ ಕಡಿಮೆಯಾಗೋಣಕ್ಕೆಃ— ಅಭ್ರಕ ಸಹಸ್ರಪುಟ ೪ ಗುಂಜಿ+ಸುವರ್ಣ ಭಸ್ಮ ೧⁄೮ ಗುಂಜಿ+ಮೃಗ ಶೃಂಗ ಭಸ್ಮ ೨ ಗುಂಜಿ ೨ ಚೀಟು ಹಾಲಿನಲ್ಲಿ ಅಥವಾ ಸುವರ್ಣ+ಪ್ರವಾಳ ೨ ಸಲ ಮತ್ತು ಅಭ್ರಕ+ ಮೃಗಶೃಂಗಗಳನ್ನು ಆದಲು ಬದಲಿಸಿ ಕೊಡಬೇಕು. ಒಣಕೆಮ್ಮು ಇದ್ದರೆ ಮೃಗಶೃಂಗ ಕೊಡಬಾರದು. ಹಾಗೆಯೇಬಾಯಿ ಬಂದರೆ ತಾಲೀಸಾದಿ, ಸೀತೋಪಲಾದಿ, ಹಿಪ್ಪಲಿ ಕೂಡಿದ ಔಷಧಿಗಳನ್ನು ಉಪಯೋಗಿಸಬಾರದು. ವರ್ಧಮಾನಪಿಪ್ಪಲಿಯೂ ಇದರಲ್ಲಿಯೇ ಬರುತ್ತದೆ. ಮಾಂಸ ಬಲವಿಹೀನತ್ವದಮೇಲೆ ಮಹಾಲಕ್ಷ್ಮೀವಿಲಾಸವು ಉತ್ತಮ

ಕೆಲಸ ಮಾಡುತ್ತದೆ. ಶುಕ್ರ ವೀರ್ಯ ಕ್ಷೀಣತೆ, ಜ್ವರದವೇಗ ಕಮ್ಮಿ ಕಫ ಹೆಚ್ಚು, ಇಂಥ ಸ್ಥಿತಿಯಲ್ಲಿ ಮಕರಧ್ವಜ ಒಂದೊದು ಗುಂಜಿ ಹಾಲು ಕಲ್ಲುಸಕ್ಕರೆ ಅಥವಾ ಬೆಣ್ಣೆ ಕಲ್ಲುಸಕ್ಕರಿಯಲ್ಲಿ ತಕ್ಕೊಳ್ಳಬೇಕು. ಪಿತ್ತಪ್ರಕೋಪ ಮತ್ತು ರಕ್ತ ಬೀಳೋಣಕ್ಕೆ ಮೌಕ್ತಿಕ ಅಥವಾ ಚಂದ್ರಕಲಾ ಅಡಸಾಲದರಸ ಅಥವಾ ಜೇನಿನಲ್ಲಿ ಅಥವಾ ಲಾಕ್ಷಾ ೪ ಗುಂಜಿ+ಹರಿದ್ರಾ ೪ ಗುಂಜಿ+ಪ್ರವಾಳ ೪ ಗುಂಜಿ ಜೇನಿನಲ್ಲಿ "ಉರಸ್ಯಂತಃಕ್ಷತೇ ಸದ್ಯೋ ಲಾಕ್ಷಾಂದ್ರುಯುತಾಂಪಿಬೇತ್" ವಾಗ್ಭಟ.

ಪಿತ್ತ ದುಷ್ಟಿ ಮತ್ತು ಕಮ್ಮಿ ಜ್ವರಕ್ಕೆ ಷಟ್‌ಫಲಘೃತ; ತಿಕ್ತಕಘೃತ; ಜೀವಂತ್ಯಾದಿ ಘೃತ ಇವುಗಳನ್ನು ತಕ್ಕೊಳ್ಳಬೇಕು.–

**ತೃತಿಯಾವಸ್ಥಾ:—** ಈ ಅವಸ್ಥೆಯ ರೋಗಿ ಬದುಕುವದು ಅಶಕ್ಯ ಆದರೂ ರೋಗಿಗಾಗುವ ವೇದನೆಗಳನ್ನು ಅಂಕೆಯಲ್ಲಿತರಬೇಕಾಗುತ್ತದೆ. ಈ ಅವಸ್ಥೆಯಲ್ಲಿ ವಂಶಲೋಚನವು ಹೆಚ್ಚು ಉಪಯೋಗವಾಗುತ್ತದೆ. ಮೌಕ್ತಿಕ, ಸೂಕ್ಷ್ಮ ಸುವರ್ಣ, ಪ್ರವಾಳ, ಮೃಗಶೃಂಗ, ಸಿತೋಪಲಾದಿ, ತಾಲೀಸಾದಿಗಳನ್ನು ಅವಸ್ಥಾ ಭೇದದಿಂದ ಕೊಡಬೇಕು. ಕ್ವಚಿತ್ತಾಗಿ ಈ ಅವಸ್ಥೆಯಲ್ಲಿ ಮಲಾವರೋಧ, ಆಧ್ಮಾನ ಮೊದಲಾದ ಲಕ್ಷಣಗಳು ಕಂಡುಬರುತ್ತವೆ. ಆಗ ಗ್ಲೀಸ್‌ರೀನ್ ಪಿಚಕಾರಿ ಕೊಡಬೇಕು. ಕ್ಷಯದಲ್ಲಿ ಎಂದಿಗೂ ವಿರೇಚನ ಕೊಡಕೂಡದು. ಮೂರನೇ ಅವಸ್ಥೆಯಲ್ಲಂತೂ ಇದು ಮಹಾ ಘಾತುಕ. ಒಮ್ಮೊಮ್ಮೆ ಅತಿಸಾರವೂ ಆರಂಭವಾಗುತ್ತದೆ. ಅದಕ್ಕೆ ಸುವರ್ಣಪರ್ಪಟಿ, ಮಹಾಲಕ್ಷ್ಮೀ ವಿಲಾಸಗಳನ್ನು ಉಪಯೋಗಿಸಬೇಕು. ಅಫೀಮು ಕೂಡಿದ ಔಷಧಿ ಕೊಟ್ಟು ಸ್ತಂಭನವಾಗುವಂತೆಮಾತ್ರ ಮಾಡಬಾರದು. ಅಲ್ಪ ಪ್ರಮಾಣದಲ್ಲಿ ಚತುರ್ಮುಖವನ್ನು ಕೊಡಬೇಕು.

**॥ ಪುರೀಷಂ ಯತ್ನತೋ ರಕ್ಷೇತ್ ॥**
**॥ ಶುಷ್ಯತೋ ರಾಜ ಯಕ್ಷ್ಮಣಃ ॥**
**॥ ಸರ್ವ ಧಾತು ಕ್ಷಯಾರ್ತಸ್ಯ ॥**
**॥ ಬಲಂ ತಸ್ಯಹಿ ವಿಟ್ ಬಲಂ ॥**

ಈ ಅವಸ್ಥೆಯಲ್ಲಿಯೇ ಮುಂದೆ ನೈಯಲ್ಲಿ ಬಾವು ಉದರಗಳು ಉಪದ್ರವಗಳುಂಟಾಗುತ್ತವೆ. ಇದು ಎಲ್ಲತರದಿಂದಲೂ ಅಸಾಧ್ಯವೆಂದು ತಿಳಿಯಬೇಕು.

**ಆಯುರ್ವೇದಿಕ ಇಂಜೆಕ್ಷನ್ಸ್:—** ಕ್ಷಯದ ಮೊದಲವಸ್ಥೆಯಲ್ಲಿ ಮಕರಧ್ವಜ, ಲಹಶೂನ, ಕ್ಷಯ ಸ್ಪೇಶಲ್ ಚುಚ್ಚು ಮದ್ದುಗಳನ್ನು ಕೊಡಬೇಕು.

## ಆಹಾರ ವಿಹಾರ

ಕ್ಷಯದವರಿಗೆ ಸಂಪೂರ್ಣ ವಿಶ್ರಾಂತಿಯಂಥ ಮತ್ತೊಂದು ಮದ್ದಿಲ್ಲ ಮೊದಲಿನಿಂದಲೇ ಶಾರೀರಿಕ ಮಾನಸಿಕ ವಿಶ್ರಾಂತಿ ಸಿಕ್ಕಷ್ಟೂ ರೋಗ ಬೇಗ ಹಿಂಜರಿಯುತ್ತದೆ. ಸ್ತ್ರೀ ಸಂಭೋಗವನ್ನು ಮಾಡಲೇಕೂಡದು. ಅಂತೇ ಲಗ್ನವಾದವರು ಪೂರಾ ಗುಣವಾಗುವ ವರೆಗೆ ಸಂಭೋಗದ ಆಶೆಯನ್ನು ಮಾಡಬಾರದು. ಜ್ವರ ಬಹಳಿದ್ದಾಗ ತೆಳ್ಳಗಿನ ಆಹಾರ ಕೊಡಬೇಕು. ಆಕಳು, ಆಡಿನಹಾಲು ವಿಶೇಷ ಉಪಯುಕ್ತ. ಆಡಿನ ಹಾಲು ಕುಡಿದು ಹೋತಿನ ಮಾಂಸ ತಿನ್ನುತ್ತ ಆಡುಗಳ ನಡುವೇ ಇರಬೇಕೆಂದು ಆಯುರ್ವೇದ ಹೇಳುತ್ತದೆ. ಶಾಕಾಹಾರಿಗಳಿಗೂ ಅವರಿಗೆ ತಿಳಿಯಗೊಡದಂತೆ ಮಾಂಸ ರಸ ಹಾಕಬೇಕೆಂದು ಆಯುರ್ವೇದ ಹೇಳುತ್ತದೆ. ಮೈಯಲ್ಲಿ ಜ್ವರ ವಿರುವಾಗ ಸ್ವಸ್ಥ ಮಲಗಿಕೊಂಡಿರಬೇಕು. ಪೂರಾ ಜ್ವರ ಆರಿದ ಮೇಲೆ ಬೈಲು ಹವೆಯಲ್ಲಿ ತಿರುಗಾಡ ಬಹುದು. ತಂಪು ಹಾಗು ಕಟ್ಟಿದ ಹವೆ ಕ್ಷಯರೋಗಿಗೆ ಅಪಾಯಕಾರಕ. ಒಣಹವೆ (ಡ್ರಾಯ್ ಕ್ಲಾಯ್‌ಮೇಟ್) ಇದ್ದಲ್ಲಿ ಕ್ಷಯರೋಗ ಬೇಗನೆ ಗುಣವಾಗುತ್ತದೆ. ಪುಪ್ಪುಸದಲ್ಲ ವಿಕಾರ ವಿಲ್ಲದಾಗ ಪ್ರಾಣಾಯಾಮದಿಂದ ಒಳ್ಳೆ ಉತ್ತಮ ಉಪಯೋಗ ವಾಗುತ್ತದೆ. ಪ್ರತಿ ಬಂಧಕವೆಂದೂ ಪ್ರಾಣಾಯಾಮದ ಉಪಯೋಗ ಉತ್ತಮವೇ. ಕ್ಷಯನೆಟ್ಟಗಾದರೂ ಅದು ತಿರುತಿರುಗಿ ಬರುವ ಸಂಭವ ಹೆಚ್ಚು. ಅಂತೇ

ಕ್ಷಯವ ಕಾರಣಗಳಿಂದ ದೂರವಾಗಿರಬೇಕು ('ನಿದಾನ ಪರಿವರ್ಜನಂ'). ಪೌಷ್ಟಿಕ ಆಹಾರ ತಕ್ಕೊಳ್ಳಬೇಕು ಅಗಲೇಕರೆದ ಹಾಲು, ಬೆಂಣಿ, ತತ್ತಿ, ಮಾಂಸರಸ, ಬದಾಮು ಹಂಣುಗಳು, ಹಸೀಪಲ್ಲೆಗಳನ್ನು ನಿಯಮಿತವಾಗಿ ತಕ್ಕೊಳ್ಳಬೇಕು. ಅಕ್ಕಿ ಗೋದಿಗಳನ್ನು ತುಪ್ಪದೊಡನೆ ಸೇವಿಸಬೇಕು. ಹಸೀ ಕೊಬ್ಬರಿಹಾಕಿ ಮಾಡುವ ಸೀ ಅನ್ನ (ನಾರಳೀ ಭಾತ) ಪೌಷ್ಟಿಕ ಆಹಾರವಾಗಿದೆ. ಬಟಗಡ್ಲಿ ಬಡವರ ಕಾಡ್ಲಿವರ ಅಹುದು. ಸೇಂಗಾ ಕಾಳು ಕುರಿದು ಬೀಜದಲ್ಲಿಯ ಅಂಕುರ ತೆಗೆದು ತಿನ್ನಬೇಕು.

**ವಿ. ಸೂ:—** ಕ್ಷಯರೋಗಿಗೆ ಅನ್ನ ಅಥವಾ ಔಷಧಿಗಳನ್ನು ಒಮ್ಮೆಲೇ ಹೊಟ್ಟೆ ತುಂಬಾ ಕೊಡದೇ ಮೂರು ಮೂರು ತಾಸುಗಳಿಗೊಮ್ಮೆ ಯಂತೆಸ್ವಲ್ಪಸ್ವಲ್ಪೇ ಕೊಡುತ್ತ ಹೋದರೆ ವಿಷೇಶ ಲಾಭವಾಗುತ್ತದೆ.

## ಅ್ಯಲೋಪಥಿ

ಈ ವಿಕಾರದಲ್ಲಿ ಕ್ಯಾಲ್ಸಿಯಂ ಪ್ರಾಡೆಕ್ಸ ಮತ್ತು ಜೀವನ ಸತ್ವ ಎ. ಡಿ. ಗಳನ್ನು ಕೊಡುತ್ತಾರೆ. ಇತ್ತೀಚೆ ಡಾಕ್ಟರರೂ ಸುವರ್ಣ ಕಲ್ಪವನ್ನು ಕೊಡ ಹತ್ತಿದ್ದಾರೆ. ಕಾಡ್ಲಿವ್ಹರ ಆಯಿಲ್ ಅಥವಾ ಹ್ಯಾಲಿಬಟ್‌ಆಯಿಲ್‌ಗಳು ಕ್ಷಯರೋಗಿಗೆ ಔಷಧ ಮತ್ತು ಪೌಷ್ಟಿಕ ಅನ್ನವೆಂಬ ಉಭಯ ದೃಷ್ಟಿಯಿಂದಲೂ ವಿಶೇಷ ಉಪಯುಕ್ತವೆಂದು ನಿರ್ಣಯವಾಗುತ್ತದೆ. ಅಲ್ಕೋಹೋಲ್ ಕೂಡಿದ ಔಷಧ ಮತ್ತು ಪೇಯಗಳನ್ನು ಕೊಡುವ ಪದ್ಧತಿಯೂ ಇದೆ. ಮಾಂಸ ರಸ ಮತ್ತು ಯಕೃತ್ತಿನ ರಸ (ಲಿವ್ಹರಎಕ್ಸಟ್ರ್ಯಾಕ್ಟ) ಗಳನ್ನೂ ಕೊಡುವದು ವಾಡಿಕೆಯಾಗಿದೆ. ವಿಶೇಷವಾಗಿ ಸುವರ್ಣ ಮತ್ತು ಸುಧಾ (ಕ್ಯಾಲ್ಸಿಯಂ) ಗಳನ್ನು ಚುಚ್ಚುವದಲ್ಲದೆ ಲೋಹ, ತಾಮ್ರ, ಫಾಸ್‌ಫರ್ಸ್, ಸೋಡಿಯಮ್‌ಗಳು ಕೂಡಿದ ಟಾನಿಕ್ ಕೊಡುತ್ತಾರೆ. ಮತ್ತೊಂದು ಪ್ರಕಾರವೆಂದರೆ ಶಸ್ತ್ರಕ್ರಿಯೆ ಸರ್ಜಿಕಲ್. ಇದರಲ್ಲಿ ಪುಪ್ಪುಸಾವರಣದಲ್ಲಿ ಹವೆ ತುಂಬೋಣ ಎ.ಪಿ., ಉರೋದರ ಪಟಲದ ಜ್ಞಾನತಂತುಗಳನ್ನು ಕತ್ತರಿಸೋಣ (ಫ್ರೇನಿಕ್‌ಅ್ಯವ್ಹಲ್‌ಸನ್) ಕಿಂವಾ ಪಕ್ಕಡೀ ಎಲುಬುಗಳನ್ನು ಕತ್ತರಿಸೋಣ ಮೊದಲಾದ ಉಪಚಾರಗಳೂ ಇದರಲ್ಲಿ ಭರುತ್ತವೆ. ಮೇಲಿನ ಈ

ಉಪಚಾರಗಳಿಂದ ರೋಗಿ ಖಂಡಿತವಾಗಿ ಗುಣಹೊಂದುವನೆಂದು ಭರವಸೆ ಕೊಡಲಾಗುವದಿಲ್ಲ.

**ಸ್ಟ್ರಿಪ್‌ಟೊಮಾಯಿಸಿನ್**ಃ–ಸಧ್ಯ ಈ ಔಷಧಿ ಕ್ಷಯಚಿಕಿತ್ಸೆಯಲ್ಲಿ ಒಳ್ಳೇ ಕ್ರಾಂತಿಯನ್ನು ಮಾಡಿದೆ. ಇದಿನ್ನೂ ಪ್ರಯೋಗಾವಸ್ಥೆಯಲ್ಲಿಯೇ ಇದ್ದರೂ ಮೆದುಳಿನ ಆವರಣಗಳಿಗಾಗುವಕ್ಷಯ, ಸ್ವರಯಂತ್ರದಕ್ಷಯ, ಗಂಡಮಾಲಾ, ಪುಪ್ಪುಸಕ್ಷಯ, ಕರುಳಿನಕ್ಷಯ, ಬೇಗನೇ ಕೊಲ್ಲುವ ಕ್ಷಯ, ಕ್ಷಯದಿಂದಾಗುವ ಭಗಂದರ ಅಥವಾ ನಾಡೀವ್ರಣ, ನರಗಳಲ್ಲಾಗುವ ಹುಣ್ಣುಗಳಲ್ಲಿ ಇದರ ಉಪಯೋಗ ಅಪ್ರತಿಮವಾಗಿದೆ. ಪ್ರಮಾಣ, ಸಣ್ಣ ಹುಡುಗರಿಗೆ ಅರ್ಧದಿಂದ ಒಂದು ಗ್ರಾಮ್ಯ. ದೊಡ್ಡವರಿಗೆ ಮೂರು ಗ್ರಾಮ್ಯದ ವರೆಗೆ ಔಷಧಿ ಒಂದು ದಿನಕ್ಕೆ ಎರಡುಸಲ ೧೨ ತಾಸುಬಿಟ್ಟು ಚುಚ್ಚುತ್ತಾರೆ. ಒಂದು ಗ್ರಾಮ್ಯಮಿನಬಾಟ್ಲಿಯಲ್ಲಿ ೪ ಸಿ. ಸಿ. ಡಬಲ್ ಡಿಸ್ಟಿಲ್ ವಾಟರಕೂಡಿಸಿ ಸೊಲ್ಯೂಶನ್ ದ್ರಾವಣ ತಯಾರಿಸಬೇಕು. ಸಾಮಾನ್ಯವಾಗಿ ४೦ ದಿನಗಳವರೆಗೆ ಈ ಇಂಜೆಕ್ಸನ್ ತಕ್ಕೊಳ್ಳಬೇಕಾಗುತ್ತದೆ. ಮತ್ತೆ ಕ್ಷಕಿರಣ ಕಫ ಪರೀಕ್ಷೆ ಮಾಡಿಸಿ ಅಗತ್ಯಕಂಡರೆ ತಿರುಗಿ ४೦ ದಿನ ಚಿಕಿತ್ಸೆಮಾಡುತ್ತಾರೆ. ತೋಳು ತೊಡೆ, ಟೊಂಕಗಳಲ್ಲಿ ಚುಚ್ಚುತ್ತಾರೆ. ರೋಗಿಯ ತೂಕದಪೌಂಡುಗಳ ಹತ್ತು ಪಟ್ಟು m. g.—ಔಷಧಿಗಳನ್ನು ೩೪ ತಾಸಿನಲ್ಲಿ ಚುಚ್ಚಬೇಕು. ಒಂದುಗ್ರಾಮ್ಯಮದಬಾಟ್ಲಿಯಲ್ಲಿ ಒಂದು ಸಾವಿರ m. g. ಇರುತ್ತವೆ-

**ಗಂಡಾಂತರ ಸೂಚನೆ**—ಈ ದ್ರಾವಣ ಬಹಳೇ ತೀಕ್ಷ್ಣವಾಗಿರುವದರಿಂದ ಚರ್ಮಕ್ಕೆ ಇದು ತಗಲಿದರೆ ಗುಳ್ಳಿಗಳೇಳುತ್ತವೆ. ಆದ್ದರಿಂದ ತಜ್ಞರಮೇಲ್ವಿಚಾರಣೆಯಲ್ಲಿಯೇ ಈಮದ್ದು ಚುಚ್ಚುವದು ಹಿತಕರ. ಸ್ಟ್ರೆಪ್ಟೋಮಾಯಿಸಿನ್ ದಿಂದ ಗುಣವಾಗದ ರೋಗಿಗಳು ಆಯುರ್ವೇದ ಚಿಕಿತ್ಸೆಯಿಂದ ಗುಣ ಹೊಂದಿದ ಉದಾಹರಣೆಗಳೂ ಕ್ವಚಿತ್ ಕಂಡುಬರುತ್ತಿವೆ.

## CASE REPORT

"My daughter, Miss Laxmibai, was attacked by T. B. 'X' ray photo was taken. Sputum and blood examinations were made. Streptomycin was also

administered for about 35 days. There was no improvement. The doctors advised me to shift my daughter to a Sanitorium.

At this stage I approached Vaidya ............ He continued the treatment. Within a span of three months my daughter was cured ........... I thank Mr............... for saving my child."

*Sd*...........................

**B. E. Civil Engineer**

## ಬಾಯೋ ಕೆಮಿಕ್

**ಸಿಲಿಕಾ:-** ಇದು ಮುಖ್ಯವಾದ ಕ್ಷಯದಔಷಧಿ. ಕೆಮ್ಮು, ರಾತ್ರಿಬೆವರು, ಕಫ, ಅಗ್ನಿಮಾಂದ್ಯ ಮೊದಲಾದವುಗಳ ಮೇಲೆ ಇದರ ಉಪಯೋಗ ಹೆಚ್ಚು.

**ಫೇರಂಫಾಸ:—** ಜ್ವರ, ಎದೆನೋವು, ರಕ್ತ ಷ್ಠೀವನಗಳ ಮೇಲೆ ವಿಶೇಷ ಪ್ರಯೋಜಕ,

**ಕಲ್ಕೇರಿಯಾ ಫಾಸ್:-** ಬಲಮಾಂಸವಿಹೀನತ್ವ, ಶಕ್ತಿಕ್ಷೀಣತೆಗಳಮೇಲೆ, ಅಲ್ಲದೆ ಕಾಲೀಸಲ್ಫ, ಕಾಲೀಮ್ಯೂರ್, ನೈ-ಮ್ಯೂ, ಕಾ-ಫಾ, ನೆ-ಸ, ಗಳನು ಅವಸ್ಥಾಭೇದದಿಂದಕೊಡಬೇಕು.

## ಆಂತ್ರ ಕ್ಷಯ

ಇದರಲ್ಲಿ ಎರಡು ಪ್ರಕಾರ (೧)ಕಫಕ್ಷಯದಲ್ಲಿ ಕಫವಲೊದಡಿ ಹೊಟ್ಟೆಯಲ್ಲಿ ಹೋಗುವದರಿಂದ ಕರುಳಿಗೆ ಬಾವುಬಂದು ಕರುಳಿನಲ್ಲಿಯ ಗ್ರಂಥಿಗಳು ದೊಡ್ಡವಾಗುತ್ತವೆ. ಹೊಟ್ಟೆಶೂಲಿ, ಅತಿಸಾರದಲಕ್ಷಣಗಳೂ ಸಂಭವಿಸುತ್ತವೆ. ಇದು ಪರತಂತ್ರವಾದ ಉಪದ್ರವವಾಗಿದೆ.

(೨) ಬೊವ್ಹಾಯಿಸ್ ಎಂಬ ಕ್ಷಯದ ಕ್ರಿಮಿ ಹಾಲಿನ ಮೂಲಕ ಹೊಟ್ಟೆಯಲ್ಲಿ ಸೇರಿ ಕಿರಿಕರುಳು ಮತ್ತು ಅಲ್ಲಿಯ ಗ್ರಂಥಿಗಳನ್ನು ಪ್ರದುಷ್ಟ ಮಾಡುತ್ತದೆ. ಅಲ್ಲಿ ಸಂರಂಭ ಮತ್ತು ಬಾವೂ ಬಂದು ಕ್ಷಯಕ್ಕೆ ಆರಂಭ ವಾಗುತ್ತದೆ. ಫುಪ್ಪುಸ ಕ್ಷಯದಕಿಂತಲೂ ಇದು ತುಸು ಸೌಮ್ಯವಾಗಿರು ತ್ತದೆ. ಇದು ಚಿಕ್ಕಮಕ್ಕಳು ಮತ್ತು ಹರೆಯದ ಗಂಡು ಹೆಂಣು ಮಕ್ಕಳಲ್ಲಿ ವಿಶೇಷವಾಗಿ ಉಂಟಾದ್ದೂ ಕಂಡು ಬರುತ್ತದೆ. ವಯಸ್ಸು ೩ ವರ್ಷಗಳಿಂದ ೨೦ ವರ್ಷಗಳ ವರೆಗೆ.

**ಲಕ್ಷಣ ಮತ್ತು ಭಾವನೆ:**–ಇದರಲ್ಲಿ ಸಂಜೆಗೆ ೧೦೦° ವರೆಗೆ ಜ್ವರವಿರು ತ್ತದೆ. ರಾತ್ರಿ ಬೆವರು ಬರುತ್ತದೆ. ಬಿಸಿಯಾಗಿ ಝಾಡಿಸುತ್ತದೆ. ಕರುಳಿನಲ್ಲಿಯ ಗ್ರಂಥಿಗಳು ಬೆಳೆದ ಮೂಲಕ ಹೊಟ್ಟೆ ಕಲಿಸಿದ ಕಣಕದ ಹಾಗೆ ಹತ್ತುತ್ತದೆ. ಕ್ವಚಿತ್ತಾಗಿ ಗಲಗ್ರಂಥಿ–ಟಾನ್‌ಸಿಲ್ಸ್‌ಗಳೂ ಬೆಳೆಯುತ್ತವೆ. ತೂಕ ದಿನಗಳೆದಂತೆ ಕಮ್ಮಿಯಾಗುತ್ತ ಹೋಗುವದು. ಶಕ್ತಿಕ್ಷಯ ಕ್ವಚಿತ್ತಾಗಿ ಜಲೋದರ ಕೂಡಿ ರೋಗಿ ಕೈಬಿಡುತ್ತಾನೆ.

**ಭೇದಕ ನಿದಾನ:**— ಸಂಗ್ರಹಣಿ ಮತ್ತು ಆಂತ್ರಕ್ಷಯ ಇವುಗಳ ಲಕ್ಷಣಗಳು ಸಮಾನವಾಗಿರುವದರಿಂದ ಒಮ್ಮೊಮ್ಮೆ ಮೋಸವಾಗುತ್ತದೆ. ಆದ್ದರಿಂದ ಕೆಳಗಿನ ಭೇದವನ್ನು ನೆನಪಿನಲ್ಲಿಡಬೇಕು.

| | **ಆಂತ್ರಕ್ಷಯ** | **ಸಂಗ್ರಹಣಿ** |
|---|---|---|
| (೧) | ಜ್ವರ ಮತ್ತು ಬೆವರು | × × |
| (೨) | ಕರುಳಿನಲ್ಲಿಯ ಗ್ರಂಥಿಗಳಿಗೆ ಬಾವು ಬಂದು ಅವು ಬೆಳೆಯುತ್ತವೆ | × × |
| (೩) | × × | ನಾಲಿಗೆ ಗುಳಗುಳಿತ ಮತ್ತು ಮೆತ್ತಗಾಗುತ್ತದೆ. |

**ಸಾಧ್ಯಾಸಾಧ್ಯತ್ವ:**— ಹೊತ್ತಿನಲ್ಲಿಯೇ ತಕ್ಕ ಚಿಕಿತ್ಸೆಯಾದರೆ ರೋಗಿ ಸುಧಾರಿಸುತ್ತಾನೆ. ಕಫಕ್ಷಯದಷ್ಟು ಇದು ಭಯಂಕರ ರೋಗವಲ್ಲ.

**ಚಿಕಿತ್ಸೆ:—** ಸುವರ್ಣ ಪರ್ಪಟಿ ೧ ಗುಂಜಿ, ಕಪರ್ದಿಕ ಭಸ್ಮ ೪ಗುಂಜಿ ೪ ಚೀಟು ಬಿಸಿ ನೀರಲ್ಲಿ. ಅಲ್ಲದೆ ಚತುರ್ಮುಖ, ಸುವರ್ಣ ಘಟಿತ ಲೋಕ

ನಾಥ ರಸ ಇವುಗಳೂ ಉಪಯೋಗವಾಗುತ್ತವೆ. "ಹೇಮನ್"ವೆಂಬ ಔಷಧಿಯೂ ಉಪಯುಕ್ತವಾಗಿದೆ.

**ಆ್ಯಲೋಫೆಥಿಕ್:—** ಟ್ಯುಬರ್ ಕ್ಯುಲಿನ್ ಚುಚ್ಚುತ್ತಾರೆ. ಬಂಗಾರದ ಇಂಜೆಕ್ಷನ್ನೂ ಹೆಚ್ಚು ಉಪಯುಕ್ತ. ಸುವರ್ಣ ಕಲ್ಪವನ್ನು ಹೊಟ್ಟೆಯಲ್ಲಿ ಕೊಡುತ್ತಾರೆ. ಅತಿಸಾರ ವಿಶೇಷವಾಗಿದ್ದಾಗ ಕ್ಯಾಲ್ಸಿಯಂ ಗ್ಲ್ಯುಕೋನೇಟ್‌ನ್ನು ನರದಲ್ಲಿ ಚುಚ್ಚುತ್ತಾರೆ. ಇದರಿಂದಲೂ ಹೆಚ್ಚು ಲಾಭ ಕಂಡು ಬರುತ್ತದೆ. ಸ್ಟ್ರೆಪ್ಟೋಮಾಯಿಸಿನ್ನೋ ಅತ್ಯಂತ ಪ್ರಭಾವೀ ಚುಚ್ಚುಮದ್ದಾಗಿದೆ.

## ಗ್ರಂಥಿ ಕ್ಷಯ [ಗ್ಲ್ಯಾಂಡ ಟಿ. ಬಿ.]

ಈ ವಿಕಾರದಲ್ಲಿ ಕುತ್ತಿಗೆಯಲ್ಲಿಯ ಗಂಟುಗಳು ಬೆಳೆಯುತ್ತವೆ. ಇದಕ್ಕೆ ಗಂಡಮಾಲಾ ಅಥವಾ ಅಪಚೀ ಎಂದು ಹೆಸರು. ಇದರ ಮುಖ್ಯ ಕಾರಣ ಆನುವಂಶಿಕತ್ವ. ಕಫಕ್ಷಯದ ಇನ್ನಿತರ ಕಾರಣಗಳನ್ನೂ ಲಕ್ಷ್ಯದಲ್ಲಿಡಬೇಕು. ಧೂಳ, ಹೊಗೆ ಮತ್ತು ಗಟಾರದ ದುಷ್ಟ ವಾಯುಗಳಿಂದ ಗಂಟಲುಗಳಲ್ಲಿಯ ಗಂಟುಗಳು ಬೆಳೆಯುತ್ತವೆ. ಕ್ಷಯದ ಇತರ ಕಾರಣಗಳಿಂದಲೂ ಕುತ್ತಿಗೆಯೊಳಗಿನ ಗಂಟುಗಳು ಬೆಳೆದು ಕ್ಷಯಕ್ಕೆ ಆರಂಭವಾಗುತ್ತದೆ. ಕುತ್ತಿಗೆಯಲ್ಲಲ್ಲದೆ ಗೆಜ್ಜಿ, ಬಗಲು, ಹೊಟ್ಟೆಯಲ್ಲಿಯ ಲಸಿಕಾ ಗ್ರಂಥಿಗಳೂ ಪ್ರದುಷ್ಟವಾಗುತ್ತವೆ. ಗಂಟುಗಳಲ್ಲಿ ಕ್ಷಯದ ಕ್ರಿಮಿಗಳು ಶಿಗುತ್ತವೆ. ಮುಂದೆ ಮುಂದೆ ಗಂಟುಗಳ ಸರಪಳಿಯೇ ತಯಾರ ಆಗುವದು.

**ಲಕ್ಷಣಗಳು ಮತ್ತು ಭಾವನೆ:—** ಜ್ವರ—೧೦೦°, ಬೆವರು, ಗಂಟು ಬೆಳೆಯೋಣ, ಹೊಡೆತಗಳು, ಮುಂದೆ ಗಂಟು ಹಣ್ಣಾಗಿ ಒಡೆದು ಅದೆಷ್ಟೋ ದಿನ ಸೋರುತ್ತವೆ. ಅಗ್ನಿಮಾಂದ್ಯ, ಬಲಮಾಂಸ ವಿಹೀನತ್ವ, ಧಾತು ಕ್ಷೀಣತೆ, ಮುಂತಾದವೂ ಕಂಡು ಬರುತ್ತವೆ.

**ಚಿಕಿತ್ಸೆ:—** ಸುವರ್ಣಘಟಿತ ಲೋಕನಾಥರಸ ೨ ಗುಂ. + ಪ್ರವಾಳ ೪ ಗುಂ. ೪ ಚೀಟು ಜೇನಿನಲ್ಲ ಅಲ್ಲದೆ ಅಭ್ರಕ, ಮೌಕ್ತಿಕ, ಸುವರ್ಣ

ಮಾಲಿನೀವಸಂತ ಮುಂತಾದುವನ್ನು ಕೊಡಬೇಕು. ಅಮರಕಂದವನ್ನು ಗೋಮೂತ್ರದಲ್ಲಿ ತೇದು ಗಂಟುಗಳಿಗೆ ಲೇಪಿಸಬೇಕು. ಜ್ವರ ಕಮ್ಮಿ ಇದ್ದಾಗ ಕಾಂಚನಾರ ಗುಗ್ಗುಳವು ಉಪಯೋಗಬೀಳುತ್ತದೆ. ಗೋಮೂತ್ರ, ಶಿಲಾಜಿತು, ಸುವರ್ಣ, ಮೌಕ್ತಿಕ, ಚ್ಯವನಪ್ರಾಶ, ಅಮೃತಪ್ರಾಶ ಮುಂತಾದವು ಉಪಯುಕ್ತ. ಶಸ್ತ್ರಕ್ರಿಯೆಯಿಂದಲೂ ಗಂಟುಗಳನ್ನು ಕೊಯ್ದು ತೆಗೆಯುತ್ತಾರೆ.

## ಅಸ್ಥಿಕ್ಷಯ (ಬೋನ್ ಟೀ. ಬಿ.)

ಮೈಯ್ಯಲ್ಲಿ ಸುಣ (ಕ್ಯಾಲ್ಸಿಯಂ)ದ ಪ್ರಮಾಣ ಕಮ್ಮಿಯಾಗುವದು ಈ ಕ್ಷಯದ ಮುಖ್ಯ ಕಾರಣವಾಗಿದೆ. ಇತರ ಕಾರಣ ಪರಂಪರೆಯೂ ಇದ್ದೇ ಇರುತ್ತದೆ. ಬಾಣಂತಿತನದ ನಂತರ ಹೆಂಣುಮಕ್ಕಳಿಗೆ ಮತ್ತು ಸಂಣ ಮಕ್ಕಳಿಗೂ ಇದು ಉಂಟಾಗುತ್ತದೆ. ಕ್ವಚಿತ್ ಪ್ರಸಂಗದಲ್ಲಿ ಪೆಟ್ಟು ತಾಕಿದ್ದೂ ಕಾರಣವಾಗುತ್ತದೆ.

**ಲಕ್ಷಣಗಳು:—** ಎಲುವುಗಳ ತುದಿಯಲ್ಲಿ ಬಾವು, ಶೂಲಿ, ಜ್ವರ, ನಿಃಶಕ್ತಿ, ತೂಕ ಇಳಿಯುತ್ತ ಹೋಗೋಣ ಮೊದಲಾದ ಲಕ್ಷಣಗಳಿರುತ್ತವೆ. ಕೈಕಾಲುಗಳ ಎಲುವು, ಪಕ್ಕಡೀ ಎಲವುಗಳಲ್ಲಿಯೇ ಇದು ವಿಶೇಷವಾಗಿ ಉಂಟಾಗುತ್ತದೆ.

## ಸಂಧಿಕ್ಷಯ (ಜಾಯಿಂಟ ಟೀ. ಬಿ)

ಸಂದುಗಳಲ್ಲಿ ಕ್ಷಯ ಜನ್ಯ ದುಷ್ಟಿಯಾದರೆ ಸಂದುಗಳಲ್ಲಿ ಬಾವು, ಹೊಡೆತ, ಅಲುಗಾಡಿಸಲು ಬರದಿರೋಣ ಮತ್ತು ಕ್ಷಯದ ಇತರ ಲಕ್ಷಣಗಳೂ ಇರುತ್ತವೆ. ಮುಂದೆ ಆ ಸಂದು ಗಟ್ಟಿಯಾಗಿಹೋಗುತ್ತದೆ. ಅಥವಾ ಕ್ಷಯದ ಕ್ರಿಮಿಗಳು ಎಲುವುಗಳನ್ನು ನಾಶಗೊಳಿಸಹತ್ತುತ್ತವೆ. ಕೈ, ಕಾಲುಗಳ ಸಂದು, ಮೊಳಕಾಲು, ಗೆಜ್ಜೀ ಸಂದುಗಳಲ್ಲಿ ಈ ಬೇನೆ ವಿಶೇಷವಾಗಿ ಕಾಣಿಸಿಕೊಳ್ಳುತ್ತದೆ. ಬೆನ್ನಲಬಿನಲ್ಲಿಯೂ ಕ್ಷಯದ ವಿಕಾರ ಸಂಭವಿಸುವದಕ್ಕೆ ಟೀಬಿ ಸ್ಪಾಯಿನ್ ಎನ್ನುತ್ತಾರೆ. ಬೆನ್ನೆಲುವು ನೋಯ ಹತ್ತುತ್ತದೆ.

ಬಾವು, ಸಂಣಾಗಿ ನೋವು ಕ್ವಚಿತ್ತಾಗಿ ಪೂರಾಬೆನ್ನೆಲುವು ಹುಳಿತು ಹೋಗುತ್ತದೆ. ಇದರಿಂದ ಬೆನ್ನೆಲುವು ಸೊಟ್ಟಾಗಿ ಡೂಗು ಹಾಯುತ್ತದೆ.

**ಚಿಕಿತ್ಸೆ:—** ಇವೆಲ್ಲ ಪ್ರಕಾರಗಳಿಗೂ ಸುಧಾಕಲ್ಪವು ಅತ್ಯಂತ ಉಪಯೋಗಿಯಾಗಿದೆ· ಪ್ರವಾಳ, ಮೌಕ್ತಿಕ, ಶೌಕ್ತಿಕ, ಕಪರ್ದಿಕ, ಮುಕ್ತಾ ಶೌಕ್ತಿಕ ಮುಂತಾದವುಗಳೆಲ್ಲಾ ಸುಧಾಕಲ್ಪಗಳು.

**ಆ್ಯಲೋಪಥಿ:—**(೧) ಕೋಲೋಕ್ಯಾಲ್ಸಿಯಂ ವುಯಿಥ್ ವ್ಹಿಟಾಮಿನ್‌ಡಿ ಇಂಜೆಕ್ಶನ್ (೨)ಕ್ಯಾಲ್ಸಿಯಂ ಗ್ಲ್ಯುಕೋನಾಯಿಟ್-ಇಂ. (೩) ಕ್ಯಾಲ್ಸಿಯಂ ಆ್ಯಂಡ್ ಆರಂ ಇಂ. ಸ್ಟ್ರೆಪ್ಟೋಮಾಯಸಿನ್ ಇಂ. ಇತ್ಯಾದಿ.

—o—

# ಹೃದ್ರೋಗ

## Heart Disease—**ಹಾರ್ಟಡಿಸೀಜ**

ಹೃದ್ರೋಗದ ಹೆಸರು ಕೇಳಿ ಎದೆಯೊಡೆದುಕೊಳ್ಳದ ಮನುಷ್ಯ ಅಪರೂಪ, ಇದಕ್ಕೆ ಕಾರಣವೂ ಹಾಗೆಯೇ ಇದೆ. ಆ ರೋಗವು ಅತ್ಯಂತ ಭಯಂಕರವಾದದ್ದು. ಕ್ಷಣ ಮಾತ್ರದಲ್ಲಿ ಅದು ಮನುಷ್ಯನ ಪ್ರಾಣ ಹರಣ ಮಾಡುತ್ತದೆ. ಇದು ಬಲು ಪುರಾತನ ಕಾಲದಿಂದ ಬಂದ ಬೇನೆ. ''ಹೃದ್ರೋಗಂ ಮಮ ಸೂರ್ಯ ಹರಿಮಾಣಂಚನಾಶಯ" ಹೀಗೆಂದು ಋಗ್ವೇದ ಸಂಹಿತೆಯ ಸೌರ ಸೂಕ್ತದಲ್ಲಿ ಇದರ ಉಲ್ಲೇಖವಿದೆ. ಸಧ್ಯದ ಇದರ ರೂಪ ರಾಷ್ಟ್ರ ಘಾತುಕವಾಗಿದ್ದು ತಜ್ಞವೈದ್ಯ, ಡಾಕ್ಟರರು ಇದರ ಬಗ್ಗೆಗಾಗಿ ಹೊಣೆಗಾರಿಕೆಯಿಂದ ಗಂಭೀರವಾಗಿ ಯೋಚಿಸಬೇಕಾಗಿದೆ. ಇತ್ತೀಚೆ ರಾಷ್ಟ್ರ ನಿರ್ಮಾಣಕ ದೇಶಭಕ್ತರನೇಕರು ಈ ಬೇನೆಗೆ ಬಲಿಯಾದ್ದನ್ನು ಮರೆಯುವಂತಿಲ್ಲ.

**ಹೃದಯ ವರ್ಣನೆ:—** ಮನುಷ್ಯ ಶರೀರದಲ್ಲಿಯ ಒಳ್ಳೇಪ್ರಭಾವಶಾಲಿಯಾದ "ಪಂಪು" ಅಂದರೆಯೇ **ಹೃ**ದಯ. ಇದು ಸ್ನಾಯುಮಯ

ವಾಗಿದ್ದು ಇದರಲ್ಲಿ ನಾಲ್ಕು ಭಾಗಗಳಿರುತ್ತವೆ. ಮೈಯಲ್ಲಿಯ ಯಾವತ್ತೂ ಅಶುದ್ಧರಕ್ತ ಮತ್ತು ರಸ (ಲಿಂಫು) ಗಳನ್ನು ಈ ಪಂಪು ತನ್ನ ಕಡಿಗೆ ಎಳೆದು ಕೊಂಡು ಶುದ್ಧವಾಗುವದಕ್ಕಾಗಿ ಫುಪ್ಪುಸದಲ್ಲಿ ಕಳಿಸುತ್ತದೆ. ಅಲ್ಲಿ ಶುದ್ಧ ವಾದರಕ್ತವನ್ನು ಮತ್ತೆ ತಾನು ಎಳೆದುಕೊಂಡು ತಿರುಗಿ ಶರೀರದ:ತುಂಬೆಲ್ಲಾ ತಲುಪಿಸುವ ಕೆಲಸವನ್ನು ಒಳ್ಳೇ ತತ್ಪರತೆಯಿಂದ ಮಾಡುತ್ತದೆ. ಜೀವ ನಾವಶ್ಯಕವಾದ ಈ ಕೆಲಸವನ್ನು ಹೃದಯ ಹಗಲಿರಳೂ ಅವಿಶ್ರಾಂತವಾಗಿ ಮಾಡುತ್ತದೆ. ಇದರ ಈ ಕೆಲಸದಲ್ಲಿ ತುಸುವಾದರೂ ದೋಷ ಉಂಟಾ ದರೆ ದೇಹದ ಚೇತನ ವ್ಯವಹಾರವೆಲ್ಲಾ ಅಲ್ಲಿಂದಲ್ಲಿಯೇ ನಿಂತು ಹೋಗು ತ್ತದೆ. ಅಂತೇ "ಹೃದಯಂ ಚೇತನಾ ಸ್ಥಾನಂ" ಎಂದು ಅದರ ವರ್ಣನೆ ಮಾಡಿದ್ದು ಯಥಾರ್ಥವಾಗಿದೆ. ಈ ಹೃದಯದ ಆಕಾರ ತೀರ ಚಿಕ್ಕದು ಅಂದರೆ ಅವರವರ ಮುಷ್ಟಿಯಷ್ಟಿರುತ್ತದೆ. ಆದರೂ ಇದರ ಕಾರ್ಯ ಭಾರೀ ಪ್ರಚಂಡವಾಗಿದೆ. ಒಂದು ತಾಸಿಗೆ ೧೦ ಪೌಂಡ ರಕ್ತವನ್ನು ಹೊರ ಚಲ್ಲುತ್ತದೆ. ಒಬ್ಬ ಮನುಷ್ಯನನ್ನು ೫೦೦ ಫೂಟು ಎತ್ತರಕ್ಕೆ ಒಯ್ಯಲು ಬೇಕಾಗುವಷ್ಟು ಶಕ್ತಿಯ ಕೆಲಸವನ್ನು ಹೃದಯ ಒಂದು ದಿನದಲ್ಲಿ ಮಾಡು ತ್ತದೆ. ಇ. ಸಂಕ್ಷಿಪ್ತ ವರ್ಣನೆಯಿಂದಲೇ ಹೃದಯದ ಮಹತ್ವ ಲಕ್ಷ್ಯದಲ್ಲಿ ಬರಬಹುದು.

## ಹೃದ್ರೋಗ ಕಾರಣ ಮೀಮಾಂಸಾ

**ಅತ್ಯುಷ್ಣಗುರ್ವಮ್ಲ ಕಷಾಯತಿಕ್ತೈಃ ಶ್ರಮಾಭಿಘಾತಾಧ್ಯಶನಪ್ರಸಂಗೈಃ ॥**
**ಸಂಚಿಂತನೈರ್ವೇಗ ವಿಧಾರಣೈಶ್ಚ ಹೃದಾಮಯಃ ಪಂಚವಿಧಪ್ರದಿಷ್ಟಃ**
**ಯೋ. ರತ್ನಾಕರ**

ಶ್ರಮ, ಹೃದಯಕ್ಕೆ ಪೆಟ್ಟು, ಅಧ್ಯಶನ, ಚಿಂತೆ, ಮಲಮೂತ್ರ ಮತ್ತು ಶ್ರಮವಾದಾಗಿನ ಶ್ವಾಸೋಚ್ಛ್ವಾಸ, ವೇಗಗಳನ್ನು ತಡೆಯೋಣ ಮುಂತಾ ದವುಗಳಿಂದ ಐದು ಪ್ರಕಾರದ ಹೃದ್ರೋಗವಾಗುತ್ತದೆ. ಅತಿ ತೀಕ್ಷ್ಣ, ಉಷ್ಣ. ಮದ್ಯಪಾನಗಳಿಂದಲೂ ಹೃದಯ ವಿಕಾರ ಉಂಟಾಗುತ್ತದೆ. ಜಂತು ಗಳಿಂದಲೂ ಹೃದ್ರೋಗವಾಗುತ್ತದೆ. ಜಂತುಗಳ ವಿಕಾರದಲ್ಲಿ ಹೃದ್ರೋ ಗವು ಒಂದು ಲಕ್ಷಣವೆಂದು ಹೇಳಲ್ಪಟ್ಟಿದೆ. "ಜ್ವರೋಽ ವಿವರ್ಣತಾ

ಶೂಲಂ ಹೃದ್ರೋಗಃ ಸದನಂ ಭ್ರಮಃ|| ಕೆಲವು ವಿಕಾರಗಳ ಪರಿಣಾಮ ಸಾಕ್ಷಾತ್ತಾಗಿ ಹೃದಯದ ಮೇಲೆ ಕೆಟ್ಟ ಪರಿಣಾಮ ಮಾಡುತ್ತದೆ. ಸಾಯ ಕಲ್ಲು ಹೊಡೆಯೋಣ, ಬಿಸಿಲಲ್ಲಿ ಬಲು ವೇಗವಾಗಿ ಸಾಯಕಲ್ಲು ನಡಿಸು ವದು, ಮತ್ತು ಬಹಳ ನೀರಡಿಸಿದಾಗ ವಿಶ್ರಾಂತಿ ತಕ್ಕೊಳ್ಳದೆ ಕೂಡಲೇ ನೀರು ಕುಡಿಯುವದು, ಅಥವಾ ತತ್‌ಕ್ಷಣ ತಣ್ಣೀರು ಮೀಯೋಣಗಳಿಂದ ತತ್ಕಾಲಕ್ಕೆ ಮರಣ ಬಂದ ಉದಾಹರಣೆಗಳುಂಟು. ಮೋಟಾರಿನಂತಹ ವೇಗ ವಾಗಿ ಹೋಗುವ ವಾಹನಗಳನ್ನು ನಡಿಸೋಣ, ಮತ್ತು ಆದರೊಡನೆ ವ್ಯಸನ ಅನಿಯಮಿತತನಗಳಿಂದಲೂ ಹೃದಯ ಕ್ರಿಯ ನಿಂತು ಸಾವು ಬರುತ್ತದೆ. ಇತ್ತೀಚೆ ವಿಮಾನ ಪ್ರವಾಸದಿಂದಲೂ ಹೃದಯದ ಮೇಲೆ ಅನಿಷ್ಟ ಪರಿಣಾಮ ವಾದ್ದು ಕಂಡು ಬರುತ್ತದೆ. ಅತಿ ಸಂಭೋಗದಿಂದಲೂ ಹೃದಯದ ವಾತ ವಾಹಿನಿಗಳ ಮೇಲೆ Strain ಬಿದ್ದು ಅವು ಅಶಕ್ತವಾಗುವದರಿಂದ ಹೃದ ಯಕ್ಕೆ ನಿಃಶಕ್ತಿ ಬರುತ್ತದೆ.

**ಮೇದೋ ದೋಷಃ**— ಮೈಯಲ್ಲಿ ಕೊಬ್ಬು ಬೆಳೆಯುವದರ ಪರಿ ಣಾಮದಿಂದ ಹೃದಯದ ಆಕಾರ ಬೆಳೆಯುತ್ತದೆ. ಇದನ್ನೇ ಮೇದೋ ಭೂಯಿಷ್ಟ ಹೃದಯ ( ಫ್ಯಾಟಿ ಹಾರ್ಟ ) ಎನ್ನುತ್ತಾರೆ. ಎಳ್ಳಷ್ಟೂ ವ್ಯಾಯಾಮ ಮಾಡದಿರೋಣ ಅಥವಾ ಪೈಲವಾನರ ತಾಲೀಮು ಮಾಡು ತ್ತಿದ್ದು ಒಮ್ಮೆಗೇ ಬಿಟ್ಟು ಕೊಡೋಣವೂ ಕೆಡಕು. ಸಾರಾಂಶ ಪೋಷ ಣೆಯ ಅಭಾವ ಕಿಂವಾ ಯಾವಾಗಲೂ ಪೌಷ್ಟಿಕ ಸ್ನಿಗ್ಧ ಪದಾರ್ಥಗಳನ್ನು ಅತಿಯಾಗಿ ತಿನ್ನೋಣ, ಅವಸರದ ಓಟ, ಗಡಿಬಿಡಿ, ಗೊಂದಲ, ಆಯುಷ್ಯದ ಲ್ಲಿಯ ಏರಿಳಿತ, ಅತೀ ವಿಚಾರ, ಮನಸ್ಸಿಗೆ ಅಕಸ್ಮಾತ್ತಾಗಿ ಆಗುವ ಆಘಾತ ಇವೆಲ್ಲಾ ಹೃದಯದ ಶತ್ರುಗಳು.

## ಸಂಪ್ರಾಪ್ತಿ

ದೂಷಯಿತ್ವಾರಸಂ ದೋಷಾವಿಗುಣಾ ಹೃದಯಂ ಗತಾಃ
ಹೃದಿಬಾಧಾಂ ಪ್ರಕುರ್ವಂತಿ ಹೃದ್ರೋಗಂತಂ ಪ್ರಚಕ್ಷತೆ|

**ಯೋ. ರತ್ನಾಕರ.**

ತಂತಮ್ಮ ಕಾರಣಗಳಿಂದ ವಾತವೇ ಮೊದಲಾದ ತ್ರಿದೋಷಗಳು ಪ್ರಕುಪಿತವಾಗಿ ರಸಾದಿ ಧಾತುಗಳನ್ನು ಪ್ರದುಷ್ಟಗೊಳಿಸಿ ಹೃದ್ರೋಗವನ್ನು ಹುಟ್ಟಿಸುತ್ತವೆ. ಇದರಲ್ಲಿ ಮೂರೂ ದೋಷಗಳು ಪ್ರಕುಪಿತವಾಗಿದ್ದರೂ ವಾತದೋಷ ಪ್ರಬಲವಾಗಿರುತ್ತದೆ. ಹಾಗೆಯೇ ದೂಷ್ಯವಾದ ರಸ ಪ್ರಕುಪಿತ ವಾದುದರಿಂದ ರಸದ ಮುಂದಿನ ರಕ್ತದ ಮೇಲೂ ಪರಿಣಾಮವಾಗುತ್ತದೆ.

**ಪ್ರಕಾರಗಳು:—** ವಾತಾದಿ ದೋಷಗಳಿಂದ ೩, ಸಾನ್ನಿಪಾತಿಕ ೧ ಮತ್ತು ಜಂತುಗಳಿಂದ ಆಗುವದೊಂದು ಹೀಗೆ ೫ ತರಹಗಳು ಕಂಡು ಬರು ತ್ತವೆ. ಅವುಗಳಿಗೆ ತಕ್ಕ ಚಿಕಿತ್ಸೆ ಹೇಳಲ್ಪಟ್ಟಿದೆ. ಗ್ರಂಥಗಳಲ್ಲಿ ಹೇಳಿದ ನಿದಾನ ಮತ್ತು ಚಿಕಿತ್ಸೆಗಳಂತೂ ಮಹತ್ವದವೇ. ಆದರೂ ಇತ್ತೀಚೆ ಕಂಡು ಬರುವ ಹೃದ್ರೋಗದ ಸ್ವರೂಪವನ್ನು ಆಳವಾಗಿ ಅಭ್ಯಾಸಮಾಡುವದು ವೈದ್ಯವರ್ಗಕ್ಕೆ ಆವಶ್ಯವಾಗಿದೆ. ಅಂತೇ ಸ್ವಲ್ಪ ವಿಸ್ತಾರವಾಗಿಯೇ ಇದರ ಬಗ್ಗೆ ವಿಚಾರಿಸುವದನ್ನು ನಿಶ್ಚಯಿಸಿದೆ.

ಒಮ್ಮಿಂದೊಮ್ಮೆ ಎದೆಯಲ್ಲಿ ಭಯಂಕರ ಶೂಲಿ ಬಂದು ಕೂಡಲೇ ಹೃದಯಕ್ರಿಯೆ ನಿಂತು ಮೃತ್ಯು ಸಂಭವಿಸಿದ ಹಲವಾರು ಅಭಾಗಿಗಳ ಸುದ್ದಿ ಯನ್ನು ವರ್ತಮಾನ ಪತ್ರದಲ್ಲಿ ಓದುತ್ತಿದ್ದೇವೆ. ಏನೊಂದೂ ಪೂರ್ವ ಸೂಚನೆ ಇಲ್ಲದೆ ಒಮ್ಮಿಂದೊಮ್ಮೆ ಬರುವ ಸಾವಿಗಾಗಿ ಎಲ್ಲರಿಗೂ ಎಷ್ಟೇ ಕೆಡಕೆನಿಸಿದರೂ ಅದರಿಂದೇನೂ ಪ್ರಯೋಜನವಿಲ್ಲ. ಅಲ್ಲಿ ಚಿಕಿತ್ಸೆ ಸಾಧ್ಯವೇ ಇರುವದಿಲ್ಲ. ಆದರೆ ತುಸುವಾದರೂ ಮುಂಗಡ ತಿಳಿದಲ್ಲಿ ಉತ್ತಮವಾದ ಯಶಸ್ವೀ ಚಿಕಿತ್ಸೆಮಾಡಲು ಬರುತ್ತದೆಯೆಂಬುದು ಅನುಭವದ ಮಾತು. ಹೃದಯದಲ್ಲಿ ಶೂಲಿ ಬಂದೊಡನೆ ಪ್ರತಿಯೊಬ್ಬ ಮನುಷ್ಯ ಸತ್ತೇತೀರುವ ನೆಂದೇನಿಲ್ಲ. ಒಂದು ಕ್ಷಣ ಆವೇಗ ಬಂದಂತಾಗಿ ಮರುಕ್ಷಣದಲ್ಲಿ ಆರಾಮ ಕಾಣಿಸುತ್ತದೆ. ಇದು ಹೃದಯವಿಕಾರದ ಗಂಡಾಂತರ ಸೂಚನೆಯೆಂದು ತಿಳಿದು ಕೂಡಲೇ ಸಾವಧಾನದಿಂದ ನಡೆದುಕೊಳ್ಳಬೇಕು. ಮೊದಲು ವರ್ಣಿ ಸಿದ್ದು ಹೃದ್ರೋಗದ ತೀವ್ರಾವಸ್ಥೆ. ಇದು ಸಾಮಾನ್ಯ.

**ಇನ್ನಿತರ ಲಕ್ಷಣಗಳು:—** ತೀವ್ರಾವಸ್ಥೆಯಿಂದ ಮನುಷ್ಯ ಪಾರಾ ದರೂ ಬೇರೆ ಲಕ್ಷಣಗಳು ಬಾಕಿ ಇದ್ದೇ ಇರುತ್ತವೆ. ಸ್ವಲ್ಪೇ ಶ್ರಮದಿಂದಲೇ

ದಮ್ಮು ಹತ್ತೋಣ, (ಕಾರ್ಡಿಯಾಕ್‌ಅಸ್ಥಮಾ) ನಾಡಿಯ ಬಡಿತಗಳು ಅವಸರದಿಂದ ಬೀಳುವದಕ್ಕೆ ( ಟ್ಯಾಕೀಕಾರ್ಡಿಯಾ ) ಅನ್ನುತ್ತಾರೆ. ಇದರಲ್ಲಿ ವಾತಪಿತ್ತಗಳೆರಡೂ ಪ್ರಬಲವಾಗಿರುತ್ತವೆ. ಕಫ ಹೆಚ್ಚಾದರೆ ನಾಡಿಯ ಗತಿ ಮಂದವಾಗುತ್ತದೆ. ಈ ಅವಸ್ಥೆಗೆ( ಬ್ರ್ಯಾಡಿಕಾರ್ಡಿಯಾ ) ಎಂದು ಹೆಸರು. ವಾತಪ್ರಧಾನ ಹೃದ್ರೋಗದಲ್ಲಿ ಹೃದಯದ ಗತಿ ಅನಿಯಮಿತವಾಗಿರುತ್ತದೆ. ಅಂದರೆ ನಾಡಿಯ ಗತಿಯಲ್ಲಿ ಹೆಚ್ಚುಕಡಿಮೆಯಾಗೋಣ ಅಥವಾ ಮಧ್ಯದಲ್ಲಿ ಒಂದು ಬಡಿತ ಲೋಪವಾಗಲೂಬಹುದು. ಇದಕ್ಕೆ(ಮಿಸಿಂಗ್ ಬೀಟ)ಎಂದು ಹೆಸರು. ಕೆಲವುಸಾರೆ ನಾಡಿಯ ಬಡಿತಗಳು ಕ್ರಮಬದ್ಧವಾಗಿ ಲುಪ್ತವಾಗುತ್ತವೆ. ಇದನ್ನು ರೆಗ್ಯುಲರ್ಲಿ ರೆಗ್ಯುಲರ್ ಹಾರ್ಟ ಎನ್ನುತ್ತಾರೆ. ಇದರಲ್ಲಿ ಹೃದಯ ಗತಿ ಅಂದರೆ ನಾಡೀ ಸ್ಪಂದನ ತಾಲಬದ್ಧವಾಗಿರುತ್ತದೆ. ಆದರೆ ಕೆಲವುಸಲ ಹೃದಯದ ಗತಿ ಕಿಂವಾ ನಾಡೀಸ್ಪಂದನಗಳು ಬಹಳೇ ಅನಿಯಮಿತ ಅಂದರೆ ತಾಳಗೆಟ್ಟಿರುತ್ತವೆ. ಇದಕ್ಕೆ 'ಇ ರೆಗ್ಯುಲರ್ಲಿ ಇ ರೆಗ್ಯುಲರ್ ಹಾರ್ಟ್' ಎಂದೆನ್ನುತ್ತಾರೆ.

**ಹೃತ್ಕಂಪ** (ಪಾಲ್ಪಿಟೇಶನ್):— ಸ್ವಲ್ಪೇ ಶಾರೀರಿಕ ಕಿಂವಾ ಮಾನಸಿಕ ಆಘಾತದಿಂದ ಹೃತ್ಕಂಪ(ಎದೆ ನಡುಗುವಿಕೆ)ಗೆ ಆರಂಭವಾಗಿ ಗಾಬರಿಯಾಗಹತ್ತುವದನ್ನು ಹೃದಯವಿಕಾರದ ನಿದಾನ–ಯೋಗ್ಯ (ಡಾಯಗ್ನೊಸ್ಟಿಕ್ ) ವಾದ ಲಕ್ಷಣವೆನ್ನಬೇಕು. ಗಾಬರಿಯಾಗಿ ಒಮ್ಮೊಮ್ಮೆ ಬೆವರೂ ಬರುತ್ತದೆ. ಧಾತು ಕ್ಷೀಣವಾಗಿದ್ದ ಗಂಡಸು, ಪಾಂಡುರೋಗದ ಹೆಂಗಸು, ವಿಶೇಷವಾಗಿ ಜ್ಞಾನತಂತುಗಳು ಬಹಳೇ ಅಶಕ್ತವಾಗಿರುವಂಥವರಿಗೆ ಈ ಬಾಧೆ ಹೆಚ್ಚಾಗಿ ಆಗುವದು ಕಂಡುಬರುತ್ತದೆ.

**ಬೇರೆ ಉಪದ್ರವಗಳು:**— ದಮ್ಮುಹತ್ತುವದರ ಸಬಂಧದ ವರ್ಣನೆ ಮೇಲೆ ಬಂದಿದೆ.

**ಕಾಸ:**— ಪುಪ್ಪುಸದಲ್ಲಿ ಕಫ ಹೆಚ್ಚಿಕೊಂಡು ಕೆಮ್ಮುಗೆ ಶುರುವಾಗುತ್ತದೆ. ಹೆಚ್ಚಾಗಿ ಸಾಯಕಲ್ಲ ಹೊಡೆಯುವವರಿಗೂ ಒಂದು ತರಹದ ಕೆಮ್ಮು ಬರುತ್ತದೆ. ಅವರು ಆಗಲೇ ಎಚ್ಚರಾಗಿರಬೇಕು.

**ಸರ್ವಾಂಗ ಶೋಥ**— ಹೃದಯ ಅಶಕ್ತವಾದೊಡನೆ ಮೊದಲಿಗೆ ಕಾಲು ಬಾಯುತ್ತವೆ. ಆಮೇಲೆ ಕೈಗಳಿಗೆ ಬರುತ್ತದೆ. ಅಪಥ್ಯಮಾಡುತ್ತಲೇ ಇದ್ದರೆ ಮೈಯ್ಯೆಲ್ಲಾ ಬಾಯುತ್ತದೆ.

**ಉದರಃ**— ಹೊಟ್ಟೆಯಲ್ಲಿ ನೀರು ಸಂಚಯಿಸಿ ಜಲೋದರವೂ ಸಂಭವಿಸುತ್ತದೆ.

**ನಿದಾನಃ**— ತೀವ್ರಾವಸ್ಥೆಯಲ್ಲಿ ನಿದಾನಮಾಡಲು ಅವಕಾಶವೇ ಇರುವದಿಲ್ಲ. ಇಂಥ ಅಪವಾದದ ಪ್ರಸಂಗಗಳನ್ನು ಬಿಟ್ಟು ಉಳಿದೆಲ್ಲ ಅವಸ್ಥೆಗಳಲ್ಲಿ ನಿದಾನಮಾಡುವದು ಸುಲಭ. ನಾಡೀಸ್ಪಂದನ ಮತ್ತು ಹೃದಯದ ಬಡಿತಗಳಿಂದ ಹೃದಯದ ವಿಕಾರವನ್ನು ಪರೀಕ್ಷಿಸಬರುತ್ತದೆ. ಅರ್ಥಾತ್ ಭೇದಕ ನಿದಾನಮಾಡಲಿಕ್ಕೆ ವೈದ್ಯರಿಗೆ ಸೂಕ್ಷ್ಮ ಜ್ಞಾನೇಂದ್ರಿಯಗಳು ಮತ್ತು ಸತತ ಅಭ್ಯಾಸಗಳ, ನಿತಾಂತ ಅವಶ್ಯವಾಗಿವೆ.

**ಜಂತುಗಳಿಂದಾಗುವ ಹೃದ್ರೋಗಃ**— ಹೊಟ್ಟೆಯಲ್ಲಿ ಜಂತುಗಳು ಬಹಳ ಪ್ರಮಾಣದಲ್ಲಿ ಬೆಳೆದರೆ ಹೃದಯಶೂಲಿ ಆರಂಭವಾಗುತ್ತದೆ. ;ಇದರಲ್ಲಿ ಜಂತಿನ ಇನ್ನಿತರ ಲಕ್ಷಣಗಳೂ ಇದ್ದೇ ಇರುತ್ತವೆ: ಈ ವಿಕಾರ ಸೂಜ್ಞ ವೈದ್ಯರು ಕ್ರಿಮಿಶೋಧನೆ ಮಾಡಿದರೆ ತತ್ಕಾಲ ಗುಣವಾಗುತ್ತದೆ. ಬದ್ಧಕೋಷ್ಠ ಮತ್ತು ಹೊಟ್ಟೆಯಲ್ಲಿ ಹೆಚ್ಚು ಪ್ರಮಾಣದಿಂದ ವಾತ (ಗ್ಯಾಸ್) ಹಿಡಿಯೋಣದರಿಂದಲೂ ಹೃದಯದ ಮೇಲೆ ಒತ್ತಡ ಬಿದ್ದು ಹೃದ್ರೋಗದಂತಹ ಲಕ್ಷಣಗಳು ಕಾಣಿಸಿಕೊಳ್ಳುತ್ತವೆ. ಥಂಡಿ ಅಥವಾ ವಾತದಿಂದಲೂ ಎದೆಯಲ್ಲಿ ಭಯಂಕರವಾಗಿ ನೋಯ ಹತ್ತುತ್ತದೆ. ಇಂಥ ವೇಳೆಯಲ್ಲಿ ಸಾಮಾನ್ಯ ಮನುಷ್ಯ ಗಾಬರಿಯಾಗಿ ಹೃದ್ರೋಗವೆಂದು ಸಂಶಯಪಡುತ್ತಾನೆ. ಆದರೆ ವೈದ್ಯರು ಮಾತ್ರ ಇಂಥಲ್ಲಿ ಗಾಬರಿಯಾಗುವ ಕಾರಣವಿಲ್ಲ.

**ಚಿಕಿತ್ಸೆ**:— "ಚಿಕಿತ್ಸಾ ತತ್ರ ನಿದಾನ ಪರಿವರ್ಜನಂ" ರೋಗದ ಕಾರಣಗಳನ್ನು ಮೊದಲು ನಿವಾರಣೆ ಮಾಡಬೇಕು. ಕಿಂವಾ ಆ ಕಾರಣಗಳ ಮೇಲೆಯೇ ವಿಶೇಷ ಜೋರಾಗಿ ಚಿಕಿತ್ಸೆ ಮಾಡಬೇಕು. ಸೌಮ್ಯ ಆಹಾರ, ತುಂಬಾ ವಿಶ್ರಾಂತಿ, ಹೆದರಿಕೆ, ಶಿಟ್ಟು ಮೊದಲಾದ ಮನಸ್ಸನ್ನು

ಕದಡುವ ಮನೋದೋಷಗಳ ನಿಗ್ರಹ ಮತ್ತು ಸಂಭೋಗಾಸಕ್ತಿಯ ಮೇಲೆ ನಿಯಂತ್ರಣವನ್ನಿಡಬೇಕು.

**ಔಷಧಿ:—**ಪ್ರಾಚೀನ ಆಯುರ್ವೇದಾಚಾರ್ಯರು ಹೃದ್ರೋಗದ ಮೇಲೆ ಒಳ್ಳೇ ಪ್ರಭಾವಿ ಹಾಗು ಗುಣಕಾರಿಯಾದ ಚಿಕಿತ್ಸೆಯನ್ನು ಹೇಳಿದ್ದಾರೆ. ಈ ಬಲದ ಮೇಲೆಯೇ ವೈದ್ಯರು ಇಂದಿಗೂ ದೊಡ್ಡ ದೊಡ್ಡ ಹೆಸರಾಂತ ಡಾಕ್ಟರುಗಳು ಬಿಟ್ಟುಕೊಟ್ಟಿರುವ ರೋಗಿಗಳನ್ನು ಯಶಸ್ವಿಯಾಗಿ ಚಿಕಿತ್ಸೆ ಮಾಡುತ್ತಾರೆ. ಹೃದ್ರೋಗದ ಮೇಲಿನ ಪ್ರಭಾವಿಗಳಾದ ಔಷಧಿಗಳು ಕೆಳಗಿನಂತಿವೆ.—

**(೧) ಸುವರ್ಣ:—**ಇದು ಹೃದಯದ ರೋಗಗಳಲ್ಲಿ ಅಪ್ರತಿಮವಾಗಿ ಉಪಯೋಗವಾಗುತ್ತದೆ. ಹೃದಯ ಮೆಲ್ಲಕ್ಕೆ ನಡೆಯುತ್ತಿದ್ದಾಗ ಚೊಕ್ಕ ಚಿನ್ನದ ತುಂಡನ್ನು ಕೆಂಪಗೆ ಕಾಸಿ ನೀರಲ್ಲಿ ಎದ್ದಿ ಆ ನೀರು ಕುಡಿಯಲಿಕ್ಕೆ ಕೊಡಬೇಕು. ಇದರಿಂದ ಹೃದಯಕ್ರಿಯೆ ಸುಧಾರಿಸುತ್ತದೆ. ಯಾವದೇ ರೋಗದ ಕೊನೆ ಅವಸ್ಥೆಯಲ್ಲಿ ಇದನ್ನು ಉಪಯೋಗಿಸಬಹುದು. ಗರದೋಷ ಅಥವಾ ವಿಷ ಬಾಧೆಗಳ ಪರಿಣಾಮ ಹೃದಯಕ್ಕೆ ಆಗಿದ್ದರೆ ಅದಕ್ಕೆ ಮೊದಲು ಅಲ್ಪ ಪ್ರಮಾಣದಲ್ಲಿ ತಾಮ್ರಭಸ್ಮ ಕೊಟ್ಟು ಆ ಮೇಲೆ ಸುವರ್ಣ ಭಸ್ಮದ ಉಪಯೋಗ ಮಾಡಲು ಹೇಳಿದ್ದಾರೆ. (ಚರಕ)

**(೨) ಮೌಕ್ತಿಕ:—**ಪಿತ್ತದಿಂದಾದ ಅಥವಾ ವಾತ ಪಿತ್ತಗಳಿಂದಾದ ಹೃದ್ರೋಗದ ಮೇಲೆ ಮೌಕ್ತಿಕ ಇನ್ನಿಲ್ಲದಷ್ಟು ಉತ್ತಮ ಕೆಲಸ ಮಾಡುತ್ತದೆ. ಇದು ಅನೇಕ ರೋಗಿಗಳ ವಿಷಯದಲ್ಲಿ ಲೇಖಕನಿಗೆ ಬಂದ ಅನುಭವವಾಗಿದೆ. ಮೌಕ್ತಿಕದೊಡನೆ ಸುವರ್ಣ ಮಾಕ್ಷಿಕವನ್ನೂ ಉಪಯೋಗಿಸಬೇಕು.

**(೩) ಶೃಂಗಭಸ್ಮ:—**ಇದೊಂದು ಔಷಧಿ ರಾಮಬಾಣವಾಗಿದೆ. ಹೃದಯ ಮತ್ತು ಪುಪ್ಪುಸಗಳ ಅಶಕ್ತಿಯಲ್ಲಿ ಇದನ್ನು ಜೇನಿನಲ್ಲಿ ನೆಕ್ಕಬೇಕು. ಕಫಾತ್ಮಕ ಅಥವಾ ಕಫ ವಾತಾತ್ಮಕ ವಿಕಾರದಲ್ಲಿ ಇದು ವಿಶೇಷ ಉಪಯುಕ್ತ.

(೪) **ಜೇನುತುಪ್ಪ**:—ಇದು ನಿಸರ್ಗದತ್ತ ಉತ್ತಮ ಪೌಷ್ಟಿಕ ಔಷಧಿ. ಹೃದಯಕ್ಕೆ ಶಕ್ತಿದಾಯಕ ಮತ್ತು ಜಂತುಘ್ನವಾಗಿದೆ. ಹೃದಯದ ಸ್ನಾಯುಗಳ ಮೇಲೆ ಸಾಕ್ಷಾತ್ತಾಗಿ ಜೇನಿನ ಪರಿಣಾಮವಾಗುತ್ತದೆಯೆಂಬ ಮಾತು ಅಮೇರಿಕೆಯ ಸುಪ್ರಸಿದ್ಧ ಡಾಕ್ಟರರ ಅನುಭವಕ್ಕೆ ಬಂದಿದೆ. ತೀರ ಕೊನೆಯ ಸ್ಥಿತಿಯಲ್ಲಿ ಜೇನುತುಪ್ಪ ನೀರು ಕೊಟ್ಟರೆ ನಾಡಿಗಳು ಚೇತರಿಸಿಕೊಳ್ಳುತ್ತವೆ.

**ವಿ. ಸೂ**:—ಮನೆಯಲ್ಲಿ ದಿನಾಲು ಪಂಚಾಮೃತ ಅಂದರೆ **ಆಕಳ** ಹಾಲು, ತುಪ್ಪ, ಮೊಸರು, ಜೇನು, ಸಕ್ಕರಿಗಳನ್ನು ಸೇವನ **ಮಾಡಿದರೆ** ಎಲ್ಲ ತರಹದಿಂದಲೂ ಹಿತಕರ. ಇದರಲ್ಲಿ ವಿಪುಲವಾಗಿ ಜೀವನ ಸತ್ವಗಳಿದ್ದು ಅವು ಹೃದಯಕ್ಕೊಳ್ಳೆ ಶಕ್ತಿಪ್ರದಗಳಾಗಿವೆ. ವಿದ್ವಾಂಸರನೇಕರು ಈ ಮಾತನ್ನು ಒಪ್ಪಿದ್ದಾರೆ.

(೫)**ಅರ್ಜುನ (ಮತ್ತಿ)**:—ಹೃದಯದೌರ್ಬಲ್ಯದ ಮೇಲೆ ಇದನ್ನು ಅಮೃತ ಸಂಜೀವಿನಿಯೆಂದೇ ಹೇಳಬೇಕು. ಈ ಗಿಡದ ಒಳದೊಗಟೆಯ ಕಷಾಯದಿಂದ ಹೃದಯ ಚೇತರಿಸಿಕೊಳ್ಳುತ್ತದೆ. ಪಾರ್ಥಾದ್ಯರಿಷ್ಟ, ಅರ್ಜುನಾಸವ, ಹಾರ್ಟಿನಾಗಳಂಥ ಕಲ್ಪಗಳು ಇದೇ ಮತ್ತೀ ತೊಗಟೆಯಿಂದ ಮಾಡಲ್ಪಟ್ಟವು.

(೬) **ಸ್ಥಿರಾ-ಶಾಲಿಪರ್ಣಿ**:— ಹೃದಯದಲ್ಲಿದ್ದ ವಾತ ವಿಕಾರದ ಮೇಲೆ ಇದೊಳ್ಳೇ ಪ್ರಭಾವಶಾಲೀ ಔಷಧಿ. "ಹೃತ್ಸ್ಥೇಪಯಃಸ್ಥಿರಾಸಿದ್ಧಂ" (ಅಷ್ಟಾಂಗ ಹೃದಯ), ಹೃದ್ಗತ ವಾತದ ಮೇಲೆ ಶಾಲಿಪರ್ಣೀ ಹಾಕಿ ಕುದಿಸಿದ ಹಾಲು ಕೊಡಬೇಕು.

(೭) **ಅಷ್ಟಧಾತು ರಸಾಯನ**:—ಉಪದಂಶದಿಂದುಂಟಾದ ಹೃದಯ ವಿಕಾರಕ್ಕೆ ಸುಂದರವಾಗಿ ಇದರ ಉಪಯೋಗವಾಗುತ್ತದೆ.

(೮) **ಸುವರ್ಣರಾಜ ವಂಗೇಶ್ವರ**:—ಪರಮಾದಿಂದ ಹುಟ್ಟಿದ ಹೃದಯ ವಿಕೃತಿಗೆ.

(೯) **ಮಹಾರಾಸ್ನಾದಿ ಕಷಾಯಃ**— ಆಮವಾತಜನ್ಯ ಹೃದಯ ವಿಕಾರಕ್ಕೆ.

(೧೦) **ಮಹಾಯೋಗರಾಜ ಗುಗ್ಗುಳಃ**— ಸಂಧಿವಾತ ಜನ್ಯ ಹೃದಯ ವಿಕಾರಕ್ಕೆ.

## ಆ್ಯಲೋಪಥಿ

ಬಹಳೇ ತೀವ್ರಾವಸ್ಥೆಯಲ್ಲಿ (೧) ಏಮೂಇಲ್ ನಾಯ್‌ಟ್ರೇಟ್‌ದ ಉಪಯೋಗ ಮಾಡುತ್ತಾರೆ. ಬಾಟ್ಲಿ ಒಡೆದು ಅದರ ವಾಸನೆ ತಕ್ಕೊಳ್ಳಬೇಕು.

(೨) ಡಿಜಿಟಾಲಿನ್ ಇಂಜೆಕ್ಶನ್ ಕೊಡುತ್ತಾರೆ.

(೩) ಕ್ಯಾಲ್ಸಿಯಂ ಗ್ಲುಕೋನಾಯಿಟ್ ಇಂಜೆಕ್ಶನ್ನನ್ನೂ ಉಪಯೋಗಿಸುತ್ತಾರೆ.

# ಅತಿಸಾರ

## Diarrhoea ಡಾಯೆರಿಯಾ

**ಸಾಮಾನ್ಯವರ್ಣನೆ:**— ಬೇರೆ ಬೇರೆ ಜ್ವರಗಳಲ್ಲಿ ಅತಿಸಾರದ ಉಪದ್ರವ ಕಂಡುಬರುತ್ತದೆ. ಅಥವಾ ಸ್ವತಂತ್ರವಾಗಿಯೂ ಅತಿಸಾರ ಸಂಭವಿಸುತ್ತದೆ. ಈ ವಿಕಾರದಲ್ಲಿ ನೀರಾಗಿ ದೊಡ್ಡ ದೊಡ್ಡ ಜುಲಾಬುಗಳಾಗುತ್ತವೆ. ಇದು ಪಚನ ಸಂಸ್ಥೆಯ ವಿಕಾರವಾಗಿದ್ದು ಇದರಲ್ಲಿ ಹೊಟ್ಟೆ ಮತ್ತು ಸಣ್ಣ ದೊಡ್ಡ ಕರಳುಗಳು ಕೆಟ್ಟಿರುತ್ತವೆ.

**ಕಾರಣ ಮೀಮಾಂಸೆ:**— ಅತಿಸಾರಕ್ಕೆ ಹಲವಾರು ಕಾರಣಗಳಿವೆ. ತಿಂದ ಅನ್ನ ಅರಗದೆ ಶಲ್ಯವಾಗಿ ಹೊಟ್ಟೆ ಚುಚ್ಚಹತ್ತುವದು ಇದಕ್ಕೊಂದು ವಿಶೇಷ ಕಾರಣವಾಗಿದೆ. ಈ ಶಲ್ಯವನ್ನು ಕಳೆದುಕೊಳ್ಳಲು ನಡೆಯುವ ಶರೀರದ ಸ್ವಾಭಾವಿಕ ಪ್ರಯತ್ನವೇ ಅತಿಸಾರ.

|| ಅನಾತ್ಮವಂತಃ ಪಶುವತ್ ಭುಂಜತೇಯೇ ಅಪ್ರಮಾಣತಃ ||
|| ರೋಗಾನೀಕಸ್ಯತೇ ಮೂಲಂ ಅಜೀರ್ಣಂ ಪ್ರಾಪ್ನುವಂತಿಹಿ ||

ಹೊತ್ತು ಗೊತ್ತುಗಳಿಲ್ಲದೆ ದನಗಳಂತೆ ಮೇಯುವವರಿಗೆ ಮೊದಲು ಅಜೀರ್ಣ, ಅದರಿಂದ ಅನೇಕ ರೋಗಗಳುಂಟಾಗುವವೆಂಬ ಸುಂದರ ಕಾರಣವನ್ನು ಆಯುರ್ವೇದವು ಕೊಟ್ಟಿದೆ. ಅಲ್ಲದೆ ಬಗೆಬಗೆಯ ವಿಷ ಕ್ರಿಮಿ ಮುಂತಾದ ಕಾರಣಗಳೂ ಇದ್ದೇ ಇವೆ. ಮಕ್ಕಳಿಗೆ ಹಲ್ಲು ಬರುವಾಗ ಹೊಟ್ಟೆ ಜಾಡಿಸುತ್ತದೆ.

**ಲಕ್ಷಣಗಳು ಮತ್ತು ಭಾವನೆ:—** ಹೊಟ್ಟೆನೋಯೋಣ, ನೀರಡಿಕೆ, ಬಾಯಾರಿಕೆ, ಅಗ್ನಿಮಾಂದ್ಯ, ಕೈಕಾಲು ಸೋಲೋಣ ಮುಂತಾದವು.

**ಚಿಕಿತ್ಸೆ:—** ಅತಿಸಾರದ ಆಮಾವಸ್ಥೆಯಲ್ಲಿ ಸ್ತಂಭನ ಮಾಡಬಾರದು. ಸ್ವಾಭಾವಿಕವಾಗಿಯೇ ದೋಷಗಳು ಹೊರಬೀಳುತ್ತಿರುತ್ತವೆ. ಇಲ್ಲಿ "ಉಪೇಕ್ಷಾಏವಭೇಷಜಂ" ಅಫೀಮು ಕೂಡಿದ ಔಷಧಗಳನ್ನು ಕೊಟ್ಟು ನಿಲ್ಲಿಸಿಬಿಟ್ಟರೆ ಹೊಟ್ಟೆ ಉಬ್ಬಿಕೊಳ್ಳುತ್ತದೆ. ಅಜೀರ್ಣ, ಅಗ್ನಿಮಾಂದ್ಯ, ಆಮಾತಿಸಾರಗಳಿಗೆ ಲಂಘನ-ಉಪವಾಸವೇ ಉತ್ತಮ ಉಪಚಾರವಾಗಿದೆ. ‘‘ಲಂಘನಂ ಪರಮೌಷಧ’’

**ಔಷಧಿಗಳು:—** (ಆಮಾತಿಸಾರ) ಹಿಂಗಾಷ್ಟಕ, ಭಾಸ್ಕರಲವಣ, ತ್ರಿಕಟು, (ಸುಂಟಿ ಮೆಣಸು, ಹಿಪ್ಪಲಿ ಸಮಪ್ರಮಾಣ)ಪಾಚಕಗುಟಿ, ಶಂಖವಟಿ, ಅಷ್ಟಾಂಗಲವಣ ಮುಂತಾದವು.

**ಪಕ್ವಾವಸ್ಥೆ:—** ಮಲವೆಲ್ಲಾ ಹೊರಗೆ ಹೋದಮೇಲೆ ಬರಿಯ ನೀರಿನ ಹಾಗೆ ಜಾಡಿಸುತ್ತದೆ. ರೋಗಿ ನಿಃಶ್ಯಕ್ತನಾಗುತ್ತಾನೆ. ಕಂಣು ಒಳ ಸೇರುತ್ತವೆ. ಕಾಲಿಗೆ ಒರಟೆ ಬರುತ್ತದೆ. ಇದಕ್ಕೆ ಜಾತಿಫಲಾದಿ ೨ ಗುಂಜಿ, ಕಪರ್ದಿಕ ಭಸ್ಮ ೪ ಗುಂಜಿ + ಶೌಕ್ತಿಕ ೪ ಗುಂಜಿ, ೪ ಚೀಟು ಬಿಸಿ ನೀರಲ್ಲಿ ಅಥವಾ ಕರ್ಪೂರ ರಸ, ಶಂಖೋದರ ರಸ, ಅಹಿಫೇನಾಸವ ಮೊದಲಾದ ಕಲ್ಪಗಳನ್ನು ಅವಸ್ಥಾ ಭೇದದಿಂದ ಕೊಡಬೇಕು. ಮತ್ತು ಕುಟಜಾರಿಷ್ಟ, ಗಂಗಾಧರ ಚೂರ್ಣ, ಆನಂದಭೈರವ, ಅಮೃತವಟಿ, ಸಂಜೀವನೀ ವಟಿಗಳು,

ಸಣ್ಣ ಮಕ್ಕಳಿಗೆ ದಾಳಿಂಬರ ಹಣ್ಣಿನ ತೊಗಟೆಯನ್ನು ಬಿಸಿ ನೀರಲ್ಲಿ ತೇದು ಕೊಡಬೇಕು. ಅಥವಾ ದಾಡಿಮಾವಲೇಹ ಕೊಡಬೇಕು. ಕರಳಿನಲ್ಲಿ ಶೂಲಿ ಇದ್ದರೆ ಕೋಕಮ (ಸೋಲಮೇಣ) ತೈಲವನ್ನು ಹೊಟ್ಟೆಯಲ್ಲಿ ಕೊಡಬೇಕು. ದೋಷಗಳಿಗೆ ತಕ್ಕಂತೆ ಈ ಕೆಳಗಿನ ಉಪಚಾರ ಮಾಡಬೇಕು.

(೧) **ವಾತದಿಂದಾದ್ದಕ್ಕೆ:—** ಪಾಚಕವಟಿ, ರಸೋನವಟಿ, ಸಂಜೀವನೀ ಗುಟಿ, ಕಪರ್ದಿಕಗಳೇ ಮೊದಲಾದವು.

(೨) **ಪಿತ್ತದಿಂದ:—** ಮುಕ್ತಾಶೌಕ್ತಿಕ, ಕಪರ್ದಿಕ, ಪ್ರವಾಳ ಪಂಚಾಮೃತ, ಸುವರ್ಣ ಸೂತಶೇಖರ, ಸುವರ್ಣ ಮಾಕ್ಷಿಕ, ಮೌಕ್ತಿಕ ಮೊದಲಾದವು.

(೩) **ಕಫದಿಂದ:—** ಇದರಲ್ಲಿ ಮೊದಲಿಗೆ ಉಪವಾಸ ಹಾಕಬೇಕು. ಆಮೇಲೆ ಹಿಂಗಾಷ್ಟಕ, ತ್ರಿಕಟು, ಶಂಖಭಸ್ಮ, ಶಂಖವಟಿ ಮೊದಲಾದ ದೀಪಕ-ಪಾಚಕ ಔಷಧಿ ಚಿಕಿತ್ಸೆ ಮಾಡಬೇಕು.

**ಆಹಾರ:—** ಕಾಫಿ, ಬಾರ್ಲಿ—ನೀರು, ಭತ್ತದರಳಿನ ಗಂಜಿ, ಆಮಸೋಲಿನ ಸಾರು, ಮಜ್ಜಿಗೆ ಅನ್ನ.

## ಆಮಾಂಶ

### Dysentery ಡಿಸೆಂಟರಿ

**ಸಾಮಾನ್ಯ ವರ್ಣನೆ:—** ಈ ವಿಕಾರದಲ್ಲಿ ಆವುಕೂಡಿ ಅಥವಾ ರಕ್ತ ಆವೂಕೂಡಿ ಮೇಲಿಂದಮೇಲೆ ಶೌಚವಾಗುತ್ತದೆ. ಇದು ಹಿರಿ ಕರುಳಿನ ರೋಗವಾಗಿದೆ, ಮಳೆಗಾಲದ ಆರಂಭಕ್ಕೆ ವಿಶೇಷವಾಗಿ ನೊಣಗಳು ಹೆಚ್ಚಾದಾಗ ಈ ಬೇನೆ ಹೆಚ್ಚಾಗಿ ಕಾಣಿಸಿಕೊಳ್ಳುವದುಂಟು. ಮಳೆಗಾಲದ ಹೊಸ ನೀರು ಅಥವಾ ಹಾಲಿನಲ್ಲಿಂದ ಈ ಕೃಮಿಗಳು ಹಬ್ಬುತ್ತವೆ.

**ಪ್ರಕಾರ:—** ಕ್ರಿಮಿಗಳಿಗನುಗುಣವಾಗಿ ಇದರಲ್ಲಿ ಎರಡು ಭೇದಗಳಾಗಿವೆ. (೧) ಅಮೇಬಿಕ್ (೨)ಬ್ಯಾಸಿಲರಿ.

## ಅಮೇಬಿಕ್ ಡಿಸೆಂಟರಿ

ಉಷ್ಣಕಟಿಬಂಧದಲ್ಲಿ ಕಂಡುಬರುವದಿದೊಂದು ಚಿರಪರಿಣಾಮಕಾರಿ (ಕ್ರಾನಿಕ್) ಯಾದ ವಿಕಾರವಾಗಿದೆ. ಇದು ತಿರುತಿರುಗಿ ಬರುತ್ತದೆ. ರಾಡಿ ನೀರಿನ ಜೊತೆಗೆ ಇದರ ಕ್ರಿಮಿಗಳು ಹೊಟ್ಟೀ ಹೊಗುತ್ತವೆ. ವಿಕಾರಕ್ಕೆ ಸುರುವಾಗುತ್ತದೆ. ಈ ಕ್ರಿಮಿಗಳಿಗೆ ಅಮೀಬಾ ಎನ್ನುತ್ತಾರೆ. ಇದು ಏಕ ಪೇಶಿಮಯ (ಯೂನಿ ಸೆಲ್ಯುಲರ) ಜೀವವಾಗಿದೆ. ಬಲು ಸೂಕ್ಷ್ಮವಾಗಿರುವದರಿಂದ ಸೂಕ್ಷ್ಮದರ್ಶಕ ಯಂತ್ರದಿಂದಲೇ ಇದರ ಅಸ್ತಿತ್ವ ಗೊತ್ತಾಗುವದು.

**ಲಕ್ಷಣಗಳು ಮತ್ತು ಭಾವನೆ:—** ಹೊಟ್ಟೆ ಮುರಿದು ದಿನಕ್ಕೆ ೨೦-೨೫ ಸಲ ಮತ್ತೆ ಮತ್ತೆ ಶೌಚವಾಗುತ್ತದೆ. ಆವಿನೊಡನೆ ಜಿಗುಟಾಗಿ ಮಲ ಕೂಡಿರುತ್ತದೆ. ಮುಂದೆ ತುಸು ರಕ್ತ ಆವು ಕೂಡಿ ಜಾಡಿಸುತ್ತದೆ, ರೋಗಿ ತಿಣುಕುತ್ತಾ ಬಹಳ ಹೊತ್ತಿನವರೆಗೆ ಕೂಡುತ್ತಾನೆ. ಹೊಟ್ಟೆ ಮುರಿಯುವಾಗ ಸಂಣ ಹುಡುಗರು ಅಳುತ್ತವೆ.

**ಉಪದ್ರವ:—** ಕರುಳಿನ ಒಳಮೈಗೆ ಹುಂಣುಗಳಾಗುತ್ತವೆ. ಹುಂಣುಗಳ ಬಾಯಿ ತುಂಬಿಬಂದರೂ ಒಳಗೆ ಕ್ರಿಮಿಗಳು ಇದ್ದೇ ಇರುತ್ತವೆ. ಅದರಿಂದಾಗಿ ಮತ್ತೆ ಮತ್ತೆ ವಿಕಾರ ಮರಕಳಿಸುತ್ತದೆ. ಕ್ವಚಿತ್ತಾಗಿ ಈ ಕ್ರಿಮಿಗಳು ಯಕೃತ್ತಿನಲ್ಲಿ ಹೊಕ್ಕು ಯಕೃತ್‌ವಿದ್ರಧಿ(ಟ್ರಾಪಿಕಲ್ ಎಪ್ಸೆಸ್)ಯನ್ನು ಉಂಟುಮಾಡುತ್ತವೆ. ಈ ರೋಗ ಕಷ್ಟಸಾಧ್ಯವೆಂದರಿಯಬೇಕು.

**ಸಾಧ್ಯಾಸಾಧ್ಯತ್ವ:—** ಉಪದ್ರವಗಳಿಲ್ಲದ ರೋಗವು ಹೊತ್ತಿನಲ್ಲಿಯೇ ತಕ್ಕ ಚಿಕಿತ್ಸೆಯಾದರೆ ಸುಖಸಾಧ್ಯವಾಗುತ್ತದೆ.

## ಚಿಕಿತ್ಸೆ

**ಆಯುರ್ವೇದೀಯ:—** ಇದರಲ್ಲಿ ಆಮಪಾಚನ ಮತ್ತು ದೀಪನ ಚಿಕಿತ್ಸೆಮಾಡಬೇಕಾಗುತ್ತದೆ. ರೋಗದ ಅನುಮಾನ ಬಂದೊಡನೆ ಮೊದ

ಲಿಗೆ ಸುಂಟಿಯ ಕಷಾಯದಲ್ಲಿ ೧ ಔಂಸು ಹರಳೆಣ್ಣೆ ಹಾಕಿಬಿಡಬೇಕು. ಆಮಾಂಶಕ್ಕೆ ಇದೊಂದು ಪ್ರಭಾವಿ ಉಪಚಾರ. ಎರಡನೇ ದಿನಕ್ಕೆ ಸುಂಟಿಯಪುಡಿ ೧ ಮಾಸಿ, ಜಾಜೀಕಾಯಿಪುಡಿ ೪ ಗುಂಜಿ, ಸಕ್ಕರಿ ೨ ಮಾಸಿ+ ತುಪ್ಪ ೨ ಮಾಸಿ ಇದರಲ್ಲಿ ಕೇರಿನ ೪ ಹನಿ ಎಣ್ಣಿ ಹಾಕಬೇಕು. ಇದರಿಂದ ಆಮಾಂಶ ಕೂಡಲೇ ನಿಲ್ಲುತ್ತದೆ.

ಕಷಾಯಃ— ಸುಂಟಿ, ಹವೀಜ, ಬಡೇಸಪ್ಪು, ಜೇಕಿನಗಡ್ಡಿ, ಬಾಳದ ಬೇರು, ಮತ್ತು ಬಿಲ್ವಗಳ ೩ ಕಷಾಯ ತಕ್ಕೊಳ್ಳಬೇಕು. ಆವು ಹೆಚ್ಚಿದ್ದಲ್ಲಿ ಕನಕಸುಂದರ ೪ ಗುಂಜಿ, ಕಪರ್ದಿಕ ೪ ಗುಂಜಿ, ಎರಡು ವೇಳೆ ಬಿಸಿನೀರಲ್ಲಿ. ಕುಟಜಾರಿಷ್ಟ ೨ ತೊಲಿ+ನೀರು ೨ ತೊಲಿ, ೨ ವೇಳೆ ಊಟದ ನಂತರ. ಈ ವಿಕಾರ ೧೦–೨೦ ವರ್ಷಗಳವರೆಗೂ ಇರಬಲ್ಲದು. ಇಂಥ ಹಳೇ ತರಹ ದಲ್ಲಿ ರಸಪರ್ಪಟಿ ೨ ಗುಂಜಿ+ಶೌಕ್ತಿಕ ೪ ಗುಂಜಿ ೪ ಸಲ. ಇದರಲ್ಲಿಯೇ ಪಾಂಡುರೋಗಕೂಡಿದ್ದರೆ ಲೋಹಪರ್ಪಟಿ ಒಂದೊಂದು ಗುಂಜಿ ಮತ್ತು ಪಂಚಾಮೃತ ಪರ್ವಟಿ ೧ ಗುಂಜಿ, ಇವುಗಳೆರಡನ್ನೂ ಒಮ್ಮೆ ಒಂದು ಮತ್ತೊಮ್ಮೆ ಮತ್ತೊಂದರಂತೆ ತಕ್ಕೊಳ್ಳಬೇಕು. ಆಯುರ್ವೇದೀಕ ಇಂಜಕ್ಶನ್ನ. ಬೇಲ ೧ ಸಿ. ಸಿ. ನರದಲ್ಲಿ ಚುಚ್ಚುವದು.

**ಆಹಾರಃ**— ಮಜ್ಜಿಗೆ, ಮೊಸರು, ಕಿತ್ತಳೇಹಣ್ಣಿನರಸ, ಸೇಬು, ಆಮಸೋಲಸಾರು, ಮಜ್ಜಿಗೆಅನ್ನ.

**ಅ್ಯಲೋಪಥಿಃ**— ಕರುಳಿಗೆ ಶಕ್ತಿತಂದುಕೊಟ್ಟು ಅ್ಯಮೀಬಾ ಕ್ರಿಮಿಯನ್ನು ಕೊಲ್ಲುವದರ ಕಡೆಗೇ ಚಿಕಿತ್ಸೆಯ ಒಲವಿರುತ್ತದೆ. ಎಮೆಟಿನ್ ಹೈಡ್ರೋಕ್ಲೋರಾಯಿಡ್ ೧ ಗ್ರೇನ್. ೧ ಸಿ. ಸಿ ಯನ್ನು ಮಾಂಸಖಂಡದಲ್ಲಿ ಚುಚ್ಚುತ್ತಾರೆ. ಇದೊಳ್ಳೆ ಪ್ರಭಾವ ಶಾಲಿಯಾಗಿದೆ. ರೋಗವು ಜೋರಾಗಿದ್ದಾಗ ೬ ದಿನಗಳ ವರೆಗೂ ಈ ಮದ್ದು ಚುಚ್ಚುತ್ತಾರೆ. ಇದರ ಜೊತೆಯಲ್ಲಿ ಎಮೆಟಿನ್, ಬಿಸ್ಮತ್ ಮತ್ತು ಆಯೋಡಾಯಿಡ್‌ಗಳನ್ನು ಹೊಟ್ಟೆಗೆ ಕೊಡುತ್ತಾರೆ. ಈ ಮಿಶ್ರಣದ ಗುಳಿಗೆಗಳೂ ಸಿಗುತ್ತವೆ. ೧೦ ರಿಂದ ೧೫ ವರ್ಷಗಳ ಮಕ್ಕಳಿಗೆ ⅔ ಗ್ರೇನ್‌ಇನ್ ೧ ಸಿ. ಸಿ.ಯಂತೆ, ಹತ್ತರೊಳಗಿನ

ಹುಡುಗರಿಗೆ ಮೇಲಿನ ಚುಚ್ಚ ಮದ್ದನ್ನು ೨ c. c. ಯಂತೆ ಕೊಡಬೇಕು. ಮಕ್ಕಳಿಗೆ ಎಮೆಟಿನ್‌ದ ಪ್ರಮಾಣ ಹೆಚ್ಚಾದರೆ ಕಾರಿಕೆ ಶುರುವಾಗಿ ಕೇಸು ಕೈ ಬಿಡುತ್ತದೆ. ಎಕ್ಸಟ್ರ್ರೆಟ್ ಕುರ್ಚಿ ಅಥವಾ ಕುರ್ಚಿಸಿನದ ಗುಳಿಗೆಗಳನ್ನೂ ಕೊಡುತ್ತಾರೆ. ಲಿವ್ಹರಆಪ್‌ಸೆಸ್‌ದ ಮೇಲೆ ಎಮೆಟಿನ್ ಮತ್ತು ಕುಟಜ ಕಲ್ಪಗಳನ್ನು ಉಪಯೋಗಿಸುವದುಂಟು.

**ಬಾಯೋಕೆಮಿಕ್:—** ಕಾಲೀಮೂರ್ ಇದು ಮುಖ್ಯ ಔಷಧಿ. ಅಲ್ಲದೆ ನೇ. ಫಾ, ಫೇ. ಫಾ, ಕಾ. ಫಾ, ಕಲ್ಕೇ. ಫಾ, ಇತ್ಯಾದಿಗಳನ್ನು ಅವಸ್ಥೆಗೆ ತಕ್ಕಂತೆ ಕೊಡುವದು.

## ಬ್ಯಾಸಿಲರಿ ಡಿಸೆಂಟರಿ

**ಸಾಮಾನ್ಯ ವರ್ಣನೆ:—** ಇದೊಂದು ಭಯಂಕರ ರೋಗವಾಗಿದೆ. ಹೊತ್ತಿನಲ್ಲಿಯೇ ಯೋಗ್ಯಉಪಚಾರವಾಗದಿದ್ದರೆ ರೋಗಿ ಕೈ ಬಿಡುವದು ಖಂಡಿತ. ರಾಡಿ ನೀರಿನ ಮುಖಾಂತರ ಈ ಕ್ರಿಮಿಗಳು ಹೊಟ್ಟೆಯಲ್ಲಿ ಸೇರುತ್ತವೆ. ಈ ಕ್ರಿಮಿಗಳನ್ನು ಶಿಗಾ ಮತ್ತು ಫ್ಲೆಕ್‌ಸನರ ಎಂಬ ಜಪಾನಿನ ಪಂಡಿತರು ಶೋಧಿಸಿದ್ದಾರೆ. ಈ ಕ್ರಿಮಿಗಳಲ್ಲಿ ಅನೇಕ ಜಾತಿಗಳುಂಟು. (XYZ ಇ) ಇದು ಅಂಟುರೋಗವಾಗಿದ್ದು ನೊಣಗಳ ಮೂಲಕ್ಕೆಎಲ್ಲೆಡೆಗೂ ಹಬ್ಬುವದು. ಮಳೆಗಾಲದ ಆರಂಭಕ್ಕೆ ಇದರ ಪಿಡುಗು ಹಬ್ಬುತ್ತದೆ.

**ಕಾಲಸಂಪ್ರಾಪ್ತಿ:—** ಕರುಳಿನ ಒಳಮೈಯಲ್ಲಿ ಈ ಕ್ರಿಮಿಗಳ ದಾಳಿಯಾಗಿ ಅಲ್ಲಿ ಹುಣ್ಣುಗಳಾಗುತ್ತವೆ.

**ಲಕ್ಷಣಗಳು ಮತ್ತು ಭಾವನೆ:—** ಹೊಟ್ಟೆ ಮುರಿದು ಮತ್ತೆ ಮತ್ತೆ ಶೌಚಕ್ಕೆ ಆಗುತ್ತದೆ. ೬೦-೮೦- ರ ವರೆಗೂ ಓಡಾಡುತ್ತಾರೆ. ರಕ್ತ ಬಹಳ ಬೀಳುತ್ತದೆ. ಆಮ್ಯಪ್ರಮಾಣದಿಂದ ಮಲ ಕಮ್ಮಿ ಇರುತ್ತದೆ. ಕೊನೆ ಕೊನೆಗಂತೂ ತಿಳಿಯದೇ ರಕ್ತಬೀಳತೊಡಗುತ್ತದೆ. ಹೊಟ್ಟೆಯಲ್ಲಿ ಶೂಲಿಬರುವದರಿಂದ ರೋಗಿ ತಿಣುಕುತ್ತಾನೆ. ಒಮ್ಮೊಮ್ಮೆ ಸ್ವಲ್ಪ ಆಮ ಬೀಳುತ್ತದೆ. ಜ್ವರ ೧೦೦--೧೦೩ ರವರೆಗೆಇರುತ್ತವೆ. ಅಸಮಾಧಾನ, ನೀರಡಿಕೆ, ಸುಸ್ತು

ಮಳಮಳಿಕೆ, ಕಾರಿಕೆಗಳು ಕಂಡುಬರುತ್ತವೆ. ಕೊನೆಯಲ್ಲಿ ಹೃದಯ ವಿಕೃತಿ ಅಥವಾ ಕರುಳಿಗೆ ತೂತು ಬಿದ್ದು ರೋಗಿ ಅಪ್ಪಣೆ ತಕ್ಕೊಳ್ಳುತ್ತಾನೆ.

## ಭೇದಕ ನಿದಾನ

ಅಮೆಬಿಕ್ ಬ್ಯಾಸಿಲರಿ

(೧) ಭೇದಿ ೨೦-೩೦...................೬೦-೮೦

(೨) ಮಲ ಹೆಚ್ಚಾಗಿರುತ್ತದೆ.........ಕಮ್ಮಿ ಇರುತ್ತದೆ.

(೩) ಜ್ವರವಿರುವದಿಲ್ಲ.................ಜ್ವರವಿರುತ್ತದೆ. ೧೦೩.

(೪) ಅಶಕ್ತಿ ಇಲ್ಲ.......................ಬಹಳ ಅಶಕ್ತಿ

(೫) ಕ್ರಿಮಿ ಅಮೀಬಾ..................ಬ್ಯಾಸಿಲಸ್

(೬) ಯಕೃತ್ ವಿದ್ರಧಿ.................ಇಲ್ಲ.

## ಚಿಕಿತ್ಸೆ

**ಆಯುರ್ವೇದಃ**-ಸರ್ವಾಂಗ ಸುಂದರ ೨ ಗುಂ+ಶೌಕ್ತಿಕ ೪ ಗುಂ ನಾಲ್ಕು ಚೀಟು ಬಿಸಿನೀರಲ್ಲಿ. ಹೊಟ್ಟೆಯಲ್ಲಿ ಬಹಳ ಶೂಲಿಃ- ಅಗಸ್ತಿ ಸೂತರಾಜ ೨ ಗುಂಜಿ+ಕಪರ್ದಿಕ ೪ ಗುಂಜಿ ೪ ಚೀಟು ಮಜ್ಜಿಗೆಯಲ್ಲಿ.

**ವಾತಭೂಯಿಷ್ಟತಾಃ**–ಬಿಸಿಹಾಲಿನಲ್ಲಿ ಅಮಸೋಲ ಮೇಣ ಹಾಕಿ ಕೊಡಬೇಕು.

**ಮಾತ್ರಾ ಬಸ್ತಿಃ**–ಪಿಚಕಾರಿ. ಹಾಲು ೧ ತೊಲೆ, ಸಹಚರ ತೈಲ ೧ ತೊಲೆ ಕೂಡಿಸಿ ಕೊಡಬೇಕು.

**ಹಳೇತರಹದಲ್ಲಿಃ**-ಪಂಚಾಮೃತ ಪರ್ಪಟಿ, ರಸಪರ್ಪಟಿ, ಸುವರ್ಣ ಪರ್ಪಟಿ, ಲೋಹ ಪರ್ಪಟಿ ಮುಂತಾದವು.

**ಅನುಪಾನಃ**-ಬಿಲ್ವಪತ್ರೀಕಾಯಿಯ ಗುಳಂಬದಲ್ಲಿ.

**ಪಥ್ಯಾ ಪಥ್ಯಃ**-ಅಮೇಬಿಕ್ ಡಿಸೆಂಟರಿಯಲ್ಲಿ ಹೇಳಿದಂತೆ.

**ಅ್ಯಲೋಪಥಿಃ**-(೧) ಎಂಟಿಡಿಸೆಂಟರಿಕ್‌ಸಿರಂ ಇಂಜಕ್ಶನ್ ೨೦-೪೦ c. c. ನರದಲ್ಲಿ. (ಇದನ್ನು ಒಳ್ಳೇ ಎಚ್ಚರಿಕೆಯಿಂದ ಕೊಡಬೇಕು. ತಪ್ಪಿದಲ್ಲಿ

ಅಶಕ್ತಿ ಬರುವ ಸಂಭವವಿರುತ್ತದೆ.) (೨) ಸೋಡಿಯಂ ಸಲ್ಫೇಟ್. ದೊಡ್ಡ ಪ್ರಮಾಣದಲ್ಲಿ. ಹೊಟ್ಟೆಗೆ ಕೊಡುತ್ತಾರೆ. (೩) ಎನೆಮಾ. ಪೊಟ್ಯಾಶಂ ಪರಮಾಂಗನೇಟದ ಮಿಶ್ರಣವನ್ನು ಹನಿಯ ಪ್ರಮಾಣದಂತೆ ಕೊಡುತ್ತಾರೆ. (೪)ಮಂದನಾಡಿ. ಸಲಾಯಿನ್ ಸೋಲ್ಯುಶನ್+ಗ್ಲುಕೋಜಗಳನ್ನು ಚುಚ್ಚುತ್ತಾರೆ(೫)ಹೃದಯ ದೌರ್ಬಲ್ಯ. ಡಿಜಿಟ್ಯಾಲಿನ್ ೧ ಸಿ.ಸಿ. ಮಾಂಸಖಂಡದಲ್ಲಿ.

**ಜ್ವರ ಮತ್ತು ಬಡಬಡಿಕೆ ಬಹಳಿದ್ದರೆ:—** ಬರ್ಫಿನ ಚೀಲವನ್ನು ಹಣೆಯ ಮೇಲೆ ಇಡಬೇಕು.

**ಬಾಯೋಕೆಮಿಕ್:—** ಕಾ-ಫಾ, ಮತ್ತು ಫೇ-ಫಾ ಗಳನ್ನು ಅದಲು ಬದಲಿಸಿಕೊಡಬೇಕು.

# ವಿಷೂಚಿಕಾ

## Cholera.................ಕಾಲರಾ

**ಸಾಮಾನ್ಯವರ್ಣನೆ:**—ಕೆಲವೇ ಗಂಟೆಗಳಲ್ಲಿ ಮನುಷ್ಯನನ್ನು ಕೊಲ್ಲುವ ರೋಗಗಳಲ್ಲಿ ವಿಸೂಚಿಕಾ ಅಂದರೆ ಕಾಲರಾಬೇನೆ ಪ್ರಮುಖವಾದುದು. ಇದೊಂದು ಅತಿ ಭಯಂಕರವಾದ ಅಂಟುರೋಗ. ಪಿಡುಗಿನರೂಪವಾಗಿ ಬರುತ್ತದೆ. ಪಚನಸಂಸ್ಥೆಯಲ್ಲಿ ಮೊದಲಿಗೆ ಇದು ಹುಟ್ಟಿಕೊಳ್ಳುತ್ತದೆ ಯಾದರೂ ಉಪದ್ರವಗಳು ಮಾತ್ರ ಸಾರ್ವದೇಹಿಕವಾಗಿರುತ್ತವೆ. ಕೆಟ್ಟ ನೀರಿನಿಂದಾಗಿ ಇದು ಹುಟ್ಟಿಕೊಳ್ಳುತ್ತದೆ. ಭಾರತದಲ್ಲಿ ಈ ಬೇನೆಗೆ ವರ್ಷಂ ಪ್ರತಿ ಅನೇಕ ಜನ ಬಲಿಯಾಗುತ್ತಾರೆ. ಯಾತ್ರಾ ಸ್ಥಳಗಳಲ್ಲಿ ಅಂದರೆ ಲಕ್ಷಗಟ್ಟಲೆ ಜನರು ಯಾತ್ರೆಗೆಂದು ಕೂಡಿ ಪವಿತ್ರವೆಂದು ತಿಳಿದು ಮೀಯುವ ತೀರ್ಥಗಳಲ್ಲಿ, ಪುಣ್ಯಕ್ಷೇತ್ರಗಳಲ್ಲಿಯೇ ಹುಟ್ಟುವ ಈ ರೋಗ ಸಾವಿರಗಟ್ಟಲೆ ಭಾವಿಕರಿಗೆ ಶಾಶ್ವತ ಮುಕ್ತಿಯನ್ನು ಕೊಟ್ಟುಬಿಡುತ್ತದೆ.

**ಕಾರಣಮಿಮಾಂಸೆ:—**ಕಾಲರಾ ಬ್ಯಾಸಿಲಸ್ ಎಂಬ ಹೆಸರಿನ ದುಷ್ಟ ಕ್ರಿಮಿಗಳಿಂದ ಈ ಬೇನೆ ಹುಟ್ಟುತ್ತದೆ. ಈ ಕ್ರಿಮಿಗಳು ಸ್ವಲ್ಪವಿರಾಮ

ದಂತೆ ಇದ್ದು ನಿಂತ ಮಲಿತ ನೀರಿನಲ್ಲಿ ಬೆಳೆಯುತ್ತವೆ. ಆಷಾಢ ಮಾಸದ ಸುಮಾರಿಗೆ ಮಳೆಯ ನೀರು, ಹಸೀಹಾಲು, ಕೊಳೆತಹಂಣು, ಹುಳಿತ ಪಲ್ಲೆ ಹಳಸಿದ ಮಾಂಸ ಮೀನ,ನೊಣಗಳು ಕೂತ ಮೇವಾ ಮಿಠಾಯಿ, ತಂಪಾದ ಪಾನೀಯ ಮೊದಲಾದವುಗಳದ್ವಾರಾ ರೋಗ ಹಬ್ಬುತ್ತದೆ. ಮೇಲಾಗಿ ರೋಗಿಯ ಮಲಮೂತ್ರ ಮತ್ತು ಕಾರಿಕೆಗಳ ಮೇಲೆ ಕುಳಿತ ನೊಣಗಳು ರೋಗವನ್ನು ಹಬ್ಬಿಸುವ ಪುಣ್ಯಕಾರ್ಯ(?)ವನ್ನು ಮಾಡುತ್ತಲೇ ಇರುತ್ತವೆ. ಈ ಬೇನೆಯ ವೈಶಿಷ್ಟ್ಯವೆಂದರೆ ಕ್ರಿಮಿಗಳು ತಂಪು ಹಾಗು ಅಪಕ್ವ ಪದಾರ್ಥಗಳ ಮೂಲಕವಾಗಿಯೇ ಹೊಟ್ಟೆಯನ್ನು ಹೊಗುವದು. ಕ್ರಿಮಿಗಳು ಪ್ರವೇಶಮಾಡಿದ ಮಾತ್ರಕ್ಕೆ ರೋಗ ಬಂದೇ ಬರುವದೆಂದೇನಿಲ್ಲ. ಜಠರಾಗ್ನಿ ಪ್ರದೀಪ್ತವಾಗಿದ್ದರೆ ಕ್ರಿಮಿಗಳು ಭಸ್ಮವಾಗಿ ಹೋಗುತ್ತವೆ. ಆದರೆ ಅಜೀರ್ಣವೇ ಮೊದಲಾದ ಕಾರಣಗಳಿಂದಾಗಿ ಕೋಷ್ಠಾಗ್ನಿ ಮಂದವಾಗಿದ್ದರೆ ಮಾತ್ರ ಖಂಡಿತವಾಗಿಯೂ ರೋಗ ಬಂದೇ ಬರುತ್ತದೆ. ವಿಶೇಷವಾಗಿ ಮಾಂಸಾಹಾರಿಗಳಲ್ಲಿ ಈ ಬೇನೆ ಬಲಿಯುತ್ತಿದ್ದುದು ಕಂಡು ಬರುತ್ತದೆ.

**ಕಾಲಸಂಪ್ರಾಪ್ತಿಃ—** ಮೂರುತಾಸುಗಳಿಂದ ಮೂರುದಿನಗಳ ಪರ್ಯಂತರ.

**ಲಕ್ಷಣಗಳು ಮತ್ತು ಭಾವನೆ—ಈ** ರೋಗದಲ್ಲಿ ಮೂರು ಅವಸ್ಥೆಗಳಿರುತ್ತವೆ. ಅವುಗಳ ಲಕ್ಷಣ ಈ ಕೆಳಗಿನಂತೆ.

**[ಅ]ಪ್ರಥಮಾವಸ್ಥೆ [೧] ವಾಂತಿಃ—** ವಿಕಾರಕ್ಕಿಡುವಾಗ ಮೊದಲು ದೊಡ್ಡ ದೊಡ್ಡ ವಾಂತಿಗಳಾಗುತ್ತವೆ. ಭಾರೀ ಅಶಕ್ತಿ ಬಂದು ಬಿಡುತ್ತದೆ. ಸಂಣಮಕ್ಕಳಂತೂ ಗೋಣು ಚಲ್ಲಿಬಿಡುತ್ತವೆ. ಮುಂದೆ ಬರಿಯ ಒಣ ಓಕರಿಕೆಗಳು ಬರುತ್ತವೆ, ಕರಳುಗಳನ್ನು ಎಳೆದ ಹಾಗೆ ಹೊಟ್ಟೆಯಲ್ಲಿ ಭಯಂಕರ ಶೂಲಿ ಹುಟ್ಟುತ್ತದೆ.

**(೨) ಭೇದಿಃ-**ಇದುಮಹತ್ವದ ಲಕ್ಷಣ. ಕುದುರೆಯ ಉಚ್ಚೆ ಅಥವಾ ಅಕ್ಕೀಕಚ್ಚಿನ ಬಣ್ಣದ ದೊಡ್ಡ ದೊಡ್ಡ ಭೇದಿಗಳಾಗುತ್ತವೆ. ಹೊಟ್ಟೆಯಲ್ಲಿ ಒರಟೆ ಬರುತ್ತದೆ. ೧—೨ ಸಲ ಜಾಡಿಸಿದನಂತರ ಕೂಡಲೇ ರೋಗಿ ಹಾಸಿಗೆ ಹಿಡಿಯುತ್ತಾನೆ. ಆತನ ಮುಖ ಲಕ್ಷಣ ಭಯಂಕರವಾಗುತ್ತದೆ.

(ಆ) ದ್ವಿತಿಯಾವಸ್ಥೆ:– ವಾಂತಿ ಭೇದಿಗಳಿಂದಾಗಿ ದೇಹದಲ್ಲಿಯ ಜಲ ತತ್ವ ಹೊರಬಿದ್ದು ಹೋದಕಾರಣ ರೋಗಿಗೆ ಬಾಯಾರಿಕೆ ಶುರುವಾಗುತ್ತದೆ. "ನೀರು; ನೀರು" ಎಂದು ಕೂಗಿಕೊಳ್ಳುತ್ತಾನೆ. ನೀರು ಕುಡಿದರೆ ಮತ್ತೆ ವಾಂತಿಗೆ ಆರಂಭವಾಗುತ್ತದೆ. ದೇಹದಲ್ಲಿಯ ಪ್ರತಿಯೊಂದು ಅವಯುವದಲ್ಲಿ ನೀರಿಲ್ಲದಂತಾದ್ದರಿಂದ ಅವು ಮುದುಡಿದಂತಾಗುತ್ತವೆ. ಕಣ್ಣು ಗುದ್ದು ಸೇರುತ್ತವೆ. ತುಟಿಗಳು ಕಪ್ಪು ನೀಲೀಬಣ್ಣದವಾಗುವವು. ಮೋರೆ ಕಪ್ಪಿಟ್ಟು ಹೋಗುತ್ತದೆ. ಮೈ ತೊಗಲು ಬಾಳೀದಿಂಡಿನಂತೆ ತಣ್ಣಗೆ ಹತ್ತುವದಲ್ಲದೆ ಬಹಳ ಬೆವರುತ್ತದೆ. ಮೈ ಉಷ್ಣತೆ ೯೫ ರ ವರೆಗೂ ಇಳಿಯುತ್ತದೆ. ಜೇನೆಯ್ಯ ಕಸುವು ಹೆಚ್ಚಿದಂತೆಲ್ಲ ಕೈ,ಕಾಲು, ಹೊಟ್ಟೆ ಹೃದಯಗಳಲ್ಲಿ ವರಟೆಗಳು ಬರುತ್ತವೆ. ಈ ವರಟೆ ಬಹಳ ತ್ರಾಸಕೊಡುತ್ತವೆ. ರೋಗಿ ದೊಡ್ಡ ದೊಡ್ಡಕಾಗಿ ಕೂಗಿಕೊಳ್ಳುತ್ತಾನೆ. ಎದೆಯಲ್ಲಿ ವರಟೆಯ ವೇದನೆ ಹೆಚ್ಚಾದವೆಂದರೆ ಕೊನೆಗೆ ಹೃದಯಕ್ರಿಯೆ ನಿಂತು ರೋಗಿ ತೀರಿಕೊಳ್ಳುತ್ತಾನೆ. ರಕ್ತದಲ್ಲಿಯ ನೀರಿನ ಅಂಶ ಕಡಿಮೆಯಾಗುವದರಿಂದ ಮೂತ್ರಪಿಂಡವೂ ಕೆಡುತ್ತದೆ. ಉಚ್ಚೆ ಪೂರಾ ಕಟ್ಟಿಹೋಗುವದಿದು ಕಾಲರಾದ ವಿಶೇಷ ಲಕ್ಷಣ. ಮೂತ್ರ ಪ್ರವೃತ್ತಿ ಯಾಗುವ ವರೆಗೆ ರೋಗಿ ಬದುಕುವನೆಂದು ಆಶೆಮಾಡಬಾರದು ಬಹಳವಾಗಿ ಎರಡನೇ ಅವಸ್ಥೆಯಲ್ಲಿಯೇ ರೋಗಿ ಕೈ ಬಿಡುವ ಸಂಭವ ಹೆಚ್ಚು.

(ಇ) ತೃತಿಯಾವಸ್ಥೆ:–ಶರೀರದಲ್ಲಿ ಪ್ರತೀಕಾರ ಶಕ್ತಿಪ್ರಬಲವಾಗಿದ್ದು ಹೃದಯ ಬಲವಾಗಿದ್ದರೆ ಮಾತ್ರ ರೋಗಿ ಈ ಮೂರನೇ ಅವಸ್ಥೆಯನ್ನು ಕಾಣಬಹುದು. ವಾಂತಿ ಭೇದಿಗಳು ನಿಲ್ಲುತ್ತವೆ. ವರಟೆಗಳು ಕಡಿಮೆಯಾಗುತ್ತವೆ. ಜ್ವರದ ಪ್ರಮಾಣ ಹೆಚ್ಚುತ್ತದೆ. (೧೦೦) ಮೂತ್ರಪಿಂಡದ ಕ್ರಿಯೆ ಸುಧಾರಿಸಿ ಮೂತ್ರವಾಗಹತ್ತುತ್ತದೆ. ಮೊದಲಿಗೆ ಮೂತ್ರ ಕೆಂಪು ಇದು ಉರಿಯುತ್ತ ಬರುತ್ತವೆ. ನೀರು ಹೊಟ್ಟೆಯಲ್ಲಿ ನಿಂತು ಹಸಿವೆಯ ನೆನಪಾಗುತ್ತದೆ.

ನಿದಾನ:-ವಾಂತಿ ಮತ್ತು ಬಿಳಿಬಣ್ಣದ ಜುಲಾಬು ಹಾಗು ಮೂತ್ರ ಕಟ್ಟುವುದು ಈ ಲಕ್ಷಣಗಳಿಂದ ನಿದಾನಮಾಡಲು ಸುಲಭವಾಗುತ್ತದೆ.

ಊರಲ್ಲಿ ಈ ಪಿಡುಗು ಇಲ್ಲದಾಗ ನಿದಾನಮಾಡುವುದು ಸ್ವಲ್ಪ ಕಠಿಣ. ಕ್ವಚಿತ್ ಪ್ರಸಂಗದಲ್ಲಿ ರೋಗಿಯು ಅಜ್ಞಾನ ಮತ್ತು ಮೂರ್ಖ ತನಗಳಿಂದಲೂ ನಿದಾನಮಾಡುವದು ತಡವಾಗಿ ರೋಗಿ ಸಾಯುತ್ತಾನೆ. ಸುಪ್ತ ಲಕ್ಷಣ ವಿಸೂಚಿಕಾ (ಕಾಲರಾಸಿಕ್ಕಾ) ಎಂಬದೊಂದು ಪ್ರಕಾರವಿದೆ. ಇದರಲ್ಲಿ ಕಾರೋಣ, ಜಾಡಿಸೋಣ ಗಳಿರುವದಿಲ್ಲ; ಒಮ್ಮಿಂದೊಮ್ಮೆ ಶಕ್ತಿ ಪಾತವಾಗಿ ಹೋಗುತ್ತದೆ. ವರಟಿಬರೋಣ, ಕಣ್ಣು ಒಳಗೆ ಸೇರೋಣ, ಉಚ್ಚಿ ಕಟ್ಟೋಣವೇ ಮೊದಲಾದ ಇತರ ಲಕ್ಷಣಗಳಿಂದ ನಿದಾನ ಮಾಡಬೇಕು.

**ಭೇದಕ ನಿದಾನಃ**—ಕೆಲವು ವಿಕಾರ ಮತ್ತು ವಿಷಬಾಧೆಯಲ್ಲಿಯೂ ಕಾಲರಾದಂಥ ಲಕ್ಷಣಗಳು ಸಂಭವಿಸುತ್ತವೆ. ಆ ವಿಕಾರಗಳಿಂದ ಕಾಲರಾದ ಭೇದಕ ನಿದಾನವನ್ನು ಗೊತ್ತುಮಾಡಿಕೊಳ್ಳಬೇಕಾಗುತ್ತದೆ.

**(ಅ)ಅನ್ನಾಶಯ ಶೋಥ:**— ( ಎಕ್ಯೂಟ ಗ್ಯಾಸ್ ಟ್ರಾಯಿಟಿಸ್ ) ಯಾವಾಗಲೂ ಹೆಚ್ಚಿಗೆ ಊಟ ಮಾಡುವದರಿಂದ ಮೇಲಿಂದಮೇಲೆ ಅಜೀರ್ಣ ವಾಗುತ್ತಿದ್ದು ಆದರಲ್ಲಿಯೇ ಮಿಷ್ಟಾನ್ನವನ್ನುಂಬುವದರಿಂದ ಜಠರಕ್ಕೆ ಬಾವು ಬಂದು ವಾಂತಿ ಭೇದಿಗಳಾಗುತ್ತವೆ. ಇಂಥಲ್ಲಿ ಬೆಳ್ಳಗೆ ಜಾಡಿಸುತ್ತಿರುವದಿಲ್ಲ.

(ಆ) ಹಲವಾರು ದಿನ ಡಬ್ಬಿಯಲ್ಲಿ ಮುದ್ರೆ ಮಾಡಿಟ್ಟ ಅನ್ನವನ್ನು ತಿನ್ನುವದರಿಂದ ಆಗುವ ವಿಷಬಾಧೆ. ಈ ಅನ್ನವನ್ನು ಡಬ್ಬಿಯೊಡೆದೊಡ ನೆಯೇ ತಿಂದು ತೀರಿಸಿಬಿಡಬೇಕಾಗುತ್ತದೆ. ಆದರೆ ಊಟದ ಮನೆಗಳಲ್ಲಿ ಇಂಥ ಆಹಾರ ಮರುದಿನವೂ ಬಡಿಸಲ್ಪಟ್ಟು ಆ ವಿಷದ ಪರಿಣಾಮವಾಗಿಯೂ ವಾಂತಿ ಭೇದಿಗಳು ಶುರುವಾಗುತ್ತವೆ.

(ಇ) **ವಿಷಬಾಧೆಃ**— ಸೋಮಲ ಅಥವಾ ಇದರಂತಹ ಬೇರೆ ಪ್ರಾಣ ಘಾತಕ ವಿಷ ಹೊಟ್ಟೆಯಲ್ಲಿ ಹೋದರೆ ವಾಂತಿ ಮತ್ತು ಭೇದಿಗಳಾಗುತ್ತವೆ. ಇಂಥಲ್ಲಿ ವಿಷತಿಂದ ಸಂಗತಿ ನಿದಾನ ಮಾಡಲು ಉಪಯೋಗವಾಗುತ್ತದೆ. ಆದರೆ ಕಾಲರಾದ ಪಿಡಿಗಿನಲ್ಲಿಯೇ ಸೋಮಲ ವಿಷ ತಿಂದಿದ್ದರೆ ಆಗ ಅದನ್ನು ಕಂಡು ಹಿಡಿಯುವದು ಕಷ್ಟ. ವಿಷಬಾಧೆಯಾದಾಗ ಹೊಟ್ಟೆಯಲ್ಲಿ ಭಯಂ

ಕರ ಉರಿ ಇರುವಂತೆ ಕಾಲರಾದಲ್ಲಿ ಇರುವದಿಲ್ಲ. ಹಾಗು ರಕ್ತ ಮಲಗಳ ಪರೀಕ್ಷೆಯಿಂದಲೂ ವಿಷಬಾಧೆಯನ್ನು ನಿದಾನ ಮಾಡಲು ಬರುತ್ತದೆ.

**ಸಾಧ್ಯಾಸಾಧ್ಯತ್ವ:**— ಈ ರೋಗ ಕಷ್ಟಸಾಧ್ಯವೆಂಬಲ್ಲಿ ಅನುಮಾನವೇ ಇಲ್ಲ. ಕೇವಲ ಅರ್ಧ ಗಂಟೆಯಲ್ಲಿ ಪ್ರಾಣಹೋದ ಉದಾಹರಣೆಗಳೂ ಇವೆ. ಅದರಂತೆ ಕೂಡಲೇ ಯೋಗ್ಯ ಉಪಚಾರವಾಗಿ ರೋಗಿ ಬದುಕಿದ ಅನುಭವವೂ ಇದೆ. ಸಾಧ್ಯ ಅಸಾಧ್ಯತ್ವಗಳು ಈ ಕೆಳಗಿನ ಸಂಗತಿಗಳನ್ನು ಅವಲಂಬಿಸಿವೆ.

(೧) **ಕಾಲಿಸಂಪ್ರಾಪ್ತಿ:**— ಕ್ರಿಮಿಗಳು ಹೊಟ್ಟೆಯನ್ನು ಹೊಕ್ಕ ಮೇಲೆ ಬೇನೆ ಎಷ್ಟು ಬೇಗ ಸುರುವಾಗುವದೋ ಆ ರೋಗವು ಅಷ್ಟೇ ಭಯಂಕರವಾಗಿರುತ್ತದೆ. ಮೂರು ತಾಸಿನಲ್ಲಿ ಸುರುವಾದರೆ ಸಾಯುವದು ಖಂಡಿತ. ಮೂರು ದಿನಗಳಮೇಲೆ ಸುರುವಾದರೆ ಬದುಕಬಹುದು.

(೨) **ಮತ್ತೆ ಬೇರೆ ವಿಕಾರಗಳು:**— ಅಂದರೆ ಅಪಚನ, ಪಾಂಡು, ಹೃದಯ ವಿಕೃತಿ ಮೊದಲಾದ ವಿಕಾರಗಳು ಮೊದಲೇ ಇದ್ದುದಾದರೆ ರೋಗ ಅಸಾಧ್ಯವೇ ಸೈ.

(೩) ಹೊತ್ತಿಗೇ ತಕ್ಕ ಉಪಚಾರವಾಗದೆಯಿದ್ದಲ್ಲಿಯೂ ರೋಗಿ ಸಾಯುತ್ತಾನೆ. ಲಕ್ಷಣಗಳ ತೀವ್ರತೆ ಹೆಚ್ಚಾಗುತ್ತ ಹೋಗಿ ಮೆದುಳಿನ ವಿಕಾರ ಸಂಭವಿಸಿದರೆ ತೀರಿಕೊಳ್ಳುತ್ತಾನೆ.

## ಚಿಕಿತ್ಸೆ

(ಅ) **ಪ್ರತಿಬಂಧಕ:**— ಇದರ ಪಿಡುಗು ಬಲು ಬೇಗ ಹಬ್ಬುತ್ತದೆ ಯಾದ್ದರಿಂದ ಪ್ರತಿಬಂಧಕ ಉಪಾಯಗಳನ್ನೂ ಅಷ್ಟೇ ಬೇಗನೇ ಕೈಕೊಳ್ಳ ಬೇಕಾಗುತ್ತದೆ. ಪಿಡುಗಿನ ಅನುಮಾನ ಬಂದೊಡನೆಯೇ ಕೆಳಗಿನ ಮಾತು ಗಳನ್ನು ಅವಶ್ಯವಾಗಿ ಆಚರಣೆಯಲ್ಲಿ ತರಬೇಕು.

(೧) ಕುದಿಸಿದ ನೀರನ್ನು ತಾಮ್ರದ ಪಾತ್ರೆಯಲ್ಲಿಟ್ಟುಕೊಂಡೇ ಕುಡಿಯ ಬೇಕು. ತಾಮ್ರದ ಪಾತ್ರೆಯ ನೀರು ಕ್ರಿಮಿನಾಶಕವಾಗಿರುತ್ತದೆಯೆಂದೇ ನಮ್ಮ ಪೂರ್ವಾಚಾರ್ಯರು ತಾಮ್ರವನ್ನು ಪವಿತ್ರವೆಂದು ಹೇಳಿದ್ದಾರೆ.

(೨) ಆಗಲೇ ಮಾಡಿದ ಬಿಸಿ ಬಿಸಿ ಅಡಿಗೆಯನ್ನು ಉಣ್ಣಬೇಕು. ಅಗ್ನಿಸಂಸ್ಕಾರವಾದ ಬಿಸಿಯಾಗಿರುವ ಯಾವದೇ ವಸ್ತುವಿನಲ್ಲಿ ಕಾಲರಾದ ಕ್ರಿಮಿಗಳು ಉಳಿಯುವದಿಲ್ಲ.

(೩) ಪೇರಲ, ಬಾಳಿ, ಮಾವು, ಮುಂತಾದ ಹಣ್ಣುಗಳನ್ನು ತಿನ್ನಕೂಡದು. ಹಸಿಹಾಲನ್ನೂ ಕುಡಿಯಬಾರದು.

(೪) ಪೇಟೆಯಿಂದ ತಂದ ಕಾಯಿಪಲ್ಲೆಗಳನ್ನು ನೀರಿನಲ್ಲಿ ಸ್ವಚ್ಛವಾಗಿ ತೊಳೆದು ಬೇಯಿಸಿ ತಿನ್ನಬೇಕು. ಸವತೀಕಾಯಿ, ಪಚ್ಚಡಿಗಳನ್ನು ತಿಂಡದ್ದರಿಂದ ಕಾಲರಾ ಬಂದ ಉದಾಹರಣೆಗಳುಂಟು. ಮಾರ್ಕೇಟಿನಲ್ಲಿ ಬೈಲಿಗಿಟ್ಟು ಮಾರುವ ತಿಂಡಿ ತಿನಿಸುಗಳನ್ನು ತಿನ್ನಬಾರದು.

(೫) ಮನೆ ಜಳಜಳವಾಗಿರಬೇಕು. ನೊಣಗಳು ಕಡಿಮೆಯಾಗುವಂತೆ ಉಪಾಯ ಕೈಕೊಳ್ಳಬೇಕು. ಎರಡುತುತ್ತು ಕಡಿಮೆಯಾಗಿಯೇ ಉಂಡು ಅಜೀರ್ಣವಾಗದಂತೆ ಪ್ರಕೃತಿಯನ್ನು ಚನ್ನಾಗಿ ಇಟ್ಟುಕೊಳ್ಳಬೇಕು.

(೬) ಎಂಟಿಕಾಲೆರಾವ್ಹೆಕ್ಸಿನ್‌ದ ಮದ್ದು ಚುಚ್ಚಿಸಿಕೊಳ್ಳಬೇಕು. ಇದೊಳ್ಳೇ ಪ್ರಭಾವೀ ಉಪಾಯ. ದೊಡ್ಡವರಿಗೆ ಒಂದು ಸಿ. ಸಿ. ಸಣ್ಣವರಿಗೆ ಅರ್ಧ ಸಿ. ಸಿ. ಕೊಡುತ್ತಾರೆ. ಇದರಿಂದಾಗಿ ರೋಗ ಹಬ್ಬುವದಿಲ್ಲ. ಭೀಮಸೇನೀ (ದೇಶೀ) ಕಪ್ಪುರ ೨ ಗುಂಜಿಯಂತೆ ದಿನಾಲೂ ಹೊಟ್ಟೆಯಲ್ಲಿ ತಕ್ಕೊಳ್ಳಬೇಕು. ರೋಗವನ್ನು ತಡೆಗಟ್ಟಲು ಮತ್ತು ಕ್ರಿಮಿಗಳನ್ನು ಕೊಲ್ಲಲು ಇದು ಉತ್ತಮ ಉಪಯೋಗವಾಗುತ್ತದೆ. ಕಾಲರಾದ ಪಿಡುಗು ಇದ್ದಾಗ ತೀವ್ರವಿರೇಚನ ಅಥವಾ ಜಂತಿನ ಪುಡಿ ತಕ್ಕೊಳಕೂಡದು.

**ರೋಗಿಯ ಶುಶ್ರೂಷೆ:—** ಇದು ಒಳ್ಳೇ ಮಹತ್ವದ ಮತ್ತೂ ಅಷ್ಟೇ ಕಠಿಣವಾದ ಕೆಲಸ. ಗಳಿಗೆ ಗಳಿಗೆಗಳಲ್ಲಾಗುವ ವಾಂತಿಭೇದಿಗಳಿಂದ ಬಹಳೇ ಅಸ್ವಚ್ಛತೆಗೆ ಇಟ್ಟುಕೊಂಡುಬಿಡುತ್ತಿದೆ. ಅದೆಲ್ಲಾ ಹೊಲಸು ತೆಗೆದು ನಿರ್ಜಂತುಕವಾಗಿ ಮಾಡಬೇಕು. ರೋಗಿಗೆ ವರಟ ಬರುತ್ತಿದ್ದು ಮೈಯ್ಯೆಲ್ಲಾ ಆಣೇಕಲ್ಲಿನಂತಾಗುವದರಿಂದ ಒಂದೇಸವನೆ ಅರಿವೆಯಿಂದ ಮೈ ಕಾಸ

ಬೇಕು. ಬಿಟ್ಟೂಬಿಡದೆ ಮೈ ಕಾಸುವದರಿಂದ ರೋಗಿ ಬದುಕಿಕೊಂಡ ಪ್ರತೀತಿ ಇದೆ.

(ಆ) **ಪ್ರತೀಕಾರಾತ್ಮಕ:—** ವಿಸೂಚಿಕಾ-ಕಾಲರಾ ಬೇನೆ ಬಹಳೇ ಭಯಂಕರವಾದುವೇನೋ ಹೌದು. ಆದರೂ ಬೇನೆ ಬಂದೊಡನೆ ಈ ಕೆಳಗಿನಂತೆ ಚಿಕಿತ್ಸೆ ಮಾಡಿದ್ದಾದರೆ ಖಂಡಿತವಾಗಿಯೂ ಯಶ ಪ್ರಾಪ್ತಿಯಾಗುತ್ತದೆ. ಸನ್ ೧೯೪೨-೪೩ ಮತ್ತು ೫೦ನೇ ಇಸ್ವಿಗಳ ಹುಬ್ಬಳ್ಳಿಯಲ್ಲಿಯ ಮೂರೂ ಭಾರೀ ಪಿಡುಗಿನಲ್ಲಿ ನೂರಾರು ರೋಗಿಗಳ ಮೇಲೆ ಯಶಸ್ವೀ ಚಿಕಿತ್ಸೆ ಮಾಡಿದ್ದರಿಂದ ಮೃತ್ಯುವಿನ ದವಡೆಯಲ್ಲಿ ಸಿಕ್ಕ ಅನೇಕರು ಬದುಕಿಕೊಂಡದ್ದು ಲೇಖಕನ ಅನುಭವದ್ದಾಗಿದೆ. ಆಯುರ್ವೇದಿಕ ಚಿಕಿತ್ಸೆ ಈ ಬೇನೆಗೆ ಒಳ್ಳೇ ಪ್ರಭಾವಿ ಎಂದು ನಿಶ್ಚಿತವಾಗುತ್ತದೆ. ಅಸಾಧ್ಯವೆಂದು ಅನೇಕ ಚಿಕಿತ್ಸಕರು ಕೈಬಿಟ್ಟ ರೋಗಿಗಳನ್ನು ಚಿಕಿತ್ಸೆ ಮಾಡಿದ್ದರಲ್ಲಿ ಬಹು ಸಂಖ್ಯರು ಗುಣಹೊಂದಿದರು. ನಿರಾಶರಾದ ಮನೆಯವರು,ರೋಗಿ ಹೆಣದಂತಾಗಿದ್ದಾನೆ, ನಾಡಿಗಳ ಬಡಿತ ನಿಂತುಹೋಗಿದೆ, ಮೈ ತಂಣಗೆ ಆಣೇಕಲ್ಲು, ಮಿಸುಕುವದೂ ಇಲ್ಲಾ, ಎಚ್ಚರಿಲ್ಲದಂಥ ಸ್ಥಿತಿಯಲ್ಲಿಯೂ ಉಸಿರಾಡುತ್ತಿದ್ದರೆ ತೀರಿತು. ಚಿಕಿತ್ಸೆಯನ್ನು ಕೈಕೊಳ್ಳುವದೇ. ಮತ್ತು ವಿಜಯವನ್ನು ದೊರಕಿಸುವದೇ. ಆದ್ದರಿಂದ ಎಂಥ ದಾರುಣ ಪರಿಸ್ಥಿತಿಯಲ್ಲಿಯೂ ಚಿಕಿತ್ಸಕರು ಧೈರ್ಯತಂದುಕೊಂಡು ನಿರಾಶರಾಗದೆ ಕೊನೆಯವರೆಗೂ ಉಪಚಾರ ಮಾಡಲೇಬೇಕು.

**ವಿಶೇಷ ಸೂಚನೆ:—** ಮೊದಲಿನಿಂದಲೂ ಪಾಂಡು ಅಥವಾ ಹೃದಯ ರೋಗವಿದ್ದವರಿಗೆ ಕಾಲರಾ ಬಲು ತ್ರಾಸದಾಯಕವಾಗುತ್ತದೆ. ಕ್ವಚಿತ್ತಾಗಿ ಮೃತ್ಯುವೂ ಸಂಭವಿಸುತ್ತದೆ. ಇಂಥ ಸ್ಥಿತಿಯಲ್ಲಿ ಪ್ರಭಾವಿಗಳಾದ ಆ್ಯಲೋಪಥಿಕ್ ಚುಚ್ಚುಮದ್ದುಗಳು ವಿಶೇಷ ಕೆಲಸ ಕೊಡುತ್ತವೆ. ಉದಾ:- ಹೃದಯ ವಿಕಾರದಲ್ಲಿ 'ಕೋರ್ಯಾಮಿನ್'ದಂಥ ಹೃದಯೋತ್ತೇಜಕ ಅಥವಾ ಪಾಂಡು ರೋಗದಲ್ಲಿ 'ಹಿಮೋಸಾಯಿಟೋಸಿರಂ'ದಂಥ ಚುಚ್ಚುಮದ್ದುಗಳನ್ನು ತತ್‌ಕ್ಷಣ ಕೊಡಬೇಕು. ಈ ಇಂಜಕ್ಶನ್ನುಗಳಿಂದ ರೋಗಿಯ ಪರಿಸ್ಥಿತಿಯಲ್ಲಿ ಕೂಡಲೇ ಸುಧಾರಣೆ ಕಂಡುಬರುವದಲ್ಲದೆ ಪ್ರಭಾವಿಯಾದ ಆಯುರ್ವೇದ ಚಿಕಿತ್ಸೆಯಿಂದ ರೋಗಿ ಪೂರಾ ಗುಣಹೊಂದಲು ಅವಕಾಶವುಂಟಾಗುತ್ತದೆ.

**ಔಷಧಿಗಳು:—** (೧) ಚಕ್ರಾಣಿ ಬೇರನ್ನು ನಿಂಬೇ ಹಂಣಿನ ರಸದಲ್ಲಿ ತೇದು ೨ ಮಾಸಿಯಂತೆ ೪ ಸಲ ಕೊಡಬಹುದು. ಆರಂಭಕ್ಕೆ ಮಾತ್ರ ಇದರ ಉಪಯೋಗವಾಗುತ್ತದೆ.

(೨) ಬೀಜಸಹಿತ ಯಾಲಕ್ಕಿಗಳನ್ನು ಸುಟ್ಟು ಮಾಡಿದ ಬೂದಿ ೧ ಮಾಸಿ+ಲಿಂಬೇ ಹಣ್ಣಿನ ಸಿಪ್ಪಿ ಸುಟ್ಟ ಬೂದಿ ೧ ಮಾಸಿ. ನೆಲ್ಲೀ ಕಾಯಿ ಗುಳಂಬ ೨ ತೊಲಿಯಲ್ಲಿ ಕೂಡಿಸಿಟ್ಟುಕೊಂಡು ಅರ್ಧ ತಾಸಿಗೊಮ್ಮೆಯಂತೆ ತುಸುತುಸು ನೆಕ್ಕಿಸಬೇಕು. ವಾಂತಿಯೇ ಹೆಚ್ಚಾಗಿದ ರೋಗದಲ್ಲಿ ಇದೊಳ್ಳೇ ಉಪಯೋಗಬೀಳುತ್ತಿದೆ.

(೩) ಹುಣಸೀಹಣ್ಣಿನ ರಾಡಿ ೬ ಔಂಸು + ಕೇರ ಎಣ್ಣಿ ೬ ಹನಿ ಹಾಕಿ ತಾಸಿಗೊಮ್ಮೆ ಅರ್ಧ ಔಂಸಿನಂತೆ ಕೊಡಬೇಕು.

(೪) ಹುಣಸೀ ಹುಳಿರಾಡಿ ೧೦ ತೊಲಿ, ಬಳ್ಳೊಳ್ಳಿ ಅರ್ಧ ತೊಲಿ, ಇಂಗು ೪ ಗುಂಜಿ + ಕೇರಿನ ಎಂಣಿ ೬ ಹನಿ. ಒಂದೊಂದು ತಾಸಿಗೆ ಒಂದೊಂದು ತೊಲಿಯಂತೆ ಕೊಡಬೇಕು,

(೫) ಅಮೃತಧಾರಾ=ಅಂದರೆ ಕರ್ಪೂರ ಮೆಂಥಾಲು, ಥೈಮಾಲ್, ಸಮಭಾಗಮಿಶ್ರಣ. ಇದನ್ನು ಎರಡೆರಡು ಹನಿಗಳಂತೆ ಸಕ್ಕರೆಯಲ್ಲಿ ಹಾಕಿ ಕೊಡಬೇಕು.

(೬) ದೇಶೀಶರೆ ೨೦ ತೊಲಿ ದೇಶೀಕಪ್ಪುರ ೧ ತೊಲಿ. ಈ ಮಿಶ್ರಣ ವನ್ನು ತಾಸಿಗೆ ೧೦ ಹನಿಗಳಂತೆ ಹಾಗೇಕುಡಿಸುತ್ತಿರಬೇಕು. ಇದರಿಂದ ಶಕ್ತಿಪಾತವಾಗುವದು ನಿಲ್ಲುತ್ತದೆ.

(೭) ಲಿಂಬೀರಸ ೨೦ ತೊಲಿ, ನೀರು ೮೦ ತೊಲಿ, ಸೈಂಧಲವಣ ೧೦ ತೊಲಿ, ಆರಿದ ಬಳ್ಳೊಳ್ಳಿ ೧೦ ತೊಲಿ, ಜಜ್ಜಿದ ಮಣಮೆಣಸಿನಕಾಯಿ ೧೦ ತೊಲಿ, ಇವನ್ನೆಲ್ಲ ಚನ್ನಾಗಿ ಕುದಿಸಿ ೪೦ ತೊಲಿ ಉಳಿಸಿಕೊಂಡು ೨ ತಾಸಿಗೆ ೧ ತೊಲಿಯಂತೆ ಕೊಡಬೇಕು. ಶ್ರಮಜೀವಿಗಳು ಮತ್ತು ಸಶಕ್ತರಿಗೆ ಈ ಔಷಧಿ ಒಳ್ಳೇಉಪಕಾರಿ. ಆಫ್ರಿಕೆಯಲ್ಲಿಯ ನಿಗ್ರೋಜನ ಕಾಲರಾದಲ್ಲಿ ಕೆಂಪು

ಮೆಣಸಿನಕಾಯಿಗಳನ್ನು ಉಪಯೋಗಿಸುತ್ತಾರೆಂಬ ಕಲ್ಪನೆಯಿಂದ ಮೇಲಿನ ಪ್ರಯೋಗ ತಯಾರಿಸಿದ್ದಾಗಿದೆ.

(೮) **ವರಟಿ ಮತ್ತು ತಂಣನ್ನ ಬೆವರಿಗೆ:**— ಸಾಸಿವೆ, ಬಜೆ; ಸಮ ಭಾಗ ವಸ್ತ್ರದಲ್ಲಿ ಸೋಸಿದಪುಡಿಯನ್ನು ಮೈಗೆ ತಿಕ್ಕಿ ಕಾಸಬೇಕು.

(೯) **ಮೂತ್ರಕಟ್ಟಿದ್ದಕ್ಕೆ:**— ಮುತ್ತಲಹೂಗಳ ಕಷಾಯಮಾಡಿ ಆ ಕಷಾಯದ ಮುರಗೇಕಾವನ್ನು ಹೊಕ್ಕಳ ಮತ್ತು ಕಿಬ್ಬೊಟ್ಟೆಗಳಿಗೆ ಕೊಡಬೇಕು.

(೧೦) **ತಂಣನ್ನಬೆವರು ಮತ್ತು ಗ್ಲಾನಿ:**— ಸಾಸಿವೆ, ಸುಂಟೆಗಳ ಪುಡಿ ಕಾಕುಳ್ಳಬೂದಿ ಕೂಡಿಸಿ ಮೈಗೆ ತಿಕ್ಕಿ ಕಾಸಬೇಕು.

(೧೧) **ಬಿಕ್ಕು:**— ಸುವರ್ಣಮಾಕ್ಷಿಕ ಮತ್ತು ಕಪರ್ದಿಕ ಭಸ್ಮಗಳನ್ನು ಲಿಂಬಿರಸದಲ್ಲಿ-

(೧೨) **ಹೊಟ್ಟೆಯುರಿ ಮತ್ತು ಮೂತ್ರಾಘಾತ:**— ಭತ್ತರಳಿನ ನೀರು, ಬಾರ್ಲೀ ನೀರುಗಳಲ್ಲದೆ ಎಳಗಾಯಿ ನೀರಂತೂ ಅಮೃತವೇ ಸರಿ. ಮೇಲಿನಂತೆ ಕಾಲರಾಕ್ಕೆ ಮನೆಯಲ್ಲಿಯೇ ಮಾಡಬಹುದಾದ ತಾತ್ಕಾಲಿಕ ಸರಳವಾದ ದ್ವಾದಶ ಉಪಚಾರಗಳನ್ನು ಹೇಳಿದ್ದೇವೆ. ಆದರೆ ಇದಿಷ್ಟಕ್ಕೆ ಬಲಗೊಂಡ ಬೇನೆ ಹಿಡಿತದಲ್ಲಿ ಬಂದೇತೀರಿತೆಂದು ತಿಳಿಯಲಾಗದು. ಪ್ರತಿಯೊಬ್ಬ ರೋಗಿಯಲ್ಲೂ ಬೇರೆ ಬೇರೆ ಲಕ್ಷಣಗಳು ಕಂಡುಬರುತ್ತವೆ. ಒಬ್ಬರಿಗೆ ಉಪಯೋಗವಾದ ಔಷಧಿ ಮತ್ತೊಬ್ಬರಿಗೆ ಉಪಯೋಗ ಬಿದ್ದೀತೆಂದು ಹೇಳಲಾಗುವದಿಲ್ಲ. ಪ್ರಕೃತಿ, ದೋಷದೂಷ್ಯ ಮತ್ತು ವಿಕಾರದ ತೀವ್ರತೆ, ಗಳನ್ನು ಮನದಂದು ಲಕ್ಷಣ ಮತ್ತು ಅವಸ್ಥೆಗಳು ಬದಲಾದಂತೆ ತಾಸು ತಾಸಿಗೂ ಔಷಧಿಗಳನ್ನು ಬದಲಿಸುತ್ತ ಹೋಗಬೇಕು. ಇಲ್ಲಿಯೇ ಚಿಕಿತ್ಸಕ ವೈದ್ಯರ ಕೌಶಲ್ಯದ ಒರಿ ಹತ್ತುತ್ತದೆ. ವೈದ್ಯ ತನ್ನ ಬುದ್ಧಿಯನ್ನು ಓಡಿಸುತ್ತಿರಬೇಕು. ಈ ನಿರ್ದಯ ಬೇನೆ ರೋಗಿಯನ್ನು ಹಲವು ಬಗೆಯಾಗಿ ಕಾಡಿ ಪ್ರಾಣತಕ್ಕೊಳುತ್ತದೆ. ಶುಕ್ರಾಂತ ಸಪ್ತಧಾತುಗಳು ಕ್ಷೀಣವಾಗಿ ಓಜಸ್ಸ

ಮತ್ತು ಜೀವನಕಲೆಗಳು ಸಂಪುಷ್ಟದಲ್ಲಿ ಬರುತ್ತವೆ. ಇವೆಲ್ಲವುಗಳನ್ನೂ ಮೆಟ್ಟಿ ವಿಶ್ವಪ್ರಯತ್ನಮಾಡಿ ರೋಗಿಯನ್ನು ಬದುಕಿಸಿಕೊಳ್ಳಬೇಕು. ಅವಸ್ಥೆಗೆ ಅನುಗುಣವಾಗಿ ಮಾಡಬೇಕಾದ ಚಿಕಿತ್ಸೆಗಳು ಕೆಳಗಿನಂತೆ.

**ಪ್ರಥಮಾವಸ್ಥೆ:**— ಬಳ್ಳೊಳ್ಳೀ ಇಂಜಕ್ಶನ್ ೧ ಸಿ. ಸಿ. ಮಾಂಸ ಖಂಡದಲ್ಲಿ. ವಾತ ಮತ್ತು ವಾತಕಫಾತ್ಮಕ ಪ್ರಕೃತಿಯವರಿಗೆ ಇದರಿಂದ ಒಳ್ಳೇಲಾಭವಾಗುತ್ತದೆ. ಪಿತ್ತ ಪ್ರಕೃತಿಯವರಿಗೆ ಕಪ್ಪುರದ ಮದ್ದು ಚುಚ್ಚಬೇಕು. ಕಫವಿದ್ದವರಿಗೆ ಕಸ್ತೂರಿಯನ್ನು ಚುಚ್ಚಬೇಕು.

**ಹೊಟ್ಟೆಗೆ:**—ರಸೋನವಟಿ ಎರಡೆರಡು ಗುಳಿಗೆಗಳನ್ನು ಲಿಂಬೀ ರಸದಲ್ಲಿ. ಇದನ್ನು ಕೊನೆಯವರೆಗೂ ಉಪಯೋಗಿಸಬೇಕು. ಕ್ರಿಮಿಗಳ ಸಂಬಂಧವಿದ್ದಲ್ಲಿ (ಒಳಗೆ ಜಂತುಗಳಿದ್ದರೆ) ಸಂಜೀವನಿ ಮತ್ತು ರಸೋನವಟಿ ಅದಲು ಬದಲಾಗಿ ಲಿಂಬೀ ರಸದಲ್ಲಿ.

**ಹೆಚ್ಚು ಭೇದಿ ಮತ್ತು ಹೊಟ್ಟೆ ಮುರಿತಕ್ಕೆ:**—ಶಂಖವಟಿ ಅಥವಾ ಶಂಖೋದರ ಒಂದೊಂದು ಗುಂಜಿ ಲಿಂಬೀ ರಸದಲ್ಲಿ.

**ವಾಂತಿ:**—ಸುವರ್ಣಮಾಕ್ಷಿಕ ೨ ಗುಂಜಿ. ಶಂಖಭಸ್ಮ ೧ ಗುಂಜಿ ನೆಲ್ಲೀಕಾಯಿ ಪಾಕದಲ್ಲಿ.

**ಆಧ್ಮಾನ-ಹೊಟ್ಟೆಯುಬ್ಬರ:**—ಹಿಪ್ಪಲಿ, ಯಾಲಕ್ಕಿ, ಲವಂಗಗಳ ಭಸ್ಮ ೪ ಗುಂಜಿ. ಹಸೀ ಸುಂಟೀ ರಸ ಜೇನಿನಲ್ಲಿ ಅಥವಾ ರೇಶಿಮೆ ಸುಟ್ಟ ಬೂದಿ ಲಿಂಬೀ ಸಿಪ್ಪೆಯ ಬೂದಿಗಳನ್ನು ಲಿಂಬೀ ರಸದಲ್ಲಿ.

**ಹೊಟ್ಟೆ ಮತ್ತು ಹೃದಯಗಳಲ್ಲಿಯ ನರಟೆ:**— ಸುವರ್ಣಸೂತ ಶೇಖರ ೪ ಗುಂಜಿ. ಹಸೀ ಸುಂಟೀ ರಸ ಜೇನುತುಪ್ಪಗಳಲ್ಲಿ.

**ದ್ವಿತೀಯಾವಸ್ಥೆ:**— ಒ[illegible] ಮತ್ತು ಸ್ಪೈಯ್ಯಲ್ಲಾ ತಂಪಾದ ಬೆವರು- ಸುವರ್ಣಸೂತ ಶೇಖರ ಒಂದೊಂದು ಗುಂಜಿಯಂತೆ ಹಸೀ ಸುಂಟೀ ರಸ

ಜೇನಿನಲ್ಲಿ. ಅಥವಾ ಸೂಕ್ಷ್ಮ ತಾಮ್ರ ಭಸ್ಮ ೩ ಗುಂಜಿ ತುಲಸೀ ರಸ ಮತ್ತು ಜೇನಿನಲ್ಲಿ.

**ಬಿಕ್ಕು:**—ಹಿಪ್ಪಲೀ ಭಸ್ಮ ೨ ಗುಂಜಿ ಸುವರ್ಣ ಮಾಕ್ಷಿಕ ೧ ಗುಂಜಿ+ ಸಮೀರಪನ್ನಗ ೧/೨ ಗುಂಜಿ ಜೇನಿನಲ್ಲಿ.

**ಸರ್ವಾಂಗ ದಾಹ ಮತ್ತು ತೃಷ್ಣಾ ಬಾಯಾರಿಕೆ:**— ಸುವರ್ಣ ಮಾಕ್ಷಿಕ ೧ ಗುಂಜಿ. ಸಮೀರಪನ್ನಗ ೧/೨ ಗುಂಜಿ ಎಳೆಗಾಯಿ ನೀರಿನಲ್ಲಿ.

**ಮೂತ್ರ ಕಟ್ಟಿದರೆ:**— ಚಂದ್ರಪ್ರಭಾ ೪ ಗುಂಜಿ + ಉನ್ಮಾಳೀ ಔಷಧ ೪ ಗುಂಜಿ ೪ ಚೀಟು ಎಳೆ ಟೆಂಗಿನಕಾಯಿ ನೀರಿನಲ್ಲಿ.

**ಮಬ್ಬು, ನಾಡಿಗಳ ಕ್ಷೀಣತೆ, ಗುಂಗು:**— ಚಂದ್ರಕಲಾ ೪ ಗುಂಜಿ ಉನ್ಮಾಳೀ ಔಷಧ ೪ ಗುಂಜಿ ೪ ಚೀಟು ತುಳಸೀ ರಸ ಜೇನಿನಲ್ಲಿ.

**ಹೊಟ್ಟೆಯುಬ್ಬರ ಬಿಕ್ಕುಗಳಿಗೆ:**—ಶಂಖಭಸ್ಮ + ಯಾಲಕ್ಕೀ ಭಸ್ಮ ಅಥವಾ ಹಿಪ್ಪಲೀ ಮತ್ತು ನೆಲ್ಲಿಕಾಯಿ ಭಸ್ಮ ಜೇನಿನಲ್ಲಿ.

**ಮೂತ್ರಾಘಾತ—ಉಚ್ಚೆ ಕಟ್ಟೋಣ:**— ಉನ್ಮಾಳೀ ಔಷಧ ೪ ಗುಂಜಿ + ಸೂರ್ಯಕ್ಷಾರ ೪ ಗುಂಜಿ ವಂಶಲೋಚನ—ಬಿದಿರು ಸುಂಣ ೪ ಗುಂಜಿ. ೪ ಸಲ, ಎಳೆಗಾಯಿ ನೀರಲ್ಲಿ.

**ಹೃದಯ ಕ್ಷೀಣತೆ ಮತ್ತು ನಾಡಿನಿಂತಿದ್ದರೆ:**— (೧) ಲಕ್ಷ್ಮೀ ವಿಲಾಸ ಗುಟಿ ೧ ಗುಂಜಿ ತುಳಸೀ ರಸ ಮತ್ತು ಜೇನಿನಲ್ಲಿ. (೨) ತಪ್ತ ಸುವರ್ಣ ಜಲಪಾನ (೩) ಎದೆಯ ಮೇಲೆ ಸಾಸಿವೆ ಅರೆದು ಲೇಪಿಸಬೇಕು. (೪) ಸಾಸಿವೆ, ಸುಂಟಿ, ಬಜೀ ಪುಡಿಗಳನ್ನು ಕುಳ್ಳುಬೂದಿ ಕೂಡಿಸಿ ಮೈಗೆ ಹಚ್ಚಬೇಕು.

**ಹೃದಯ ನಿಂತುಬಿಡುವ ಲಕ್ಷಣವಿದ್ದಾಗ್ಗೆ:**— (೧) ಅರ್ಜುನ ಚುಚ್ಚುಮದ್ದು ೧ ಸಿ. ಸಿ (೨) ದ್ರಾಕ್ಷಾಸವ ೧ ಔಂಸ ಅಷ್ಟೇ ನೀರಿನಲ್ಲಿ + ಲಕ್ಷ್ಮೀವಿಲಾಸ ಗುಟಿ ೧ ಗುಂಜಿ ಒಂದೊಂದು ಘಮಚೇದಂತೆ ಐದು ನಿಮಿ

ಷಕ್ಕೊಮ್ಮೆ ಹಾಕಬೇಕು. (೩) ಎಳೆ ಟೆಂಗಿನಕಾಯಿ ನೀರಲ್ಲಿ ಕಾದ ಬಂಗಾರ ಚಲ್ಲಿ ಆ ನೀರು ಕುಡಿಸಬೇಕು.

**ತೃತೀಯಾವಸ್ಥಾ:**— ರಸೋನವಟಿ ೨ ಗುಂಜಿ + ಸುವರ್ಣ ಸೂತ ಶೇಖರ ೨ ಗುಂಜಿ + ಕಾಡಿಗ್ಗರಿಗಿನ ರಸ ೧ ಚಮಚೆ, ಜೇನುತುಪ್ಪ ೧ ಚಮಚೆ (೨) ಪ್ರವಾಳ ೪ ಗುಂಜಿ + ಸುವರ್ಣಮಾಕ್ಷಿಕ ೧ ಗುಂಜಿ, ಜೇನುತುಪ್ಪ ೨ ಚಮಚೆ ಮತ್ತು ನೀರು ೧ ಔಂಸು ಅಥವಾ ನೀರಲ್ಲಿ ಗ್ಲುಕೋಜ ಹಾಕಿಯೂ ಕೊಡಬಹುದು. (೩) **ಅಶಕ್ತಿ:**— ಸುವರ್ಣಮಾಲಿನೀ ವಸಂತ ೧ ಗುಂಜಿ, ಬೆಣ್ಣೆ ಮತ್ತು ಕಲ್ಲುಸಕ್ಕರೀ ಪುಡಿಯಲ್ಲಿ (೪) **ಪಾಂಡುರೋಗವಿದ್ದರೆ:**— ಆರೋಗ್ಯವರ್ಧಿನಿ ೧ ಗುಂಜಿ + ಪ್ರವಾಳ ೨ ಗುಂಜಿ + ಮಂಡೂರ ೪ ಗುಂಜಿ ಲೋಹಾಸವದಲ್ಲಿ. (೫) **ಸ್ನಾಯುಗಳ ಅಶಕ್ತಿ:**— (ಅ) ಚ್ಯವನಪ್ರಾಶ (ಆ) ಕೂಷ್ಮಾಂಡ ಪಾಕ (೬) **ಹೃದಯದ ಅಶಕ್ತತೆ;**—ಶತಾವರೀ ಕಲ್ಪ, ದ್ರಾಕ್ಷಾಸವ, ಶೃಗಶೃಂಗ ಮುಂತಾದವು.

**ಅ್ಯಲೋಪಥಿ:**— ರೋಗ ಆರಂಭವಾದೊಡನೆ ಕ್ಯಾಂಫರ್ ಇನ್ ಆಯಿಲ್ ಆರ್ ಈಥರ್ ಅಥವಾ ಮಸ್ಕ ಇನ್ ಆಯಿಲ್ ಅಥವಾ ಈಥರ ಇಂಜಕ್ಶನ್ ಕೊಡಬೇಕು.

**ವರಟಿ:**— ಅ್ಯಟ್ರೋಪಿನ್‌ಸಲ್ಫ ೧ ಸಿ. ಸಿ. ಮಾಂಸ ಖಂಡಗಳಲ್ಲಿ.

**ಪಾಂಡುತ್ವ:**— ಲಿವ್ಹರ್‌ಎಕ್ಸಟ್ರ್ಯಾಕ್ಟ. **ದೌರ್ಬಲ್ಯ:**—ಸಲಾಯಿನ್ ಇಂಜಕ್ಶನ್. ಇದರಮೇಲೆ ಅ್ಯಲೋಪಥಿಯ ಭರವಸೆ ಬಹಳ. ಆದರೆ ಈ ದ್ರವದ ಕಸುವು ರಕ್ತದಲ್ಲಿರುವವರೆಗೆ ರೋಗಿ ಸುಖವಾಗಿರುತ್ತಾನೆ. ಆಮೇಲೆ ಕೂಡಲೇ ರೋಗಿಯ ಶಕ್ತಿಪಾತವಾಗುತ್ತದೆ.

**ಹೃದಯವಿಕಾರ:**— ಕೋರ್ಯಾಮಿನ್ ಅಥವಾ ಕಾರ್ಡಿಯಾಝಾಲ ಇಂಜಕ್ಶನ್ ಕೊಡುತ್ತಾರೆ. ಇವು ಚನ್ನಾಗಿ ಕೆಲಸ ಕೊಡುತ್ತವೆ.

**ಬಾಯೋಕೆಮಿಕ್:**— ಚಿಕ್ಕಮಕ್ಕಳಿಗೆ ಬಲು ಉಪಯೋಗ. ಕಾ. ಫಾ. ನೆ. ಫಾ. ಇವು ಮುಖ್ಯ ಔಷಧಿಗಳು. ಒಂದರನಂತರ ಮತ್ತೊಂದರಂತೆ ಕೊಡಬೇಕು.

**ಪಥ್ಯಾಪಥ್ಯ:**— ರೋಗಿಯನ್ನು ತೆಳ್ಳಗಿನ ಆಹಾರದ ಮೇಲೆಯೇ ಇಡಬೇಕು. ಹೆಚ್ಚಾಗಿ ಭತ್ತರಳಿನ ಗಂಜಿ, ಬಾರ್ಲೀ-ನೀರುಗಳನ್ನೇ ಕೊಡಬೇಕು. ಮೂತ್ರ ಕಟ್ಟಿದ ಬಳಿಕ ಎಳೆ-ನೀರಿನ ಮೇಲೆಯೇ ಇಡಬೇಕು. ರೋಗ ಹಿಮ್ಮೆಟ್ಟಿದ ಮೇಲೆ ಹುರಿದ ಅಕ್ಕಿ ಗಂಜಿ ತೆಳ್ಳನ್ನ ಅಕ್ಕೀ ಅಂಬಲಿ ಮೆತ್ತನ್ನ ಅನ್ನ ಮಜ್ಜಿಗೆಗಳನ್ನು ಕೊಡುತ್ತ ಹೋಗಬೇಕು.

## IMPORTANT CASES

(೧) ಕುಮಾರ ಪವಾರ. ವಯಸ್ಸು ೨ ವರ್ಷ. ಡಾಕ್ಟರರಲ್ಲಿ ಇನಾಕ್ಲೇಶನ್ನಿಗೆ ಹೋದಾಗ ಸಣ್ಣ ವಯಸ್ಸೆಂದು ಚುಚ್ಚಲಿಲ್ಲ. ಮುಂದೆ ಆತನಿಗೆ ಕಾಲರಾ ಬಂತು. ವಾಂತಿ ಭೇದಿಗಳಾದೊಡನೆ ಕಣ್ಣು ಬೆಳ್ಳಗೆಮಾಡಿ ಗೋಣು ಚಲ್ಲಿಬಿಟ್ಟಿತು. ಅರ್ಧ ತಾಸಿನಲ್ಲಿಯೇ ತೋರಿಸಿದರು. ಅಲ್ಲಿ ನಾಡೀ ನೋಡುತ್ತಿರುವಾಗ ವಾಂತಿ ಭೇದಿಗಳಾಗುತ್ತಿದ್ದವು. ಆ ಹುಡುಗನಿಗೆ ತಕ್ಷಣ ಚಿಕಿತ್ಸೆ ಮಾಡಲಾಗಿ ಗುಣಹೊಂದಿ ಇದ್ದಾನೆ.

(೨) ಶ್ರೀ. ವಿಷ್ಣುಪಂತ ಜಾಬರ, ವಯ ೨೫. ಇವರು ತಮ್ಮ ಜೊತೆಗಾರನಿಗೆ ಮಂಣು ಕೊಟ್ಟು ಬರುವಷ್ಟರಲ್ಲಿ ತಮಗೇ ವಾಂತಿ ಭೇದಿಗೆ ಆರಂಭವಾಯಿತು. ಆದರೂ ತಮಗೆ ಕಾಲರಾ ಬಂದಿಲ್ಲವೆಂದು ತಪ್ಪು ಹಟ ಹಿಡಿದಿದ್ದರು. ಇವರನ್ನು ಕಾಣಬಂದ ಮಿತ್ರರೊಬ್ಬರಿಗೆ ಅಲ್ಲಿಂದಲ್ಲಿಯೇ ಕಾಲರಾ ಬಂತು. ಇವರನ್ನು ಕಾಸಲು ಕುಳಿತ ಹೆಂಣುಮಗಳಿಗೆ ಮುಂದೆ ಅರ್ಧ ಗಂಟೆಯಲ್ಲಿ ಸುರುವಾಯಿತು. ಆಗಲೇ ಆ ವಠಾರದಲ್ಲಿ ಮತ್ತೆ ೪ ಜನರಿಗೂ ಪಿಡುಗು ಬಂತು. ಕೂಡಲೇ ಉಪಚಾರ ಆರಂಭವಾದ್ದರಿಂದ ಎಲ್ಲರೂ ಬದುಕಿಕೊಂಡು ಭಾರೀ ಸತ್ಯನಾರಾಯಣ ಪೂಜೆ ಮಾಡಿದರು.

(೩) ಶ್ರೀ **ಅಜ್ಞಾತ.** ದೇಶಭಕ್ತ. ವಾರಂಟ ಇದ್ದ ಕಾರಣ ತಲೆಮರೆಸಿಕೊಂಡಿದ್ದವರು. ಚಲೇಜಾವ ಚಳವಳಿಗೆ ಅಂಜಿ ಬೇರೆ ಡಾಕ್ಟರರಾರೂ ಬರಲೊಪ್ಪಲಿಲ್ಲ. ಅಲ್ಲಿ ಹೋಗಿ ಚಿಕಿತ್ಸೆಮಾಡಿದ್ದರಿಂದ ರೋಗಿ ಗುಣಹೊಂದಿದರು.

(೪) ಸೌ. **ಯಲ್ಲೂಬಾಯಿ** ಈಕೆ ಬಡವೆ ಆಯುರ್ವೇದೀಯ ಚಿಕಿತ್ಸೆ ನಡೆಯಿತು. ಈಕೆಯ ತಂಗಿ ಸಿರಿವಂತಳು ಡಾಕ್ಟರರಿಂದ ಸಲಾಯಿನ್

ಇಂಜಕ್ಶನ್ ಮೊದಲಾದ ಅತ್ಯಾಧುನಿಕ ಚಿಕಿತ್ಸೆಯಾಗಿಯೂ ಕೈಬಿಟ್ಟಳು. ಅಕ್ಕ ಬದುಕಿಕೊಂಡಿದ್ದಾಳೆ.

(೬) ಸೌ. **ಅತ್ಯಾಬಾಯಿ** c/o ಏಕಬೋಟಿ. ಇವರಿಗೆ ಕಾಲರಾ ಬಂದು ಕೊನೆಯ ಘಟ್ಟಕ್ಕೆ ಮುಟ್ಟಿದ್ದರು. ನಾಡಿಗಳು ನಿಂತಿದ್ದವು. ಉಸಿರು ಮಾತ್ರ ಆಡುತ್ತಿತ್ತು. ಯೋಗ್ಯ ಉಪಚಾರದಿಂದ ೨॥ ತಾಸಿನಲ್ಲಿ ಜೀವನ ಕಲೆ ಬಂದು ೮ ನೇ ದಿನ ೨ ಮೈಲು ಓಡಾಡಹತ್ತಿದರು.

(೭) ಸೌ. **ಹೊಸೂರ.** ಅಗ್ಗವೆಂದು ಮಾರಿಗೆ ಜಂತಿನಪುಡೆ ತಕ್ಕೊಂಡು ಕಾಲರಾ ಬಂತು. ಆದರಲ್ಲಿ ಜಂತಿನ ಉಪದ್ರವ ಬಹಳವಾಗಿತ್ತು. ಭೇದಿ ನಿಂತು ಬರೀ ವಾಂತಿಯಾಗಹತ್ತಿ ಹೊಟ್ಟೆಯುಬ್ಬಿತು. ನಾಡಿ ಕ್ಷೀಣವಾದವು. ಎನಿಮಾ ಕೊಟ್ಟನಂತರ ಜಂತುಗಳು ಬಿದ್ದವು. ಆಮೇಲೆ ಕಾಲರಾದ ಚಿಕಿತ್ಸೆ ಮಾಡಿದ ಬಳಿಕ ೩ ನೇ ದಿನಕ್ಕೆ ಆರೋಗ್ಯ ಉಂಟಾಯಿತು.

(೮) **ಶ್ರೀ. ಸಖಾರಾಮ ಪಂತರು**:–ವಯ ೨೫. ಬಂಧು ಡಾಕ್ಟರರು. ಆದರೂ ಆಯುರ್ವೇದದಲ್ಲಿಯ ವಿಶ್ವಾಸದ ಮೂಲಕ ಆ್ಯಲೋಪಥಿ ಚಿಕಿತ್ಸೆಗೆ ಒಪ್ಪಲಿಲ್ಲ. ಆಯುರ್ವೇದ ಔಷಧಿಗಳಿಂದ ಪೂರಾ ಗುಣಹೊಂದಿದರು.

**ವಿಶೇಷ ಸೂಚನೆ**:– ಅತೀ ಸೂಕ್ಷ್ಮವಾಗಿರುವ ಲಕ್ಷಣಗಳನ್ನು ಕಂಡುಕೊಂಡು ಆ ಲಕ್ಷಣಗಳಿಗನುಗುಣವಾಗಿ ಔಷಧಿಕೊಡುತ್ತ ಹೋಗಬೇಕು. ಸೋಮಾರಿತನ ಮಾಡಬಾರದು. ರೋಗಿ ಬಹಳ ಗಾಬರಿಯಾಗಿರುತ್ತಾನೆ. ಆತನಿಗೆ ಧೈರ್ಯ ಕೊಡುವದು ಚಿಕಿತ್ಸೆಯದೊಂದು ಮಹತ್ವದ ಅಂಗವಾಗಿದೆ. ರೋಗಿಯ ಸುತ್ತಲೂ ಆಪ್ತರೆಲ್ಲಾ ಕುಳಿತು ಆಳೋಣ ಕರೆಯೋಣಕ್ಕೆ ಆರಂಭಿಸುತ್ತಾರೆ. ಇಂಥ ಹೊತ್ತಿನಲ್ಲಿ ಈ ರಂಬಾಟ ನಿಲ್ಲಿಸಿ ಕೊನೆಯ ಉಸಿರಿರುವ ಪರ್ಯಂತ ಉಪಚಾರ ಮಾಡುತ್ತಿದ್ದರೆ ಯಶಸ್ಸು ಲಭಿಸುವದು ಖಂಡಿತ.

# ಧನುರ್ವಾತ

## Tetanus ಟಿಟ್ಯಾನಸ್

**ಸಾಮಾನ್ಯ ವರ್ಣನೆಃ**—ಈ ವಿಕಾರದಲ್ಲಿ ಮೈ ಬಿಲ್ಲಿನಂತೆ ಮಣಿಯುತ್ತದೆ. ಇದು ಭಾರತದಲ್ಲಿ ವಿಶೇಷವಾಗಿದೆಯಾದರೂ ಸಾಂಸರ್ಗಿಕವಾದುದಲ್ಲ. 'ಬ್ಯಾಸಿಲಸ್ ಟಿಟ್ಯಾನಸ್' ಎಂಬ ಕ್ರಿಮಿಗಳಿಂದ ಉತ್ಪನ್ನವಾಗುತ್ತದೆ. ಈ ಕ್ರಿಮಿಗಳು ಒಳ್ಳೇ ಎಟ್ಟೆಯಾಗಿದ್ದು ಅನ್ನ ನೀರು ಇಲ್ಲದೆ ಎಷ್ಟೋ ದಿನ ಬದುಕಬಲ್ಲವು. ಸೂರ್ಯನ ಪ್ರಕಾಶ, ಶುದ್ಧ ಹವೆ ಮಾತ್ರ ಇವಕ್ಕೆ ವೈರಿಯಾಗಿವೆ. ಕುದುರೆಯ ಲದ್ದಿಯಲ್ಲಿ ಕಂಡುಬರುವ ಈ ಕ್ರಿಮಿಗಳು ಲದ್ದಿ ಒಣಗಿದೊಡನೆ ದೂಳಿಯ ಜೊತೆಗೆ ವಾತಾವರಣದಲ್ಲಿ ಸೇರಿ ಹೋಗುತ್ತವೆ. ಆಳವಾದ ಗಾಯದಲ್ಲಿ ಇವು ಹೊಕ್ಕರೆ ಮಾತ್ರ ರೋಗ ಬರುತ್ತದೆ. ತುಕ್ಕು ಹಿಡಿದ ಮೊಳೆ ಮೈಯ್ಯಲ್ಲಿ ನಡೋಣ, ಚೂರಿಯ ಇರಿತ, ಮೋಟಾರಿನಂಥ ವಾಹನಗಳಿಂದಾಗುವ ಅಪಘಾತ ಮತ್ತು ಹೆರೆಯುವಾಗ ಅಡ್ನಾಡಿ ಸೂಲಗಿತ್ತಿಯರು ಯೋನಿಯಲ್ಲಿ ಅಥವಾ ಗರ್ಭಾಶಯದಲ್ಲಿ ತೊಳೆಕೊಳ್ಳದ ಹೊಲಸು ಕೈ ಹಾಕುವದರಿಂದ ಆ ಕೈಧೂಳಿಯೊಡನೆ ಕ್ರಿಮಿಗಳು ಗಾಯದಗುಂಟ ಮೈಯಲ್ಲಿ ಬೆರೆತು ಬೇನೆಯನ್ನು ತರುತ್ತವೆ. ಮೇಲೆ ಮಾತ್ರ ಆದ ತುಸು ತೆರೆತದಂಥ ಗಾಯದಲ್ಲಿ ಈ ಕ್ರಿಮಿಗಳ ಬೇಳೆ ಬೇಯುವದಿಲ್ಲ. ಶುದ್ಧ ಹವೆ, ಸೂರ್ಯಪ್ರಕಾಶಗಳಲ್ಲಿ ಇವುಗಳ ಆಟ ನಡೆಯುದಿದ್ದರೂ ಇವು ಸಾಯುವದಿಲ್ಲ; ತಮ್ಮ ಮೈಸುತ್ತ ಆವರಣವನ್ನು ಸಿದ್ಧ ಮಾಡಿಕೊಂಡು ಅನುಕೂಲ, ಕಾಲಪ್ರತೀಕ್ಷೆ ಮಾಡುತ್ತಿರುತ್ತವೆ.

**ಕಾಲ ಸಂಪ್ರಾಪ್ತಿಃ**—೫ ರಿಂದ ೨೦ ದಿನಗಳಪರ್ಯಂತ.

**ಸಂಪ್ರಾಪ್ತಿಃ**—ಗಾಯದ ಆಳವಾದ ಭಾಗದಲ್ಲಿ ಇವು ವಸ್ತಿ ಮಾಡಿಕೊಳ್ಳುವವು. ಮತ್ತು ಇವುಗಳ ವಿಷ (ಟಾಗ್‌ಝಿನ್) ಮೈತುಂಬ ಹಬ್ಬಿ ರೋಗಕ್ಕೆ ಆರಂಭವಾಗುತ್ತದೆ.

**ಲಕ್ಷಣ ಮತ್ತು ಭಾವನಾಃ**-(೧)ಧನುರಾಯಾಮ=ಬಿಲ್ಲಿನ ಹಾಗೆ ಮೈ ಮಣಿಯುತ್ತದೆಯಾದ್ದರಿಂದ ಇದಕ್ಕೆ ಧನುರಾಯಾಮ ಅಥವಾ ಧನುರ್ವಾತ

ವೆನ್ನುತ್ತಾರೆ. ಬೆನ್ನಿನ ಸ್ನಾಯುಗಳು ಸೆಟೆಯುವದರಿಂದ ಬೆನ್ನು ಧನುಸ್ಸಿನಂತೆ ಬಗ್ಗುತ್ತದೆ. ಕೇವಲ ತಲೆ, ಟೊಂಕಗಳು ಮಾತ್ರ ನೆಲಕ್ಕೆ ಹತ್ತಿರುತ್ತವೆ. ಬೆನ್ನಲ್ಲಿ ಬಹಳೇ ನೋವಾಗುತ್ತದೆ. ಇದನ್ನೇ ಬಹಿರಾಯಾಮವೆನ್ನುವರು. ಅಂತರಾಯಾಮವೆಂಬದು ಎರಡನೇ ಪ್ರಕಾರ. ಇದರಲ್ಲಿ ಹೊಟ್ಟೆಯಲ್ಲಿಯ ಸ್ನಾಯುಗಳು ಆಕುಂಚನವಾಗುತ್ತವೆ. ದೇಹ ಮುಂಬದಿಗೆ ಬಾಗುತ್ತದೆ. ಮೂರನೆ ಪ್ರಕಾರದಲ್ಲಿ ಮಗ್ಗುಲಿನ ಸ್ನಾಯುಗಳು ಸಂಕುಚಿತವಾಗುತ್ತವೆ. ಆಗ ಶರೀರವು ಎಡ ಅಥವಾ ಬಲಕ್ಕೆ ಒಲಿಯುತ್ತದೆ. ರೋಗ ಬಲಿತಾಗ ಬೆಳಕು, ಧ್ವನಿ, ಸ್ಪರ್ಶ ಅಥವಾ ವಾಸನೆ ಮುಂತಾದ ಚಿಲ್ಲರೆ ಕಾರಣಗಳಿಂದ ರೋಗ ಹೆಚ್ಚಾಗುತ್ತ ಸೆಟೆತಗಳು ಬರಹತ್ತುತ್ತವೆ. ಎಂತೇ ಇಂಥ ರೋಗಿಗಳನ್ನು ಪ್ರಶಾಂತ ಕತ್ತಲು ಕೋಣೆಯಲ್ಲಿ ಇಡುವ ಪರಿಪಾಠ ಉಂಟು. ಸೆಟೆತಗಳಿಗೆ ಅಂಜಿ ರೋಗಿಯು ಅನ್ನ ನೀರು ಬಿಡುವದಲ್ಲದೆ ಮಲಮೂತ್ರಕ್ಕೂ ಹೋಗುವದನ್ನು ತಪ್ಪಿಸಬೇಕೆನ್ನುತ್ತಾನೆ.

(೩) **ಹನುಸ್ತಂಭಃ**—ಇದು (ಹಲ್ಲುಗಟಗರಿಯೋಣ) ಈ ವಿಕಾರದಲ್ಲಿಯ ವಿಶೇಷ ಲಕ್ಷಣವಾಗಿದೆ. ಬಾಯಿ ಕಳಚುವದಿಲ್ಲ. ಏನೂ ತಿನ್ನಲಾಗುವದಿಲ್ಲ. ಬಾಯ ಸ್ನಾಯುಗಳು ನೋಯುತ್ತವೆ. ಮೋರೆಯ ಲಕ್ಷಣ ಚಮತ್ಕಾರಿಕ ಮತ್ತು ವಿದ್ರೂಪವಾಗುತ್ತಿರುತ್ತದೆ.

(೩) **ಜ್ವರಃ**— ಇದರಲ್ಲಿ ಜ್ವರ ಏರುತ್ತೇರುತ್ತ ಸಾಯುವ ಹೊತ್ತಿಗೆ ೧೦೮° ರಿಂದ ೧೧೧° ರ ವರೆಗೂ ಹೋಗುತ್ತವೆ. ಮರಣಾನಂತರವೂ ಬಹಳೇ ಹೊತ್ತಿನ ವರೆಗೆ ಹೆಣ ಬಿಸಿಯಾಗಿರುತ್ತದೆ.

**ಭೇದಕ ನಿದಾನಃ**—(೧) ಕೊನೆಯವರೆಗೂ ರೋಗಿಗೆ ಎಚ್ಚರಿರೋಣ, ಹಲ್ಲು ಗಟಗರಿಯೋಣ, ಬಿಲ್ಲಿನಂತೆ ಮೈಮಣಿಯೋಣ ಮತ್ತು ಬೇನೆ ಬರುವದಕ್ಕಿಂತ ಮೊದಲಿಗೆ ಗಾಯವಾದ ಇತಿಹಾಸಗಳ ಮೇಲಿಂದ ಹಾಗೂ ಮತ್ತೆ ಬೇರೆ ವಿಕಾರಗಳಿಂದಲೂ ಈ ರೋಗದ ವ್ಯತ್ಯಾಸ ಕಂಡುಬರುತ್ತದೆ.

**ಸಾಧ್ಯಾಸಾಧ್ಯತ್ವ:**— ಇದೊಂದು ಕಷ್ಟಸಾಧ್ಯ ರೋಗವಾಗಿದೆ. ವಾತ ವಿಶೇಷವಾಗಿ ಪ್ರಕುಪಿತವಾದರೆ ಮಾತ್ರ ರೋಗಿ ಕೈಬಿಡುತ್ತಾನೆ.

ಆದರೆ ವಾತಪ್ರಕೋಪ ತಕ್ಕಷ್ಟೇ ಇದ್ದರೆ ಅಂದರೆ ಸೆಟೆತಗಳು ಕಮ್ಮಿ, ಜ್ವರ ಸ್ವಲ್ಪ, ಹೀಗಿದ್ದಾಗ ರೋಗಿ ಬದುಕುತ್ತಾನೆ.

**ಚಿಕಿತ್ಸೆ:—**(೧) ಮಹಾವಾತ ವಿಧ್ವಂಸ ಅರ್ಧ ಗುಂಜಿ + ಸುವರ್ಣ ಸೂತಶೇಖರ ೨ ಗುಂಜಿ ೪ ಚೀಟು ೪ ಸಲ ಜೇನುತುಪ್ಪ ಕಾಡಿಗ್ಗರಗಿನ ರಸದ ಅನುಪಾನ.

(೨) ತಾಪ್ಯಾದಿಲೋಹ ೪ ಗುಂಜಿ + ಸ್ಮೃತಿಸಾಗರ ೧ ಗುಂಜಿ ೪ ಚೀಟು ೪ ಸಲ. ನೆಲ್ಲೀಕಾಯಿ ಪಾಕದಲ್ಲಿ.

(೩) ಕಾಲಕೂಟ ರಸ ೨ ಗುಂಜಿ + ಪ್ರವಾಳ ಪಂಚಾಮೃತ ೨ ಗುಂಜಿ + ಸುವರ್ಣ ಮಾಕ್ಷಿಕ ೪ ಗುಂಜಿ ೪ ಚೀಟು ೪ ಸಲ ಜೇನಿನಲ್ಲಿ.

(೪) ಪುನರ್ನವಾ + ಸಾರಿವಾ + ಮಂಜಿಷ್ಠಾಗಳ ೩ ಕಷಾಯಮಾಡಿ ಕೊಡಬೇಕು,

(೫) ಗಾಯವನ್ನು ಶೋಧನ ತೈಲದಿಂದ ಸ್ವಚ್ಛ ತೊಳೆದು ಹಳೇ ಜೇನುತುಪ್ಪದ ಪಟ್ಟೀ ಇಡಬೇಕು.

**ರೋಗಿಯ ಶುಶ್ರೂಷಾ:—**(ವಾತಾತಪಿಕಾ) ರೋಗಿಯನ್ನು ಕತ್ತಲು ಕೋಣೆಯಲ್ಲಿಡಬೇಕು. ಬೆಳಕು ಕಾಣಿಸಬಾರದು. ಹಾಗೆಯೇ ಸ್ಪ್ರಿಂಗಿನ ಮಂಚದ ಮೇಲೆ ಮಲಗಿಸಬಾರದು. ವಾತ ನಾಶಕ ತೈಲದ ಬಸ್ತಿ (ಎನಿಮಾ) ಕೊಡಬೇಕು. ಕುಡಿಯಲು ಬಿಸಿನೀರು. ಇದು ವಾತ ವಿಕಾರವಾದ್ದರಿಂದ ಶಕ್ಯವಿದ್ದಷ್ಟೂ ಉಷ್ಣ ಉಪಚಾರಗಳನ್ನೇ ಮಾಡಬೇಕು. ರೋಗಿಯನ್ನು ಅಲುಗಿಸಬಾರದು, ತಿಳುವಾದ ಆಹಾರ ಕೊಡಬೇಕು. ಉಚ್ಚಿ ಕಟ್ಟಿದರೆ ಮೂತ್ರಶಲಾಕಾದಿಂದ ತೆಗೆಯಬೇಕು.

**ಆ್ಯಲೋಪಥಿ:—**ಇದಕ್ಕೆ ಆ್ಯಲೋಪಥಿಯ ಔಷಧಿಗಳು ಒಳ್ಳೇ ಪರಿಣಾಮಕಾರಿಗಳಾಗಿವೆ. ದೊಡ್ಡದೊಂದು ಯಾವವೇ ತರಹದ ಗಾಯವಾದೊಡನೆ ಮೊದಲಿಗೆ ಪ್ರತಿಬಂಧಕನೆಂದು ಎಂಟಿಟೆಟ್ಯಾನಿಕ್‌ಸಿರಂ ಪ್ರೊಫಿ

ಲ್ಯಾಕ್‌ಟಿಕ್ (೧೦ ೦೦೦ ಯುನಿಟ್) ಇಂಜಕ್ಶನ್ ಕೊಡುತ್ತಾರೆ. ಇದರಿಂದಾಗಿ ಧನುರ್ವಾತದ ಸಂಭವವೇ ತಪ್ಪಿ ಹೋಗುತ್ತದೆ.

**ಪ್ರತೀಕಾರಾತ್ಮಕ:—** ಗಾಯವಾದ ಭಾಗ, ಧಡದಿಂದ ದೂರದ್ದಾಗಿದಲ್ಲಿ (ಕೈಕಾಲುಗಳದ್ದಾಗಿದ್ದರೆ) ಆಷ್ಟು ಭಾಗ ಕೊಯ್ದು ತೆಗೆಯುತ್ತಾರೆ. ಇದರಿಂದ ಕೂಡಲೇ ರೋಗ ಗುಣವಾಗುತ್ತದೆ. ಪೆನಿಸಿಲಿನ್ ಕೊಟ್ಟು ಗಾಯವನ್ನು ಶುದ್ಧವಾಗಿ ಇಟ್ಟುಕೊಳ್ಳುತ್ತಾರೆ. ಲಂಬರ ಪಂಕ್ಚರಮಾಡಿ ಸೆರಬ್ರೋ ಸ್ಪಾಯಿನಲ್ ಫ್ಲುಇಡ್ ತೆಗೆದು ಆ್ಯಂಟಿಟಿಟ್ಯಾನಿಕ್ ಸೀರಂ ಇಂಜಕ್ಶನ್ ಕೊಡುವರು. ಇದನ್ನು ಜಾಣರಾದ ಸರ್ಜನ್‌ರಿಂದ ಮಾಡಿಸಬೇಕು. ಇದು ಶಕ್ಯವಿಲ್ಲದಿದ್ದರೆ ಇದೇ ಚುಚ್ಚುಮದ್ದನ್ನು ಮಾಂಸ ಖಂಡದಲ್ಲಿ ಅಥವಾ ಅಂತಃಸ್ತ್ವಚದಲ್ಲಿ ಕೊಡಬೇಕು. ಪ್ರಮಾಣ:— ಒಂದು ಸಾವಿರದಿಂದ ಒಂದು ಲಕ್ಷ ಯುನಿಟ್ಟುಗಳ ಪರ್ಯಂತರ ಕೊಡಬಹುದು-

**ಔಷಧಿ:—** (೧) ಅಫುಯುಕ್ತ ಕಲ್ಪ ಕೊಡುತ್ತಾರೆ. ಮಾರ್ಫಿಯಾ ಚುಚ್ಚುತ್ತಾರೆ. ಅಥವಾ ಬ್ರೊಮಾಯಿಡ್‌ದ ಕಲ್ಪ ಕೊಡುತ್ತಾರೆ. ಮಲಮೂತ್ರಗಳನ್ನು ಮಾಡಿಸುವದಾದಲ್ಲಿ ಸೆಟೆತಗಳು ಬರಬಾರದೆಂದು ಕ್ಲೋರೋಫಾರಂ ಕೊಟ್ಟು ಮಾಡಿಸುತ್ತಾರೆ.

## ಜಲಸಂತ್ರಾಸ.

## Hydrophobia ಹೈಡ್ರೋಫೋಬಿಯಾ.

**ಸಾಮಾನ್ಯವರ್ಣನೆ:—** ಈ ರೋಗದಲ್ಲಿ ನೀರನ್ನು ನೋಡಿ ಅಥವಾ ನೆನೆದು ಕೂಡ ರೋಗಿ ಭಯಭೀತನಾಗುವದರಿಂದ ಈ ಬೇನೆಗೆ ಜಲಸಂತ್ರಾಸವೆಂದು ಹೆಸರು. ಧನುರ್ವಾತದಲ್ಲಿಯ ಕೆಲ ಲಕ್ಷಣಗಳು ಈ ಬೇನೆಯಲ್ಲಿ ಕಾಣಿಸಿಕೊಳ್ಳುವದರಿಂದ ತಪ್ಪು ತಿಳುವಳಿಕೆಯಾಗಬಾರದೆಂದು ಜಲಸಂತ್ರಾಸ ಲಕ್ಷಣ ಇಲ್ಲಿ ಹೇಳಿದೆ.

**ಕಾರಣ ಮೀಮಾಂಸೆ:—** ಹುಚ್ಚು ನಾಯಿ ಕಚ್ಚುವದರಿಂದ ಈ ಬೇನೆ ಬರುತ್ತದೆ. ಹುಚ್ಚು ನಾಯಿಯ ಜೊಲ್ಲಿನಲ್ಲಿ ಇದರ ಕ್ರಿಮಿಗಳು ಇರುತ್ತವೆ. ಕುನ್ನಿ ಕಡಿದಮೇಲೆ ರಕ್ತದಲ್ಲಿ ಕ್ರಿಮಿಗಳು ಸೇರಿದ ನಂತರ ರೋಗಕ್ಕೆ ಆರಂಭವಾಗುತ್ತದೆ.

**ರೋಗದ ಉತ್ಪತ್ತಿ:—** ಈ ಬೇನೆ ನಾಯಿ, ನರಿ, ತೋಳ, ಕುದುರೆ, ಕತ್ತೆಗಳಲ್ಲಿ ಹಬ್ಬುವದು ಕಂಡುಬರುತ್ತದೆ. ಇದು ಭಾರೀ ಅಂಟು ರೋಗ. ಈ ಬೇನೆ ಬಂದ ಪ್ರಾಣಿಗಳು ಹುಚ್ಚಾಗಿ ಒಂದನ್ನೊಂದು ಕಚ್ಚಿಕೊಳ್ಳುವದರ ಮೂಲಕ ಇದು ಹಬ್ಬಿಕೊಳ್ಳುತ್ತದೆ. ಅಂತೇ ಇಂತಹ ಪ್ರಾಣಿಗಳನ್ನು ಒಡನೆಯೇ ಗುಂಡಿಕ್ಕಿ ಕೊಲ್ಲುವದು ಹಿತ. ಮೇಲ್ಕಂಡ ಪ್ರಾಣಿಗಳಲ್ಲಿ ಯಾವುದೇ ಪ್ರಾಣಿ ಹುಚ್ಚಾದಾಗ ಕಡಿದರೆ ಈ ಬೇನೆ ಬಂದೇತೀರುತ್ತದೆ.

**ಹುಚ್ಚು ಹಿಡಿದ ಪ್ರಾಣಿಗಳ ಲಕ್ಷಣ:—** ಅವಕ್ಕೆ ಮೊದಲಿಗೆಜ್ವರಬರುತ್ತದೆ. ಆಗ ಸಿಡುಕುತನಮಾಡುತ್ತವೆ. ಹೆಚ್ಚಾಗಿಕುದುರೆ ಮತ್ತು ನಾಯಿಗಳಲ್ಲಿ ಈ ವ್ಯತ್ಯಾಸ ಉಂಟಾಗಿದ್ದು ಕೂಡಲೇ ಕಂಡುಬರುತ್ತದೆ. ತಮ್ಮ ಒಡೆಯನ ಮೇಲೆಯೇ ತಿರುಗಿಬೀಳುತ್ತವೆ. ಗುರುಗುಟ್ಟುತ್ತ ಕಡಿಯುತ್ತವೆ. ಅವುಗಳ ಧನಿ ಗಡುಸಾಗುವದಲ್ಲದೆ ಮೇಲಿಂದಮೇಲೆ ಕೂಗಿಕೊಳ್ಳುತ್ತವೆ. ಸೊಟ್ಟ ಮೋರೆ, ಜೋಲುಗಿವಿ ಮಾಡಿಕೊಂಡು ಕಾಲ ಸಂದಿಯಲ್ಲಿ ಬಾಲ ಹಾಕಿಕೊಂಡು ಓಡಹತ್ತುತ್ತವೆ. ಬಾಯಿಂದ ಜಿಗುಟಾದ ಜೊಲ್ಲುಸುರಿಯುತ್ತಿರುತ್ತದೆ. ಕೊನೆಗೆ ಮೈಯಲ್ಲಿ ಶಿಥಿಲವಾಗಿ ನಡುಗುತ್ತ ಸತ್ತುಹೋಗುತ್ತವೆ. ಸಾಮಾನ್ಯವಾಗಿ ರೋಗ ಬಂದು ೧೦ ದಿನಗಳೊಳಗೇ ಪ್ರಾಣಿ ಸಾಯುತ್ತದೆ. ಇದರ ಮೇಲಿಂದಲೇ ನಾಯಿಗೆ ರೋಗಬಂದಿತ್ತು ಎಂಬದು ಗೊತ್ತಾಗಿ ಚಿಕಿತ್ಸೆಗೆ ನಿರ್ಧಾರ ಬರುತ್ತದೆ.

**ಕಾಲ ಸಂಪ್ರಾಪ್ತಿ:—** ೪೨ ದಿವಸಗಳು. ಹುಚ್ಚುನಾಯಿ ಕಚ್ಚಿದಮೇಲೆ ಆ ಗಾಯ ತುಂಬಿ ಬಂದರೂ ಕ್ರಿಮಿಗಳು ಒಳಗೇ ಉಳಿದುಕೊಳ್ಳುತ್ತವೆ. ಇದು ಮನುಷ್ಯನ ಲಕ್ಷಕ್ಕೇ ಬರುವದಿಲ್ಲ. ಆನಂತರ ೪೨ ದಿನಗಳ ಮೇಲೆ ರೋಗ ಉತ್ಪನ್ನವಾಗುತ್ತದೆ. ಅಂತೆಯೇ ನಾಯಿ ಕಡಿದೊಡನೆ ಅದು

ಹುಚ್ಚೋ ಹೇಗೆಂಬದನ್ನು ವಿಚಾರಿಸಿ ತಿಳಿದುಕೊಳ್ಳಬೇಕಾಗುತ್ತದೆ. ಹುಚ್ಚಾ ದದ್ದೇ ಇದ್ದರೆ ಚಿಕಿತ್ಸೆ ಅಪರಿಹಾರ್ಯ.

**ಲಕ್ಷಣ ಮತ್ತು ಭಾವನೆಗಳುಃ—** (೧) ಯಾವದೇ ವಸ್ತುವನ್ನು ನುಂಗುವಾಗ ಶ್ವಾಸ ನಲಿಕೆ ಕಟ್ಟುವದರಿಂದ ರೋಗಿ ಉಸಿರು ಕಟ್ಟಿ ಕಸಿವಿಸಿ ಗೊಳ್ಳುತ್ತಾನೆ. ಇದರಿಂದ ತಿನ್ನೋಣ ನಿಲ್ಲುವದಲ್ಲದೆ ಹನಿ ನೀರೂ ಹೊಟ್ಟೆ ಹೊಗುವದಿಲ್ಲ. ನೀರಡಿಸಿ ಒಳಗೆಲ್ಲಾ ಒಣಗಿ ಹೋದರೂ ನೀರು ಎದು ರಿಗಿದ್ದೂ ಕುಡಿಯಲು ಬರದೆ ಬಳಲಿ ಸಾಯುತ್ತಾನೆ.

(೨) ಜ್ವರ. (೩) ಬಾಯಿಂದ ಜಿಗಟು ಜೊಲ್ಲು ಸೋರುತ್ತದೆ.

(೪) ಪ್ರಲಾಪಕ—ಬಡಬಡಿಕೆ. (೫) ತಲೆ ಕೆಟ್ಟು ಸಾವು ಬರೋಣ. ೪೨ ದಿನಗಳ ನಂತರ ೪—೫ ದಿನಗಳಲ್ಲಿ ರೋಗಿಗೆ ಮರಣ ಬರುತ್ತದೆ.

**ಭೇದಕ ನಿದಾನ:—** ಮೇಲೆ ಬರೆದ ಜಲಸಂತ್ರಾಸ ಮತ್ತು ಧನು ರ್ವಾತಗಳಲ್ಲಿ ನುಂಗುವ ತ್ರಾಸ ಸಮಾನವಾಗಿದ್ದರೂ ಧನುರ್ವಾತದ ಮಣಿತ ಇದರಲ್ಲಿರುವದಿಲ್ಲ.

**ಚಿಕಿತ್ಸೆ:—** ಇದು ಬಲು ಭಯಂಕರ ರೋಗ. ಲಕ್ಷಣ ಶುರುವಾದ ಮೇಲೆ ಏನೂ ಉಪಚಾರ ನಡೆಯುವದಿಲ್ಲ. ಅಂತೇ ಹುಚ್ಚುಹಿಡಿದ ಪ್ರಾಣಿ ಗಳು ಕಡಿದ ಕೂಡಲೇ ಕಡಿಸಿಕೊಂಡವರಿಗೆ ಎಂಟಿರಾಬಿಡ್‌ಸಿರಂ ಇಂಜ ಕ್ಶನ್ನುಗಳನ್ನು ಕೊಡಬೇಕು. ಈ ಚುಚ್ಚುಮದ್ದು ಸರಕಾರೀ ದವಾಖಾನೆ ಗಳಲ್ಲೆಲ್ಲ ಫುಕ್ಕಟೆಯಾಗಿ ಕೊಡುವ ವ್ಯವಸ್ಥೆಮಾಡಿ ಇಡಲ್ಪಟ್ಟಿದೆ. ಇದರ ಉಪಯೋಗವನ್ನು ಆಗತ್ಯವಾಗಿ ಮಾಡಿಕೊಳ್ಳಲೇಬೇಕು. ಅಂತೂ ೧೪ ಇಂಜಕ್ಶನ್ನುಗಳು ಆಗಲೇಬೇಕು. ಅವೂ ಕಡಿದ ೨೧ ದಿನಗಳಲ್ಲಿಯೇ ಮುಗಿಯುವಂತೆ ಮಾಡಿಸಿಕೊಳ್ಳಬೇಕು.

# ಮಸ್ತಿಷ್ಕಾವರಣ ದಾಹ

## Meningitis ಮೆನಿನ್ ಜಾಯ್‌ಟಿಸ್

**ಸಾಮಾನ್ಯ ವರ್ಣನೆ:—** ಜಲ ಸಂತ್ರಾಸ ಮತ್ತು ಮಸ್ತಿಷ್ಕಾವರಣ ದಾಹಗಳಲ್ಲಿ ಮಸ್ತಿಷ್ಕ ವಿಕೃತಿಸಮಾನವಾಗಿರೋಣದರಿಂದ ಮಸ್ತಿಷ್ಕಾವರಣ ದಾಹದ ವಿಚಾರ ಇಲ್ಲಿ ಮಾಡಬೇಕಾಗಿದೆ. ಇದರಲ್ಲಿ ಮೆದುಳಿನ ಆವರಣಗಳು (ಮೆನಿಂಜಿಸ್) ಮತ್ತು ಪೃಷ್ಠವಂಶ ರಜ್ಜುಗಳೊಳಗೆ ವಿಕೃತಿ ಸಂಭವಿಸುತ್ತದೆ. ಇದೂ ಪಿಡುಗಿನ ರೂಪವಾಗಿ ಬರುವ ಅಂಟುರೋಗಗಳಲ್ಲೊಂದು. ಆದರೆ ಬೇರೆ ರೋಗಗಳಲ್ಲಿ ಅಂದರೆ ಆಂತ್ರಿಕ, ಶ್ಲೇಷ್ಮಕ, ಸನ್ನಿಪಾತ ಮೊದಲಾದವುಗಳಲ್ಲಿ ಇದು ಉಪದ್ರವ ರೂಪವಾಗಿ ಬಂದಾಗ ಸಾಂಸರ್ಗಿಕವಾಗಿರುವದಿಲ್ಲ. ಇದು ಭಯಂಕರ ಪ್ರಾಣ ಘಾತುಕ ರೋಗ. ೨-೩ ದಿನಗಳಲ್ಲೇ ಕ್ವಚಿತ್ತಾಗಿ ಸಾವಿನ ಬಾಯಿಗೆ ಬೀಳುವದೂ ಉಂಟು.

**ಕಾರಣ ಮೀಮಾಂಸೆ:—** ಮೆನಿಂಗೋ ಕಾಕಸ್ ಎಂಬ ಕ್ರಿಮಿಗಳಿಂದ ಇದು ಹುಟ್ಟುವದು. ಈ ಕ್ರಿಮಿಗಳು ಹವೆಯ ಕೂಡ ಮೂಗಿನೊಳಗಿಂದ ರಸವಾಹಿನಿ (ಲಿಂಫ್ಯಾಟಿಕ್ಸ) ಗಳ ದ್ವಾರಾ ಮೆದುಳಿನಲ್ಲಿ ಸೇರಿ ರೋಗವನ್ನು ತರುತ್ತವೆ. ಇದರಿಂದ ಜ್ವರವೇ ಮುಂತಾದ ಲಕ್ಷಣಗಳಿಗೆ ಮೊದಲಾಗುತ್ತದೆ.

**ಕಾಲ ಸಂಪ್ರಾಪ್ತಿ:—** ೧ ರಿಂದ ೫ ದಿನಗಳ ಪರ್ಯಂತರ.

**ಸಂಪ್ರಾಪ್ತಿ:—** ಈ ವಿಕಾರ ಚಿಕ್ಕ ಮಕ್ಕಳಲ್ಲಿ ವಿಶೇಷವಾಗಿ ಕಂಡು ಬರುತ್ತದೆ. ಗಂಟಲು ಚುಟಿಕಿ (ಟಾನ್ಸಿಲ್ಸ) ಗಳು ಬೆಳೆದವರು ಮತ್ತು ಮೇಲಿಂದಮೇಲೆ ನೆಗಡಿ-ಕೆಮ್ಮುಗಳ ಬಾಧೆ ವಿಶೇಷವಾಗಿರುವ ಹುಡುಗರಲ್ಲಿ ಇದು ಬರುವದು ಹೆಚ್ಚು. ಒಮ್ಮೊಮ್ಮೆ ದೊಡ್ಡವರಿಗೂ ಈ ರೋಗವಾಗುವದುಂಟು. ಇದರ ಕ್ರಿಮಿಗಳು ಮಸ್ತಿಷ್ಕಾವರಣದಲ್ಲಿ ಉರಿ ಮತ್ತು ಬಾವುಗಳನ್ನು ಹುಟ್ಟಿಸುತ್ತವೆ. ಹಾಗೆಯೇ ಮುಂದೆ ಪೃಷ್ಠವಂಶದಲ್ಲಿಯ ದ್ರವ ಅಂದರೆ ಬೆನ್ನಿನ ಹುರಿಯೊಳಗಿನ ರಸ ಹೆಚ್ಚಾಗಿ ರೋಗ ಆರಂಭವಾಗುತ್ತದೆ.

**ಲಕ್ಷಣ ಮತ್ತು ಭಾವನೆಗಳು:—** ಒಮ್ಮಿಂದೊಮ್ಮೆ ಚಳಿಯಾಗಿ ಜ್ವರ

೧೦೩°-೪° ರವರೆಗೆ ತುಂಬುತ್ತವೆ. ತಲೆ ಭಾರೀ ಹೊಡೆಸಹತ್ತುತ್ತದೆ. ಹುಡುಗರು ಗಟ್ಟಿಗಟ್ಟಿಸಿ ಚೀರುತ್ತಾರೆ. ಬೇನೆಯ ಅಬ್ಬರ ಕಡಿಮೆಯಾಗಿದ್ದರೆ ಏಳು ದಿನಗಳಲ್ಲಿ ಜ್ವರ ಇಳಿದು ರೋಗಿ ಚೇತರಿಸಿಕೊಳ್ಳುತ್ತಾನೆ. ಆದರೆ ರೋಗ ತೀವ್ರವಾಗಿದ್ದರೆ ಬೇಗನೆ ಎಚ್ಚರ ತಪ್ಪುತ್ತದೆ. ಎಚ್ಚರಿಲ್ಲದಾಗಲೂ ರೋಗಿ ಚೀರುತ್ತಿರುತ್ತಾನೆ. ಕೆಲವರಿಗೆ ಸೆಟೆತಗಳು ಬರುತ್ತವೆ, ಕಂಣುಗಳು ಒಂದು ಸಣ್ಣದು, ಒಂದು ದೊಡ್ಡದಾಗುತ್ತವೆ, ಕ್ವಚಿತ್ತಾಗಿ ತಿರುಸುಗಂಣೂ ಆಗುವದಲ್ಲದೆ ಕಂಣುಗಳು ಹೊರಗೂ ತಿರುಗುತ್ತವೆ. ಕಾರಿಕೊಳ್ಳುತ್ತಾರೆ, ಗೋಣು ಗಿಬಿಯುತ್ತದೆ, ಆದರಲ್ಲಿಯೇ ಶೂಲಿಯೂ ಬರುತ್ತದೆ, ಗೋಣನ್ನು ಮುಂದಕ್ಕೆ ದಬ್ಬಿದರೆ ಕಾಲು ಮೇಲಕ್ಕೇಳುತ್ತವೆ, ಮೈಮೇಲೆ ಮಧುರಾ ಅಂದರೆ ಬೊಕ್ಕೆಗಳೇಳುತ್ತವೆ, ನಿದ್ದೆಗೇಡು, ಬಡಬಡಿಕೆ, ಕೆಂಗಂಣು, ಗೋಣು ಹಾಕೋಣ, ಮುಖ ಕೆಂಪೇರುವದೇ ಮುಂತಾದ ಲಕ್ಷಣಗಳಾಗುವವು. ನಾಡಿ ಬಹಳೇ ಅನಿಯಮಿತವಾಗಿರುತ್ತವೆ.

**ನಿದಾನ:**–ಅತಿಶಯ ತಲೆಶೂಲಿ, ಎಚ್ಚರಿಲ್ಲದಿರುವಿಕೆ ಮತ್ತು ಗೋಣು ಬಿಗಿಯೋಣಗಳಿಂದ ರೋಗ ನಿಶ್ಚಿತ ಮಾಡಬರುತ್ತದೆ.

**ಸಾಧ್ಯಾಸಾಧ್ಯತ್ವ:**— ಇದು ಪಿಡುಗಾಗಿ ಬಂದಾಗ ಜನ ಸಾಯುವದು ಬಹಳ. ಬೆನ್ನುಹುರಿಯೊಳಗಿನ ರಸ ತೆಗೆದೊಗೆದು ಅದೇ ಹೊತ್ತಿನಲ್ಲಿ ಈ ರೋಗದ ಸೀರಂ ಕೊಟ್ಟರೆ ರೋಗಿ ಸುಧಾರಿಸುವನೆಂದು ಆಶೆ ಮಾಡಬಹುದು.

**ದೋಷದೂಷ್ಯ ವಿಚಾರ:**— ಇದು ಸಾನ್ನಿಪಾತಿಕ ರೋಗವಾಗಿದೆಯಲ್ಲದೆ ಇದರಲ್ಲಿ ಮೆದುಳು, ವಾತವಹಕೇಂದ್ರ, ನಾಡೀಚಕ್ರಗಳು ಮತ್ತು ಬೇರೆ ವಾತವಾಹಿನಿಗಳು ವಿಕೃತವಾಗಿರುತ್ತವೆ.

**ಚಿಕಿತ್ಸೆ:**— (೧) ಸನ್ನಿಪಾತ ಭೈರವ ೧ ಗುಂಜಿ, + ಸುವರ್ಣಮಾಕ್ಷಿಕ ೨ ಗುಂ, + ಪ್ರವಾಳ ೪ ಗುಂಜಿ. ಕಾಡಿಗ್ಗರಗಿನ ರಸದಲ್ಲಿ.

(೨) [ ಪಿತ್ತಭೂಯಿಷ್ಟತಾ ] ಸುವರ್ಣ ಸೂತಶೇಖರ ೨ ಗುಂಜಿ + ಪ್ರವಾಳ ೪ ಗುಂಜಿ, ಖಾರಗೆಣಸಿನ ಸುಂಣತೆಗೆದ ರಸ ಜೇನುತುಪ್ಪಗಳಲ್ಲಿ.

(೩) ಮೌಕ್ತಿಕಯುಕ್ತ ಕಾಮದುಘಾ ೪ಗುಂಜಿ ನೆಲ್ಲೀಕಾಯಿ ಪಾಕದಲ್ಲಿ.

(೪) ಚಂದ್ರಕಲಾ ೨ ಗುಂಜಿ + ಮೌಕ್ತಿಕ ೧ ಗುಂಜಿ ಸುವರ್ಣ ಮಾಕ್ಷಿಕ ೧ ಗುಂಜಿ ಜೇನುತುಪ್ಪದಲ್ಲಿ.

(೫) [ ವಾತಭೂಯಿಷ್ಟತಾ ] ಮಹಾವಾತವಿಧ್ವಂಸ ೧ ಗುಂಜಿ + ಸುವರ್ಣಮಾಕ್ಷಿಕ ೨ ಗುಂಜಿ ಜೇನಿನಲ್ಲಿ.

(೬) [ ಕಫಭೂಯಿಷ್ಟತಾ ] ಸ್ಮೃತಿಸಾಗರ ೨ ಗುಂಜಿ + ಪ್ರವಾಳ ೪ ಗುಂಜಿ.

(೭) ಆಕ್ಷೇಪ (ಸೆಟೆತ) ತಾಪ್ಯಾದಿ ಲೋಹ ೬ ಗುಂಜಿ. ಕಪ್ಪುರಾಪ್ಯ ಭಸ್ಮ ೧ ಗುಂಜಿ ಕಾಡಿಗ್ಗರಗಿನ ರಸ ಜೇನಿನಲ್ಲಿ. ಈ ಬೇನೆಯಲ್ಲಿ ನುಂಗಲಿಕ್ಕೆ ಬರುವದಿಲ್ಲವಾದ್ದರಿಂದ ಔಷಧಿ ನೆಕ್ಕಿಸಲೇಬೇಕಾಗುತ್ತದೆ.

## ಉಪದ್ರವಯುಕ್ತ

(೧) **ಉಪದಂಶದಿಂದಃ—** ಅಷ್ಟಮೂರ್ತಿ ರಸಾಯನ ೨ ಗುಂಜಿ + ಪ್ರವಾಳ ೪ ಗುಂಜಿ ಸಾರಿವಾದ ಕಷಾಯದಲ್ಲಿ. ಅಥವಾ ಚೋಪಚಿನ್ನಿ + ಮಂಜಿಷ್ಠಾ + ಪುನರ್ನವಾಗಳ ಕಷಾಯ.

(೨) **ಆಂತ್ರಿಕ–ಟಾಯಿಫಾಯಿಡ್‌ದಲ್ಲಿಃ—** ಸುವರ್ಣ ಸೂತಶೇಖರ ೨ ಗುಂಜಿ + ಚಂದ್ರಕಲಾ ೨ ಗುಂಜಿ ಜೇನಿನಲ್ಲಿ.

(೩) **ಕ್ಷಯದಲ್ಲಿಃ—** (ಅ) ಅಭ್ರಕ ಮತ್ತು ಮೌಕ್ತಿಕ. (ಆ) ಸುವರ್ಣ ಮತ್ತು ಮೃಗಶೃಂಗ.

**ಲೇಪಃ—** ಬಜೀ ಮತ್ತು ಬ್ರಾಹ್ಮೀ ತಪ್ಪಲಗಳನ್ನು ಅರೆದು ಹಣೆಗೆ ಹಚ್ಚಬೇಕು.

**ನಸ್ಯಃ—** ಕಾಡಿಗ್ಗರಗಿನ ರಸ ಬ್ರಾಹ್ಮೀ ರಸಗಳಲ್ಲಿ ಮೆಣಸಿನ ಕಾಳು ತೇದು ಏರಿಸಬೇಕು.

## ಆ್ಯಲೋಪಥಿ

**ಪ್ರತಿಬಂಧಕಃ—** (೧) ಇನಾಕ್ಯುಲೇಶನ್ (೨) ಪಿಡುಗು ಹಬ್ಬ ಬಾರದೆಂದು ಶಾಲೆ, ಕಾಲೇಜ, ಸಂತೆಗಳನ್ನು ಮುಚ್ಚಿಬಿಡುತ್ತಾರೆ.

**ಪ್ರತೀಕಾರಾತ್ಮಕ:—** ಎಂಟಿ ಮೆನಿಂಗೋಕಾಕಲ್ ಸೀರಂ ಇಂಜಕ್ಶನ್-ಇದು ಭಾರೀಪ್ರಭಾವೀ ಚುಚ್ಚುಮದ್ದು. ಬೆನ್ನಹುರಿಯ ನೀರನ್ನು ದಿನಕ್ಕೆ ೨ ಸಲ ತೆಗೆದೊಗೆದು ಇದನ್ನು ಚುಚ್ಚುತ್ತಾರೆ. ಒಂದು ದಿನದಲ್ಲಿ ಮೂರು ಸಾವಿರ ಯುನಿಟ್ ಕೊಡುತ್ತಾರೆ. ಬೆನ್ನುಹುರಿಯಲ್ಲಿ ಚುಚ್ಚುವದು ಉತ್ತಮ. ಆದರೆ ಕ್ವಚಿತ್ತಾಗಿ ನರದಲ್ಲಿ ಮಾಂಸಖಂಡದಲ್ಲಿಯೂ ಕೊಡುತ್ತಾರೆ. ಇತ್ತೀಚೆಗೆ ಪೆನಿಸಿಲಿನ್ ಕೂಡ ಉಪಯೋಗಿಸುತ್ತಿದ್ದಾರೆ.

**ಬಾಯೋಕೆಮಿಕ್** (ಮಕ್ಕಳಿಗಾಗಿ)

(೧) **ಜ್ವರಃ—** ಫೆ. ಫಾ. (೨) **ಮಾನಸಿಕಭಾವನಾಃ—** ಕಲ್ಕೇ. ಫಾ. ಅಥವಾ ನೇ. ಸ.

(೩) **ಮಬ್ಬು ಮತ್ತು ಬಡಬಡಿಕೆಃ—** ನೇ. ಮ್ಯೂ.

# ಮಕ್ಕಳ ಬೇನೆಗಳು

ಚಿಕ್ಕಮಕ್ಕಳ ಪ್ರಕೃತಿ ಬಲು ನಾಜೂಕ ಇರುವದರಿಂದ ಮಕ್ಕಳ ರೋಗಗಳ ವಿಚಾರವನ್ನು ಸ್ವತಂತ್ರವಾಗಿ ಮಾಡುವದು ಅಗತ್ಯವು. ಹಾಗೆಯೇ ಮಕ್ಕಳಿಗೆ ಹಲ್ಲು ಬರುವಾಗ ಹೆಚ್ಚು ತ್ರಾಸವಾಗುವದರಿಂದ ಆಗ ವಿಶೇಷ ಕಾಳಜಿ ವಹಿಸಬೇಕಾಗುತ್ತದೆ.

**ಮಕ್ಕಳ ಪ್ರಕಾರಃ—** (೧) ಸ್ತನಂಧಯ—ಮೊಲೆಗೂಸು. (೨) ಮೊಲೆ ಕುಡಿಯುತ್ತಲಿದ್ದು ಸ್ವಲ್ಪವೇ ಉಣ್ಣುತ್ತಿರುವದು. (೩) ಬರಿ ಅನ್ನವನ್ನೇ ಅವಲಂಬಿಸಿದ್ದು. ಈ ಮೂರು ಅವಸ್ಥೆಗಳನ್ನು ಮನದಂದು ಔಷಧಿಗಳನ್ನು ಯೋಜಿಸಬೇಕಾಗುತ್ತದೆ. ಕೂಸು ಹುಟ್ಟಿದಾಗಿನಿಂದ ಹಲ್ಲು ಬರುವ ವರೆಗಿನ ಅವಸ್ಥೆಯಲ್ಲಿ ಉಂಟಾಗುವ ವಿಕಾರ:–ಇದರಲ್ಲಿ ನೆಗಡಿ, ಕೆಮ್ಮು, ಜ್ವರ, ಮಲಾವರೋಧ ಮುಂತಾದವುಗಳೂ ಬರುತ್ತವೆ. ಆ ಮೇಲೆ ಸಾಮಾನ್ಯವಾಗಿ ೬ನೇ ತಿಂಗಳಿನಿಂದ ಹಲ್ಲು ಒಡೆಯಲು ಆರಂಭವಾಗುತ್ತದೆ. ಕೆಲವಕ್ಕೆ ೧ ವರ್ಷದ ನಂತರವೂ ಹಲ್ಲು ಬರುತ್ತವೆ. ಹಲ್ಲು ಬರಲಿಕ್ಕೆ

ತಡವಾದಷ್ಟೂ ವಸಡಿಗಳು ಗಟ್ಟಿಯಾಗಿ ಮಕ್ಕಳಿಗೆ ಹಲ್ಲಿನ ತ್ರಾಸ ಬಹಳವಾಗುತ್ತದೆ.

"ದಂತೋದ್ಭವೇತು ಬಾಲಾನಾಂ ನಕಿಂಚಿನ್ನ ಹಿದೂಯತೇ" ಹಲ್ಲು ಬರುವಾಗ ಮಕ್ಕಳಿಗೆ ಆಗಬಾರದ ವಿಕಾರಗಳಿಲ್ಲ. ಎಂದು ಆಯುರ್ವೇದದಲ್ಲಿ ಹೇಳಿದೆ. ಹಲ್ಲು ಒಡಿಯಹತ್ತಿದವೆಂದರೆ ಜ್ವರ, ಹೊಟ್ಟೆ ಜಾಡಿಸೋಣಗಳಲ್ಲದೆ ಕ್ವಚಿತ್ತಾಗಿ ಸೆಟೆತಗಳೂ ಬರುವದುಂಟು. ಮೂರು ವರ್ಷಗಳಲ್ಲಿ ಹಾಲು ಹಲ್ಲುಗಳೆಲ್ಲಾ (೨೦) ಬಂದುಬಿಡುತ್ತವೆ. ಹಲ್ಲು ಬಂದ ಹಾಗೆಲ್ಲಾ ಮಕ್ಕಳು ಹಾಲು ಬಿಟ್ಟು ಅನ್ನ ತಿನ್ನಲಿಕ್ಕೆ ಪ್ರಾರಂಭಿಸುತ್ತವೆ. ಈಗಲೇ ಅವಕ್ಕೆ ಅಪಚನ, ವಾಂತಿ, ಭೇದಿ, ಜ್ವರ ಮುಂತಾದ ವಿಕಾರಗಳು ಸಂಭವಿಸುತ್ತಿವೆ. ಹೆಚ್ಚಿಗೆ ಬೆಲ್ಲ ತಿನ್ನುವದರಿಂದ ಹೊಟ್ಟೆಯಲ್ಲಿ ಕ್ರಿಮಿಗಳಾಗುತ್ತವೆ. ಈ ಜಂತುಗಳಿಂದಲೂ ಹಲವಾರು ವಿಕಾರಗಳು ಕಂಡು ಬರುತ್ತವೆ. ಪೋಷಣಾಭಾವದಿಂದ ಮಕ್ಕಳಿಗೆ ಪಾಂಡುರೋಗವಾಗುತ್ತದೆ. ಇದೇ ಕಾಲಕ್ಕೆ ಮಣ್ಣು ತಿನ್ನಲು ಆರಂಭಿಸುತ್ತವೆ. ಆದರಿಂದ ಯಕೃತ್ತು ಕೆಟ್ಟು ಮೈಗೆ ಬಾವು ಬರುತ್ತದೆ. ಅಥವಾ ಮುಡದೋಷ ಇಲ್ಲವೆ ಉದರದಂಥ ಬೇನೆ ಬಂದು ಅಸಂಖ್ಯ ಮಕ್ಕಳು ಕೈ ಬಿಡುತ್ತವೆ.

**ಆನುವಂಶಿಕ ರೋಗಃ—** ತಾಯ್ತಂದೆಗಳ ರೋಗದ ಪರಿಣಾಮ ಮಕ್ಕಳಮೇಲೆ ಆಗುವದೇ ಸರಿ. ಗರ್ಮಿ, ಪರಮಾ ಮೊದಲಾದ ರೋಗಗಳಿಂದ ಹುಟ್ಟುವಾಗಲೇ ಮೈ ಸುಟ್ಟಂತಾಗಿದ್ದು ಕೆಲವೇ ದಿನಗಳಲ್ಲಿ ತೀರಿಕೊಳ್ಳುತ್ತವೆ. ಅಥವಾ ಅಂಗಹೀನ ಮತ್ತು ರೋಗಿಷ್ಟವಾಗಿರುತ್ತವೆ. ಖಜ್ಜಿ, ಇಸಬು, ದಮ್ಮು, ಹಿರೇಬೇನೆ, ಕ್ಷಯ ಮೊದಲಾದವುಗಳಿಂದ ಪೀಡಿತರಾದವರ ಇಂಥ ಸಂತತಿಯೂ ರೋಗಿಷ್ಟ ಮತ್ತು ಅಲ್ಪಾಯುಷಿಗಳಾಗಿ ಹುಟ್ಟದೆ ವಿಧಿಯಿಲ್ಲ.

**ಬೇರೆ ವಿಕಾರಗಳುಃ—** ವೈಲಿ, ಗೊಬ್ಬರ, ನ್ಯುಮೋನಿಯಾ, ಬಾಲಗ್ರಹ, ಕೋಡಗ ಕೆಮ್ಮು, ಘಟಸರ್ಪ, ಮಂಗ್ಯಾನ ಬಾವು, ಅರ್ಧಾಂಗ, ವಾತ ಮುಂತಾದವಿಕಾರಗಳಂತೂ ಖಂಡಿತವಾಗಿಯೂ ಮಕ್ಕಳವೈರಿಗಳು. ಇವೆಲ್ಲಾ ಹೊಡೆತಗಳಿಂದ ಪಾರಾಗಿ ಬದುಕುವ ಮಕ್ಕಳೇ ದೈವಶಾಲಿಗಳು.

**ಭಾರತದ ದುರ್ದಶೆ ಮತ್ತು ವೈದ್ಯರ ಕರ್ತವ್ಯ:-** ಕಳೆದ ಮಹಾ ಯುದ್ಧವಾದಾಗಿನಿಂದ ಭಾರತದ ಅನ್ನ ಧಾನ್ಯಗಳ ಪರಿಸ್ಥಿತಿ ಬಹಳೇ ಕೆಟ್ಟು ಹೋಗಿದೆ. ಹಾಲು ಮೊದಲಾದ ಸಾತ್ವಿಕ ಅನ್ನಗಳು ಎಲ್ಲೆಲ್ಲಿಯೂ ದುರ್ಮಿಳ ವಾಗಿಬಿಟ್ಟಿವೆ. ಆದರಿಂದ ಜನರಲ್ಲಿಯ ನೈಸರ್ಗಿಕ ರೋಗ ಪ್ರತೀಕಾರ ಶಕ್ತಿ ದಿನದಿನಕ್ಕೆ ಕಮ್ಮಿಯಾಗುತ್ತಿರುವದರಿಂದ ಲಕ್ಷಾವಧಿ ಮಕ್ಕಳು ಮೃತ್ಯುವಿನಬಾಯಲ್ಲಿ ಬೀಳುತ್ತಿದ್ದಾರೆ. ಈ ಮಕ್ಕಳಿಗೆ ತಕ್ಕ ಉಪಚಾರವಾದರೆ ಅನೇಕರಿಗೆ ಪ್ರಾಣದಾನ ಮಾಡಿದ ಪುಣ್ಯ ಬರುತ್ತದೆ. ರಶಿಯಾ ಮತ್ತು ಅಮೇರಿಕಾ ಮೊದಲಾದ ಪಶ್ಚಿಮ ದೇಶಗಳಲ್ಲಿ ಸಣ್ಣ ಹುಡುಗರ ಆರೋಗ್ಯಕ್ಕಾಗಿ ಬಹಳ ಎಚ್ಚರಪಡುತ್ತಿದ್ದಾರೆ. ಮಕ್ಕಳೇ ರಾಷ್ಟ್ರದ ಅಮೌಲಿಕ ಸಂಪತ್ತಾಗಿದ್ದು ಮುಂದಿನ ಆಧಾರಸ್ಥಂಭವಾಗಿದ್ದಾರೆ.

## ಮಕ್ಕಳಜ್ವರ

(೧) ಬಾಲಸಂಜೀವನೀ ಚೂರ್ಣ ೨ಗುಂಜಿ+ಪ್ರವಾಳ ಭಸ್ಮ ೧ ಗುಂಜಿ ೪ ಚೀಟು ಜೇನಿನಲ್ಲಿ.

(೨)ಪ್ರವಾಳ ೧ಗುಂಜಿ+ಅಮೃತಸತ್ವ ೨ಗುಂಜಿ ೪ಚೀಟು ಮೊಲೆಹಾಲಿನಲ್ಲಿ.

(೩)ಫೇ. ಫಾ. ಕಾ.ಮೂ. ಗಳನ್ನು ಅದಲು ಬದಲು ಮಾಡಿ ಬಿಸಿನೀರಿನಲ್ಲಿ ಕೊಡಬೇಕು.

## ಮಕ್ಕಳ ಕೆಮ್ಮು

(೧)ಸಿತೋಪಲಾದಿ ಚೂರ್ಣ ೧ಗುಂಜಿ+ಜೇಷ್ಟಮಧು ೨ಗುಂಜಿ ೪ ಚೀಟು ಜೇನಿನಲ್ಲಿ.

(೨)ದ್ರಾಕ್ಷಾಸವ ಅಥವಾ ಕುಮಾರಿಆಸವ ನಂತ ಕೂಸಿಗಾದ ತಿಂಗಳಿನ ಎರಡಷ್ಟು ಹನಿ ಬಿಸಿನೀರಿನಲ್ಲಿ.

(೩)ಮೃಗಶೃಂಗ ೧ಗುಂಜಿ +ಜೇಷ್ಟಮಧು ೨ಗುಂಜಿ ಜೇನಿನಲ್ಲಿ ನೆಕ್ಕಿಸಬೇಕು.

(೪) ರೇವಾಚಿನ್ನಿ ಅರ್ಕ ೨ ಗುಂಜಿ+ಜೇಷ್ಟಮಧು ೨ ಗುಂಜಿ ಬಿಸಿನೀರಿನಲ್ಲಿ.

(೫) ಖೊಬ್ಬರೀಎಂಣೆ ನೀಲಗಿರಿಎಂಣೆ ಕೂಡಿಸಿ ವಿದೆಗೆ ತಿಕ್ಕಿ ಕಾಸ ಬೇಕು.

## ಮಕ್ಕಳ ಅತಿಸಾರ

**ಅಪಚನಾತ್ಮಕಃ**-(೧) ಕುಟಜಾರಿಷ್ಟ ೧೦ ಹನಿ ಅಷ್ಟೇ ಬಿಸಿನೀರಿನಲ್ಲಿ. (೨) ಮುಕ್ತಾಶೌಕ್ತಿಕ ೨ ಗುಂಜಿ. ಅಥವಾ ಕಪರ್ದಿಕ ಭಸ್ಮ.

**ದಂತೋದ್ಭವಃ**— (೧) ಪ್ರವಾಳ ೧ ಗುಂಜಿ + ಮುಕ್ತಾಶೌಕ್ತಿಕ ೨ ಗುಂಜಿ ೪ ಚೀಟು ಮೊಲೆಹಾಲಿನಲ್ಲಿ.

(೨) ಹಿಪ್ಪಲಿಯನ್ನು ಜೇನಿನಲ್ಲಿ ತೇದು ವಸಡಿಗೆ ಹಚ್ಚಬೇಕು.

**ಹೊಟ್ಟೆಶೂಲಿಃ**— ಔಡಲ ಎಂಣೆ ಜೇನುತುಪ್ಪ ನೆಕ್ಕಿಸಬೇಕು. ಮತ್ತು ತಾಯಿಗೂ ಸುಂಟಿಯ ಕಷಾಯದಲ್ಲಿ ಹರಳೆಂಣೆ ಕೊಡಬೇಕು.

**ವಿ. ಸೂಚನೆ:**— ಮಕ್ಕಳು ಮೊಲೆ ಕುಡಿಯುತ್ತಿರುವಾಗ ತಾಯಿಯ ಹಾಲು ಕೆಟ್ಟಿದ್ದರೆ ಮಕ್ಕಳಿಗೂ ಬೇನೆ ಬರುತ್ತದೆ ಅಂತೇ ತಾಯಿಗೂ ಅವೇ ಔಷಧಿಗಳನ್ನು ಹೆಚ್ಚಿಗೆ ಪ್ರಮಾಣದಲ್ಲಿ ಕೊಡಬೇಕು ಅಂದರೆ ಮೊಲೆ ಹಾಲಿನ ಮುಖಾಂತರ ಅವು ಕೂಸುಗಳಿಗೂ ತಲುಪುತ್ತವೆ. ಮಕ್ಕಳಿಗೆ ತೀಕ್ಷ್ಣವಾದ ಔಷಧಿಗಳನ್ನು ಹೆಚ್ಚಿಗೆ ಪ್ರಮಾಣದಲ್ಲಿ ಕೊಡಕೂಡದು. ತಾಯಿಗೆ ಹರಳೆಂಣೆ ಕೊಟ್ಟರೆ ಕೂಸಿಗೂ ಭೇದಿಯಾಗುತ್ತದೆ.

ದೊಡ್ಡಭೇದಿ, ಕಂಣು ಒಳ ಸೇರೋಣ, ದನಿಕುಗ್ಗುವದು:- ಜಾತಿ ಫಲಾದಿಚೂರ್ಣ ೪ಗುಂಜಿ ಶೌಕ್ತಿಕ ೨ಗುಂಜಿ ೪ಚೀಟು ಬಿಸಿನೀರಲ್ಲಿ.

(೨) ಕರ್ಪೂರ ರಸ ೪ ಗುಂಜಿ+ಕಪರ್ದಿಕ ಭಸ್ಮ ೧ ಗುಂಜಿ ೪ಚೀಟು ದಾಳಿಂಬರ ಪಾಕದಲ್ಲಿ.

(೩) ಅಹಿಫೇನಾಸವ ಒಂದೊಂದುಹನಿ ಎರಡಷ್ಟು ನೀರಿನಲ್ಲಿ.

(೪) ದಾಳಿಂಬರ ಹಣ್ಣಿನ ಸಿಪ್ಪೀ ನೀರಲ್ಲಿ ತೇದು ಸಕ್ಕರಿ ಹಾಕಿ ಕೊಡಬೇಕು.

---

# ಮಂಗ ಬಾವು

## Mumps — ಮಂಪ್ಸ

**ಸಾಮಾನ್ಯ ವರ್ಣನೆ:—** ಕೆಲವೇಳೆ ಈ ಬೇನೆ ಬಂದುಹೋದರೂ ಮಕ್ಕಳಿಗೆ ಇದರ ಪರಿವೆಯೇ ಇರುವದಿಲ್ಲ. ಕ್ವಚಿತ್ತಾಗಿ ಇದರ ಪಿಡುಗು ಬಂದಾಗಮಾತ್ರ ಮಕ್ಕಳಿಗೆ ಬಹಳೇ ತ್ರಾಸವಾಗುತ್ತದೆ. ಅನೇಕ ಉಪದ್ರವ ಗಳಾಗುತ್ತವೆ. ಇದು ಸಾಂಸರ್ಗಿಕ ರೋಗವಾಗಿದ್ದು ಶಾಲೆಗಳಲ್ಲಿಂದ ಹಬ್ಬು ತ್ತದೆ. ೧೦-೧೨ ವರುಷಗಳವರೆಗೆ ಬಾಲಕರಿಗೆ ಈ ಬಾಧೆ ಬರುವದುಂಟು.

**ಲಕ್ಷಣ ಮತ್ತು ಭಾವನೆ:—** ಕಿವಿಗಳ ಕೆಳಗಿನ ಗಂಟುಗಳು ಬಾತು ನೋಯಹತ್ತುತ್ತವೆ. ಮೊದಲಿಗೆ ಒಂದುಕಿವಿಬಾತು ಎರಡು ದಿನಗಳನಂತರ ಮತ್ತೊಂದು ಬಾಯುತ್ತದೆ. ಬಾಯಿ ತೊಳೆಯಲಿಕ್ಕೆ ಬರುವದಿಲ್ಲ ತಿನ್ನುವಾಗ ತ್ರಾಸವಾಗುತ್ತದೆ. ೧೦೧°ರ ವರೆಗೆ ಜ್ವರವಿರುತ್ತವೆ. ಈ ರೋಗ ಸಾಮಾನ್ಯ ವಾಗಿ ಒಂದು ವಾರವಿರುತ್ತದೆ. ಆ ಮೇಲೆ ಲಕ್ಷಣಗಳು ಕಡಿಮೆಯಾಗುತ್ತವೆ.

**ಉಪದ್ರವಗಳು:—** ಈ ರೋಗದಕ್ಕಿಂತ ರೋಗದಲ್ಲಿ ಬರುವ ಉಪ ದ್ರವಗಳ ತ್ರಾಸವೇ ಹೆಚ್ಚಿನದು. ಉಪದ್ರವಗಳು ಈ ಕೆಳಗಿನವು.

ಅಂಡ ಶೋಥ, ಹೆಣ್ಣು ಹುಡಿಗೆಯರಿಗೆ ಸ್ತ್ರೀ ಬೀಜಕೋಶ(ಓವ್ಹರಿ) ಗಳಿಗೆ ಬಾವುಬಂದು ಹೊಕ್ಕಳದ ಆಕ್ಕ ಪಕ್ಕದಲ್ಲಿ ನೋಯುತ್ತದೆ. ಕೆಲವೇಳೆ ಮೊಲೆಗಳೂ ನೋಯುವದುಂಟು.

**ಚಿಕಿತ್ಸೆ—** (೧)ತ್ರಿಫಳಾ ೪ ಗುಂಜಿ+ಪುನರ್ನವಾ ೪ಗುಂಜಿ ಅಷ್ಟ ಮಾಂಶ ಕಾಢೆ ಮಾಡಿ ಕೊಡಬೇಕು.

(೨)ಶೋಥಹರಲೇಪ ಹಾಲಿನಲ್ಲಿ ತೇದು ಕಿವೀತೆಳಗಿನ ಬಾವಿಗೆ ಹಚ್ಚಬೇಕು.

(೩) ಪ್ರವಾಳ+ಅಮೃತ ಸತ್ವ

(೪) ಫೇ.ಫಾ. (೫)ಗಂಟಿನಮೇಲಿ ಸುಣ್ಣ ಬೆಲ್ಲ ತಿಕ್ಕಿಹಚ್ಚಬೇಕು.

(೬) ಬೆಲಾಡೋನಾ ಪ್ಲಾಸ್ಟರ ಕೂಡಿಸಬೇಕು.

# ಮಕ್ಕಳ ಅರ್ಧಾಂಗ

**Infantile paralysis..........ಇನ್‌ಫೆಂಟಾಯಿಲ್ ಪ್ಯಾರಾಲಸಿಸ್**

**ಸಾಮಾನ್ಯ ವರ್ಣನೆ:—** ಪೋಲಿಯೋ ಮಾಯಿಲಾಯ್‌ಟಿಸ್ ಎಂದು ಈ ವಿಕಾರಕ್ಕೆ ಹೆಸರು. ಪಿಡುಗಿನ ರೂಪದಿಂದ ಬರುವ ಈ ಅಂಟು ರೋಗ ಸಾಮಾನ್ಯವಾದುದಲ್ಲ. ಇದರಿಂದ ಮೃತ್ಯು ಬರುತ್ತದೆ. ತಪ್ಪಿದರೆ ಮಕ್ಕಳು ಕೈಕಾಲು ಕಳಕೊಂಡು ಅಂಗಹೀನರಾಗಿ ಅನೇಕಾನೇಕ ವರ್ಷ ಕಷ್ಟ ಭೋಗಿಸುತ್ತ ಬಳಲುತ್ತಾರೆ. ಮುಂಬಯಿಯಂಥ ದೊಡ್ಡ ದೊಡ್ಡ ಶಹರಗಳಲ್ಲಿ ಈ ಬೇನೆ ಅನೇಕ ಸಲ ಕೋಲಾಹಲ ಮಾಡಿಬಿಟ್ಟಿದೆ. ಪಾಶ್ಚಿಮಾತ್ಯ ತಜ್ಞರಿಗೂ ಈ ರೋಗ ಒಂದು ಒಗಟವೇ ಆಗಿದೆ. ಇನ್ನೂ ಈ ಕ್ರಿಮಿಗಳ ಶೋಧವಾಗಿಲ್ಲ. ಆದರೆ ಆಯುರ್ವೇದದಲ್ಲಿ ಮಾತ್ರ ಇದರ ನಿದಾನ ಚಿಕಿತ್ಸೆಗಳು ಹೇಳಲ್ಪಟ್ಟಿವೆ. ಈ ವಿಕಾರ ತಂಡಿಯ ದಿನಗಳಲ್ಲಿ ತಂಡಿಯ ಪ್ರದೇಶಗಳಲ್ಲಿ ವಿಶೇಷವಾಗಿ ಇರುವದು ಕಂಡುಬರುತ್ತಿದೆ. ಎರಡರಿಂದ ಐದು ವರುಷಗಳ ಮಕ್ಕಳಿಗೆ ಇದು ಬರುವದು ಹೆಚ್ಚು.

**ಲಕ್ಷಣಗಳು ಮತ್ತು ಭಾವನೆ:—** ಜ್ವರಗಳು ಬಂದ ಕೂಡಲೇ ಕೈಕಾಲುಗಳ ಶಕ್ತಿ ಕಳೆದುಹೋಗುತ್ತದೆ. ಸಾಮಾನ್ಯವಾಗಿ ಟೊಂಕದ ಕೆಳಗಿನ ಭಾಗ ನಿರುಪಯೋಗಿಯಾಗುತ್ತದೆ. ಜ್ವರ ೧೦೩°ರ ತನಕ ಏರುತ್ತಿವೆ. ಕುತ್ತಿಗೆ ಮತ್ತು ತಲೆಗಳು ಇದ್ದಂತೆ ಇರುತ್ತವೆ. ಇವರಲ್ಲಿ ಮೆದುಳಿನ ವಿಕಾರವಿಲ್ಲದಿರುವದರಿಂದ ದೊಡ್ಡವರಿಗಾದಂತೆ–ಬೇರೆ ವಿಕಾರವಾಗುವದಿಲ್ಲ. ಬೆನ್ನಹುರಿ ಕೆಟ್ಟಿರುವದರಿಂದ ಕೈಕಾಲುಗಳ ಶಕ್ತಿ ಹೀರಿಹೋಗುತ್ತಿದೆ. ಕೂಸು ಅಶಕ್ತವಾಗುತ್ತಹೋಗಿ ರೂಪ ಸಪ್ಪಗಾಗಿ ಕಾಣುತ್ತಿದೆ. ಮುಂದೆ ಅಪಚನ ಅಥವಾ ಅತಿಸಾರ ಆರಂಭವಾಗುತ್ತಿದೆ. ಯಕೃತ್ತು ಕೆಡುತ್ತಿದೆ. ಕೈಕಾಲುಗಳ ಅಲುಗಾಟ ನಿಂತಿದ್ದರೂ ಇಲ್ಲಿಯ ಸಂಜ್ಞಾ-ಸ್ಪರ್ಶಜ್ಞಾನ ನಾಶವಾಗುವದಿಲ್ಲ.

**ಚಿಕಿತ್ಸೆ:—** (೧) ತ್ರಿಫಳಾ+ಸುಂಟೀ ಕಷಾಯದಲ್ಲಿ ನಿತ್ಯ ೫೦ ಸು ಹರಳೆಣ್ಣೆ ಕೊಡಬೇಕು.

(೨) ನಾರಾಯಣ ಅಥವಾ ಮಹಾನಾರಾಯಣ ತೈಲವನ್ನು ೧೦

ಹನಿಗಳಂತೆ ೪ ಸಲ ಸಕ್ಕರಿಯಲ್ಲಿ ಹಾಕಿ ಕೊಡಬೇಕು. ಹಾಗೆಯೇ ಮೈಗೂ ತಿಕ್ಕಬೇಕು.

(೩) ಬಲಾ ತೈಲದಿಂದ ಎರಡು ದಿನಕ್ಕೊಮ್ಮೆ ಪಿಚಕಾರಿ ಕೊಡಬೇಕು.

(೪) ಏಕಾಂಗವೀರ ೩:ಗುಂಜಿ + ಸುವರ್ಣಮಾಕ್ಷಿಕ ೨ ಗುಂಜಿ.ಜೇನು + ಕಾಡಿಗ್ಗರಗಿನ ರಸದಲ್ಲಿ ನೆಕ್ಕಿಸುವದು.

(೫) **ಪಿತ್ತವೃದ್ಧಿಯಾಗಿದ್ದರೆಃ**— ಸುವರ್ಣಸೂತಶೇಖರ ೧ ಗುಂಜಿ ಪ್ರವಾಳ ೨ ಗುಂಜಿ ನೆಲ್ಲೀಕಾಯಿ ಪಾಕದಲ್ಲಿ.

(೬) **ಮುಂಬೈ ಶ್ರೀ. ವೇದಪಾಠಕ ವೈದ್ಯರ ಯೋಗ**— ಶುದ್ಧ ಪೀತಮಲ್ಲ, ಗೋದಂತೀ ಭಸ್ಮ, ಶುದ್ಧ ಇಂಗಳೀಕ, ಶುದ್ಧ ಬುಭುಕ್ಷಿತ, ಪಾರಜ, ಶುದ್ಧ ಗಂಧಕ, ಶುದ್ಧ ಖರ್ಪರ, ಶುದ್ಧತುತ್ತೆ, ಶುದ್ಧಮನಃಶಿಲಾ ಇವಕ್ಕೆಲ್ಲಾ ಹಾಗಲಕಾಯಿ ರಸದ ೭ ಭಾವನೆ ಕೊಟ್ಟು ಹಸೀ ಸುಂಟೀ ರಸದಿಂದಲೂ ೭ಭಾವನೆ ಕೊಡಬೇಕು. ಅಂತರ್ಧೂಮ ಕುಪಿಪಕ್ವ ರಸಾಯನ ಮಾಡಿ ಅದರಲ್ಲಿ ಆಲದ ಬೇರು, ಬ್ರಾಹ್ಮೀ ಸೊಪ್ಪು, ಹೆಮುಷ್ಟಿ, ಜಟಾಮಾಂಸಿ, ಅಶ್ವಗಂಧಾ ಕೂಡಿಸಿ ತುಳಸೀ ರಸ ಜೇನಿನಲ್ಲಿ ನೆಕ್ಕಿಸಬೇಕು. ಕಟ್‌ಫಲಾದಿ ತೈಲವನ್ನು ಹಚ್ಚಿ ಮೇಲೆ ಯಕ್ಕೀ ಎಲಿಯ ಕಾವು ಕೊಡಬೇಕು. (ದೈನಿಕ ನವಶಕ್ತಿ)

# ಕ್ರಿಮಿ

## Worms........ವರ್ಮ್ಸ

ಜಂತಿನ ಪೀಡೆಯಿಲ್ಲದ ಹುಡುಗರೇ ಅಪರೂಪ. ಜಂತಿಲ್ಲದ ಹೊಟ್ಟೆಯಿಲ್ಲಾ. ಇಲಿ ಇಲ್ಲದ ಕೊಟ್ಟಿಗೆಯಿಲ್ಲಾ. ಮಕ್ಕಳು ಅನ್ನ ಉಣಹತ್ತಿದವೆಂದರೆ ಜಂತುಗಳಾಗಹತ್ತುತ್ತವೆ. ಹೆಚ್ಚಾಗಿ ಹಿಟ್ಟು ಸಿಹಿ ಪದಾರ್ಥಗಳನ್ನು ತಿನ್ನುವದರಿಂದಲೇ ಮಕ್ಕಳಿಗೆ ಕ್ರಿಮಿಬಾಧೆಯಾಗುತ್ತಿದೆ.

**ಲಕ್ಷಣಗಳು ಮತ್ತು ಭಾವನೆ:—** ಹುಡುಗರು ಸೊರಗುತ್ತಿವೆ. ಮೇಲಿಂದ ಮೇಲೆ ಹೊಟ್ಟೆಯಲ್ಲಿ ಕಚ್ಚುತ್ತಿರುವದರಿಂದ ಕಿರಿಕಿರಿ ಮಾಡುತ್ತವೆ. ರಾತ್ರಿ ಕರಕರ ಹಲ್ಲು ತಿನ್ನುತ್ತವೆ.ಮೂಗು ತುರಿಸಿಕೊಳ್ಳುವದಲ್ಲದೆ ಗುದದ್ವಾರದಲ್ಲಿ ಬಟ್ಟು ಹಾಕಿಕೊಳ್ಳುತ್ತಿವೆ. ಹೊಟ್ಟೆ ದೊಡ್ಡದಾಗಿ ಆದರ ಮೇಲಿನ ನೀಲೀ ನರಗಳು ಕಾಣಿಸಹತ್ತುತ್ತಿವೆ.

ಪಾಂಡು (ಅ್ಯನಿಮಿಯಾ) ರೋಗಕ್ಕೆ ಹಾಕುತ್ತಿದೆ. ಕೈಕಾಲುಗಳು ಕಡ್ಡಿಯಾಗುತ್ತಿವೆ. ಆಕಸ್ಮಾತ್ ಜ್ವರ ಬಂದು ಸೆಟೆತಕ್ಕೊ ಸುರುವಾಗುತ್ತದೆ. ಅಲ್ಲದೆ ಹಲವಾರು:ಅಗ್ನಿಮಾಂದ್ಯ, ಯಕೃತ್ ವಿಕಾರ,ಅತಿಸಾರ ಮೊದಲಾದ ಲಕ್ಷಣಗಳು ಹುಟ್ಟಿಕೊಳ್ಳುತ್ತಿವೆ.

**ಕ್ರಿಮಿವರ್ಣನೆ:—** ಮಕ್ಕಳಿಗೆ ಮುಖ್ಯವಾಗಿ ಗಂಡೂಪದ ಕ್ರಿಮಿ (ಮಳೀ ಹುಳದಂಥ ದೊಡ್ಡ ಬಿಳೀ ಜಂತು.) ರಾವುಂಡ ವರ್ಮ್ಸ ಮತ್ತು ಬಿಳಿಯ ಸಣ್ಣ ಜಂತು ಕಿಲಬೀ ಹುಳ ಥ್ರೇಡ್ ವರ್ಮ್ಸಗಳ ಬಾಧೆಯಾಗುತ್ತಿದೆ.

ಜಂತುಗಳಿಂದ ಹಲವಾರು ಬಗೆಯ ರೋಗಗಳಾಗುವದುಂಟು. ನಿದಾನ ಮಾಡುವದು ಕಠಿಣವಾಗುತ್ತಿದೆ.:ಟಾಯಿಫಾಯಿಡ್, ಕ್ಷಯ, ಫೀಟ್ಸ (ಸೆಟೆತ) ಮೊದಲಾದವುಗಳಂತೆ ಕಾಣುವ ವಿಕಾರಗಳಾಗುತ್ತವೆ.

**ಕ್ರಿಮಿಶೋಧನ:-** ಜಂತಿನಪುಡಿ ಕೊಟ್ಟುಕ್ರಿಮಿಗಳನ್ನು ಕೆಡವಿದ ಮೇಲೆ ಉತ್ತಮ ಗುಣವಾದ ಅನುಭವವಿದೆ. ಅಂತೇ ಮೊದಲಿಗೆ ಕ್ರಿಮಿಶೋಧನೆ ಮಾಡಿಕೊಂಡೇ ಬೇರೆ ಬೇನೆಗಳ ಚಿಕಿತ್ಸೆಗೆ ಕೈಹಾಕುವದು ಉತ್ತಮ.

**ಚಿಕಿತ್ಸೆ:—** (೧) ಕಪಿಲಾ ೮ ಗುಂಜಿ+ಡಿಕ್ಕೇಮಾಲಿ ೮ ಗುಂಜಿ ಕಷಾಯ.

(೨) ವಾಯವಡಂಗ, ಕಪಿಲಾ, ಮತ್ತು ತ್ರಿಫಲಾ, (ಅಳ್ಳೇಕಾಯಿ ತಾರೀಕಾಯಿ ನೆಲ್ಲೀ ಚಟ್ಟು) ಕಷಾಯ.

(೩) ನಸಗುನ್ನೀ ಸುಂಕ ಬೆಲ್ಲದಲ್ಲಿ.

(೪) ಜಂತಿನ ಪುಡಿ (ಸೆಂಟೋನಾಯಿನ್ ೧ ಗುಂಜಿ ಕ್ಯಾಲೋಮೆಲ್

೧ ಗುಂಜಿ ಸೋಡಾಬಾಯರ್ ಕಾರ್ಬ ೨ ಗುಂಜಿ) ರಾತ್ರಿ ಸಕ್ಕರೆಯಲ್ಲಿ ಕೊಟ್ಟು ಬೆಳಿಗ್ಗೆ ಹರಳೆಂಣೆ ಕೊಡಬೇಕು.

(೫) ಕ್ಯಾಸ್ಟ್ರಾಯಿಲ್-ಔಡಲ ಅಂದರೆ ಹರಳೆಂಣೆ ½ ಔಂಸು + ಆಯಿಲ್ ಚಿನೋಪೋಡಿಯಂ ೫ ಹನಿ ಚಹಾದಲ್ಲಿ. ಜಂತಿನ ಯಾವದೇ ಔಷಧಿಗಳನ್ನು ಬರಿ ಹೊಟ್ಟೆಯಲ್ಲಿ ತಕ್ಕೊಳ್ಳಬೇಕು.

## ಪಾರಿ ಗರ್ಭಿಕ

ಮಕ್ಕಳು ಸಂಣವಿದ್ದಾಗಲೇ ತಾಯಿ ಮತ್ತೆ ಬಸಿರಾದಾಗಲೂ ಮಕ್ಕಳು ಮೊಲೆ ಕುಡಿಯುತ್ತಲೇ ಇದ್ದರೆ ಈ ಬೇನೆ ಬರುತ್ತದೆ. ಆ್ಯಲೋಪಥಿಯಲ್ಲಿ ವಿಶೇಷವಾಗಿ ಇದರ ವರ್ಣನೆ ಕಂಡು ಬರುವದಿಲ್ಲ. ಗರ್ಭಿಣೀ ಸ್ತ್ರೀಯ ಮೊಲೆ ಹಾಲು ಮುಂದೆ ಮುಂದೆ ಗಟ್ಟಿ ಮತ್ತು ಆದ್ದರಿಂದಲೇ ಪಚನಕ್ಕೆ ಕಠಿಣವಾಗುತ್ತ ಬರುತ್ತದೆ. ಇಂಥ ಹಾಲು ಕುಡಿದೇ ಮಕ್ಕಳು ನಿರ್ಬಲರಾಗುತ್ತಾರೆ. ಅವಕ್ಕೆ ಅಜೀರ್ಣ, ಅತಿಸಾರ, ಜ್ವರ ಮೊದಲಾದವು ಗಂಟು ಬೀಳುತ್ತವೆ. ಯಕೃತ್ತು ಕೆಡುವದು. ತೊಗಲಿಗೆ ಬಿಳುಪು, ಹಳದೀ ಕೂಡಿದ ಬಣ್ಣ ಬರುತ್ತದೆ. ಇದಕ್ಕೆ ಪಾರಿಗರ್ಭಿಕವೆನ್ನುತ್ತಾರೆ.

**ಚಿಕಿತ್ಸೆ:**—(೧) ತಾಯಿ ಮೊಲೆ ಹಾಲು ಬಿಡಿಸಿ ಆಡು ಅಥವಾ ಹಸುವಿನ ಹಾಲು ಹಚ್ಚಬೇಕು.

(೨) ಕೋಷ್ಠ ಶೋಧನ (ಅ) ರೇವಾ ಚಿನ್ನೀ ಅರ್ಕ ೨ ಗುಂಜಿ + ತ್ರಿಫಳಾ ೨ ಗುಂಜಿ. (ಆ) ಸುಂಟೀ ಕಷಾಯದಲ್ಲಿ ಹರಳೆಂಣಿ. (ಇ) ಹರಳೆಂಣೆ : ಜೇನುತುಪ್ಪ.

**ಅಶಕ್ತಿಗೆ:—(೧)** ಬಾಲಸಂಜೀವನೀ ಚೂರ್ಣ + ಅಮೃತಸತ್ವ.

(೨) ಮಂಡೂರ + ಪ್ರವಾಳ. (೩) ಲಘುಮಾಲಿನೀ ವಸಂತ + ಸಿತೋಪಲಾದಿ. (೪) ಕುಮಾರಿ ಆಸವ ನಂ. ೩. ಅನುಪಾನ ಬರೆಯದಿದ್ದ ಔಷಧಿಗಳನ್ನೆಲ್ಲಾ ಸಾಮಾನ್ಯವಾಗಿ ಜೇನುತುಪ್ಪ ಅಥವಾ ಬಿಸಿನೀರುಗಳಲ್ಲಿ ತಕ್ಕೊಳ್ಳಬೇಕು.

## ಕ್ಷೀರಾಲಸಕ

ಹಾಲು ಪಚನವಾಗದಿದ್ದರೆ ಈ ಬೇನೆ ಬರುತ್ತದೆ. ತಾಯ ಹಾಲು ದಟ್ಟವಾಗಿ ಪಚನಕ್ಕೆ ಜಡವಾಗಿರೋಣ ಅಥವಾ ಹಾಲು ಸಾಲದ್ದಕ್ಕೆ ಮೇಲೆ ಎಮ್ಮೆ ಹಾಲು ಹಾಕುವದರಿಂದ ಈ ವಿಕಾರ ಸಂಭವಿಸುತ್ತದೆ. ಹಾಲು ಈ ರೀತಿ ಪಚನವಾಗದಿರಲು ಅದು ಹೊಟ್ಟೆಯಲ್ಲಿ ಹೆಪ್ಪುಗಟ್ಟುವದರಿಂದ ಹೊಟ್ಟೆ ನೋಯಹತ್ತಿ ಮಕ್ಕಳು ಅಳುತ್ತವೆ. ಮೇಲಿಂದ ಮೇಲೆ ಕಕ್ಕಿ ಕೊಳ್ಳುತ್ತವೆ.

**ಚಿಕಿತ್ಸೆ**:–ಹಾಲನ್ನೇ ನಿಲ್ಲಿಸಿಬಿಡಬೇಕು. ಬರಿ ಕಾದಾರಿದ ನೀರು ಅಥವಾ ಗ್ಲುಕೋಜು. ಮತ್ತು ಭತ್ತರಳಿನ ನೀರಿನಮೇಲೆ ಒಂದುದಿನ ಇಡಬೇಕು.

(೧)ಬಾಲಹರೀತಕಿ–ಬಾಲಹಿರಡಾ ಜೇನಿನಲ್ಲಿತೇದು ಹಾಕಬೇಕು. ಈ ಬಾಲಹಿರಡಾ ಚಿಕ್ಕಮಕ್ಕಳಿಗೆ ಅಮೃತಕ್ಕೆ ಸಮಾನವಾದ ಮದ್ದಾಗಿದೆ. “ಯಸ್ಯನಾಸ್ತಿ ಗೃಹೇಮಾತಾ ತಸ್ಯಮಾತಾ ಹರೀತಕಿ” ಮನೆಯಲ್ಲಿ ತಾಯಿ ಇಲ್ಲದ ಮಕ್ಕಳಿಗೆ ಹರೀತಕಿಯೇ ತಾಯಿಯಂದುಹೇಳಿದೆ.

(೨) ಬಡೇಸಪ್ಪು + ಹವೀಜಾ ಸುಂಟಿಗಳ ಕಷಾಯ ಕೊಡಬೇಕು.

**ಸೂಚನೆ**— ಮಕ್ಕಳಿಗೆ ದನದಹಾಲು ಕೊಡುವದಿದ್ದಲ್ಲಿ ಹಾಲಿನಷ್ಟೇ ನೀರು ಹಾಗು ಬಡೇಸಪ್ಪು, ಸೂಂಟೀಪುಡಿಗಳನ್ನು ಮತ್ತು ಕಲ್ಲುಸಕ್ಕರೆ ಯನ್ನೂ ಹಾಕಿ ಕುದಿಸಿ ಕೆನೆ ತೆಗೆದು ಸೋಸಿ ಕುಡಿಸಬೇಕು.

## ಕೋಡಗಕೆಮ್ಮು

### Whooping Cough — ಹೂಪಿಂಗ್ ಕಾಫ್

ಮಕ್ಕಳನ್ನು ನಿರ್ವಿಣ್ಣಮಾಡುವ ರೋಗದಲ್ಲಿ ಇದಕ್ಕೆ ಉಚ್ಚಾಂಕ ಕೊಡಬೇಕು. ಇದೊಳ್ಳೇ ಭಯಂಕರ ಅಂಟುರೋಗ. ಇದೊಮ್ಮೆ ಗಂಟು ಬಿದ್ದರಾಯಿತು ೧||–೨ ತಿಂಗಳು ಬಿಡುವದಿಲ್ಲ. ಕ್ವಚಿತ್ತಾಗಿ ೬ ತಿಂಗಳು

ಗಳ ವರೆಗೂ ಕಾಡುತ್ತದೆ. ಇದರಲ್ಲಿಯೇ ಮಕ್ಕಳಿಗೆ ಕ್ಷಯ ಹತ್ತಿ ಕೈಬಿಡುತ್ತವೆ. ಬ್ಯಾಸಿಲಸ್ ಪರ್‌ಟ್ಯೂಸೀಸ್ ಎಂಬ ಕ್ರಿಮಿಗಳಿಂದ ಇದರ ಉತ್ಪತ್ತಿ. ಈ ಕ್ರಿಮಿಗಳು ಪುಪ್ಪುಸವನ್ನು ಕೆಡಿಸುತ್ತವೆ. ಇವು ಹವೆಯಲ್ಲಿಂದ ಹಬ್ಬುವವು. ಒಮ್ಮೆ ಇದು ಬಂದುಹೋದಮೇಲೆ ಮತ್ತೆ ಮತ್ತೆ ಬರುವದಿಲ್ಲ.

**ಲಕ್ಷಣಗಳು ಮತ್ತು ಭಾವನೆಗಳು:—** ಮೊದಲಿಗೆ ನೆಗಡಿಯಾಗಿ ಕೆಮ್ಮು ಶುರುವಾಗುತ್ತದೆ. ಜ್ವರವೂ ಇರುತ್ತದೆ. ಮಕ್ಕಳು ಕಾರಿಕೊಳ್ಳುತ್ತವೆ. ಠಸಾ ಠಸಾ ಒಂದೇಸವನೆ ಕೆಮ್ಮು ಬರುತ್ತಾ ಕೊನೆಯಲ್ಲಿ ಧ್ವನಿ ಜೀರಿದಂತಾಗಿ ಒಳಸೇರುತ್ತದೆ. ಇದೇ ಈ ಕೆಮ್ಮಿನ ಮುಖ್ಯ ಲಕ್ಷಣ. ಆಗ ಜಿಗುಟಾದ ಕಫ ಮತ್ತು ಸಿಂಬಳ ಸೋರುತ್ತದೆ. ಅಗ್ನಿಮಾಂದ್ಯ, ಅತಿಸಾರ, ಅಶಕ್ತತೆ ಮುಂತಾದ ಲಕ್ಷಣ ಕಾಣಿಸಿಕೊಳ್ಳುತ್ತವೆ. ರಾತ್ರಿಯಲ್ಲಿ ರೋಗ ಬಲಗೊಳ್ಳುತ್ತದೆ.

**ಉಪದ್ರವಗಳು:—** ಬ್ರಾಂಕೋ ನ್ಯುಮೋನಿಯಾ, ಹೃದಯವಿಕೃತಿ, ಕ್ಷಯಾ, ಸೆಟಿತ, ಮೂರ್ಛೆ ಮೊದಲಾದವು.

**ಸಾಧ್ಯಾಸಾಧ್ಯತ್ವ:—** ಉಪದ್ರವ ಕೂಡಿದ ಕೆಮ್ಮು ಕಷ್ಟಸಾಧ್ಯ.

**ಚಿಕಿತ್ಸೆ:—** (೧) ಕೋಡಿಗಕೆಮ್ಮಿನ ಮಿಶ್ರಣ. (೨) ಯಾಲಕ್ಕೀ ಸುಟ್ಟ ಬೂದಿಯನ್ನು ಜೇನಿನಲ್ಲಿ ನೆಕ್ಕಿಸುವದು. (೩) ಪರ್‌ಟ್ಯೂಸಿನ್.

## ಅ್ಯಲೋಪಥಿ

(೧) ಪರ್‌ಟ್ಯೂಸಿನ್. (೨) ರಾತ್ರಿ ಬ್ರುಮಾಯಿಡ್ ಕೂಡಿದ ಔಷಧಿ ಕೊಡುತ್ತಾರೆ. (೩) ಟಿಂಗ್‌ಚರಕ್ಯಾಂಫರ್.ಕೋ.(೪)ಹುಪ್ ವ್ಯಾಕ್ಸೈನ್‌ದ ೩ ಇಂಜಕ್ಶನ್ನು ಕೊಡುತ್ತಾರೆ. ಇದನ್ನು ಮೊದಲು ಬಾರಿಗೆ ಅರ್ಧ ಸಿ. ಸಿ. ಎರಡೇ ಸಲಕ್ಕೆ ೧ ಸಿ. ಸಿ. ಅನೇಲೆ ೧॥ ಸಿ. ಸಿ. ಯಂತೆ ಕೊಡುತ್ತಾರೆ. ಇದೊಳ್ಳೇ ಉಪಯುಕ್ತವಾಗಿದೆ.

**ಬಾಯೋಕೆಮಿಕ್:—** ಕಾ. ಮ್ಯೂ. ಮತ್ತು ನೇ. ಫಾ. ಇವು ಪ್ರಮುಖ ಔಷಧಿ. ಅಲ್ಲದೇ ಕಾ. ಸ, ನೇ. ಮ್ಯೂ. ಕಲ್ಕೇ. ಫಾ. ಮುಂತಾದವನ್ನು ಲಕ್ಷಣ ನೋಡಿ ಕೊಡಬೇಕು.

---

# ಸೃದ್ವಸ್ಥಿ-ಮುಟ್ಟುದೋಷ

## Riekets ರಿಕೆಟ್ಸ

ಸಧ್ಯ ಸಣ್ಣ ಹುಡುಗರಿಗೆ ಈ ವಿಕಾರ ಹೆಚ್ಚಾಗಿಹೋಗಿದೆ. ಪೌಷ್ಟಿಕ ಆಹಾರ ಮತ್ತು ಹೈನದ ಆಭಾವಗಳೇ ಇದಕ್ಕೆ ಮುಖ್ಯ ಕಾರಣ. ಮಕ್ಕಳ ಮೈಯಲ್ಲಿ ಸುಣ (ಕ್ಯಾಲ್ಸಿಯಂ) ಮತ್ತು ಜೀವನಸತ್ವಗಳು (ವ್ಹಿಟ್ಯಾಮಿನ್ ಎ+ಡಿಗಳು) ಕಮ್ಮಿಯಾದ್ದರಿಂದ ಈ ರೋಗಕ್ಕೆ ದಾರಿಯಾಗಿದೆ. ಕಟ್ಟಿದಹವೆ, ಸೂರ್ಯಪ್ರಕಾಶದ ಆಭಾವ ಇವುಗಳಿಂದ ಈ ರೋಗಕ್ಕೆ ಬೆಳೆಯಲು ಸಹಾಯವಾಗುತ್ತದೆ. ಇದು ಸಾಂಸರ್ಗಿಕ ವ್ಯಾದುದೆನೂಅಲ್ಲ.

**ಲಕ್ಷಣಗಳು ಮತ್ತು ಭಾವನೆ—** ಕೂಸುಗಳು ದಿನದಿನಕ್ಕೆ ನವೆಯುತ್ತಾ ಹೋಗುತ್ತವೆ. ವಿಶೇಷವಾಗಿ ಎಲುವುಗಳು ಸಣಾಗುತ್ತವೆ. ಮಾಂಸವೂ ಕ್ಷೀಣವಾಗುತ್ತದೆ. ಇದರಿಂದ ಮೈಗೆಲ್ಲಾ ನೀರಿಗೆಗಳು ಬೀಳುತ್ತವೆ. ಕೈ, ತೊಡಿ, ಅಂಡುಗಳಮೇಲೆ ನೀರಿಗೆಗಳು ನಿಚ್ಚಳವಾಗಿ ಕಾಣುತ್ತವೆ. ಎದೆಯ ಎಲುವುಗಳು ಮುಂದೆ ಹಾಯುತ್ತವೆ. ಎಲುವುಗಳಮೇಲೆ ಗಂಟುಗಳದೊಂದು ಮಾಲೆ ನಿರ್ಮಾಣವಾದಂತೆ ಕಾಣುತ್ತದೆ. ಕಾಲುಗಳು ಬಿಲ್ಲಿನಂತೆ ಸೊಟ್ಟಾಗುತ್ತವೆ. ಕೂಸು ಎದ್ದು ನಿಲ್ಲುವದಿಲ್ಲ. ಆದಕ್ಕೆ ಮೇಲಿಂದ ಮೇಲೆ ಬೇನೆಯುತ್ತದೆ. ಹೆಚ್ಚಾಗಿ ಮಲಗಿದಾಗ ತಲೆದಿಂಬು ಬೆವರಿನಿಂದ ತೊಯಿದು ಹೋಗುತ್ತದೆ. ಆಗ್ನಿಮಾಂದ್ಯ ಮತ್ತು ಅಪಚನಗಳಾಗುತ್ತವೆ. ಹೊಟ್ಟೆಯಲ್ಲಿ ವಾತ ತುಂಬಿ ನಗಾರಿಯಂತೆ ಕಾಣುತ್ತದೆ- ನೆತ್ತಿ ಬೇಗ ಕೂಡಿಕೊಳ್ಳುವದಿಲ್ಲ, ಹಲ್ಲು ತಡವಾಗಿ ಹುಟ್ಟುತ್ತ ಬೇಗನೇ ಹುಳಿಯುತ್ತವೆ. ವಾಂತಿ, ಅತಿಸಾರ, ಜ್ವರ, ಕಾಸ ಮುಂತಾದವೂ ಸಂಭವಿಸುತ್ತವೆ.

**೨ ನೇ ಪ್ರಕಾರಃ—** ಇದರಲ್ಲಿ ಮಕ್ಕಳು ಒಳ್ಳೇ ಧಾಂಡಿಗರಾಗಿದ್ದು ಒಳಗೆಲ್ಲಾ ಪೊಳ್ಳು ಹಾಗೂ ನಿಃಶಕ್ತರಾಗಿರುತ್ತಾರೆ. ಇವಕ್ಕೆ ಫ್ಯಾಟೀರಿಕೇಟ್ಸ ಎನ್ನುತ್ತಾರೆ. ಈ ಮಕ್ಕಳು ನೋಡಲಿಕ್ಕೆ ನೆಟ್ಟಗಿದ್ದರೂ ಬಹಳೇ ಅಶಕ್ತರಾಗಿದ್ದು ಹಲವಾರು ರೋಗಗಳಿಗೆ ಬಲಿಯಾಗುತ್ತಾರೆ.

**ಚಿಕಿತ್ಸೆಃ—** (೧) ಲಘುಮಾಲಿನೀ ವಸಂತ ೩ ಗುಂಜಿ + ಬಾಲಮಂಡೂರ ೧ ಗುಂಜಿ + ಪ್ರವಾಳ ೪ ಗುಂಜಿ ೪ ಚೀಟು ಗೋಮೂತ್ರದಲ್ಲಿ.

(೨) ಕುಮಾರಿ ಆಸವ ನಂ. ೩. ೬೦ ಹನಿ + ದ್ರಾಕ್ಷಾಸವ ೬೦ ಹನಿ ದುಪ್ಪಟ್ಟು ನೀರಿನಲ್ಲಿ. ೨ ಭಾಗ ೨ ಸಲ.

(೩) ಮೌಕ್ತಿಕ ೧ ಗುಂಜಿ + ಶೌಕ್ತಿಕ ೧ ಗುಂಜಿ ಕಪರ್ದಿಕ ೧ ಗುಂಜಿ + ಪ್ರವಾಳ ೧ ಗುಂಜಿ ೪ ಚೀಟು ೪ ಸಲ. ಅರವಿಂದಾಸವ ಮತ್ತು ನೀರಿನಲ್ಲಿ.

(೪) **ಕಫದೋಷ:—** ಮೃಗಸಿಂಗ ೧ ಗುಂಜಿ + ಪ್ರವಾಳ ೨ ಗುಂಜಿ ೪ ಚೀಟು ಜೇನಿನಲ್ಲಿ.

(೫) ಕ್ಷೀರಬಲಾಲಾಕ್ಷಾದಿ ತೈಲವನ್ನು ಮೈಗೆ ಹಚ್ಚಿ ಎಳೆ ಬಿಸಿಲಿನಲ್ಲಿ ಬೆಳಗು, ಸಂಜೆಗೆ ಕೂಡಿಸಬೇಕು.

(೬) ಸುಂಣದ ತಿಳಿ ೫ ಹನಿ ನೀರಲ್ಲಿ.

**ಆಹಾರ:—** ಹಾಲು, ಕಿತ್ತಳೇ ಹಂಣುಗಳನ್ನು ಹೆಚ್ಚಾಗಿ ಕೊಡಬೇಕು. ಟೊಮೆಟೋ ಪಾಕವನ್ನೂ ಮಾಡಿ ಕೊಡಬಹುದು.

**ಆ್ಯಲೋಪಥಿ**

(೧) ಕ್ಯಾಲ್ಸಿಯಂ ಮತ್ತು ವ್ಹಿಟ್ಯಾಮಿನ್ ಎ-ಡಿ ಗಳ ಕಲ್ಪವನ್ನು ಕೊಡುತ್ತಾರೆ.

(೨) ಕೋಲಾಯಿಡ್ ಕ್ಯಾಲ್ಸಿಯಂ ವಿಥ್ ವ್ಹಿಟ್ಯಾಮಿನ್ ಎ+ಡಿ ಇವುಗಳನ್ನು ಒಳ ಚರ್ಮದಲ್ಲಿ ಚುಚ್ಚಿಸುತ್ತಾರೆ.

(೩) ಹೊಟ್ಟೆಯಲ್ಲಿ ಕಾಡ್‌ಲಿವ್ಹರ್ ಆಯಿಲ್ ಕೊಡುತ್ತಾರೆ. ಮೈಗೂ ಈ ಎಂಣೆಯನ್ನು ತಿಕ್ಕಿ ಎಳೆ ಬಿಸಿಲಿಗೆ ಕುಳ್ಳಿರಿಸಬೇಕು.

(೪) ಅಥವಾ ಆ್ಯಡೆಕ್ ಝೂಲಿನ್ ೨-೩ ಹನಿ ದಿನಾಲು ೨ ವೇಳೆ ಹಾಲಲ್ಲಿ.

(೫) ಅಲ್ಟ್ರಾ ವಾಯಿಲೆಟ್ ಪ್ರಕಾಶ. ಇದೊಂದು ಒಳ್ಳೇ ಪ್ರಭಾವೀ ಸಾಧನವಾಗಿದೆ. ಈ ಕಿರಣಗಳನ್ನು ಮೈಮೈಲೆ ಕೆಡುವುವದರಿಂದ ಮಕ್ಕಳು ಬಲು ವೇಗವಾಗಿ ಚೇತರಿಸಿಕೊಳ್ಳುತ್ತವೆ.

**ಬಾಯೋಕೆಮಿಕ್:—**ಕಲ್ಕೇರಿಯಾಫಾಸ್, ಇದು ಮುಖ್ಯ ಔಷಧಿ. ಅಲ್ಲದೆ ಸಿಲಿಕಾ, ನೇ. ಫಾ. ಕಾ. ಫಾ. ಮುಂತಾದವು.

---

# ಬಾಲಗ್ರಹ

## Infantile Convulsions ಇನ್‌ಫಂಟಾಯಿಲ್ ಕನ್‌ವ್ಹಲ್‌ಶೆನ್ಸ

ಶರೀರದಲ್ಲಿಯ ಸ್ನಾಯುಗಳು ಒಮ್ಮೊಮ್ಮೆ ಜೋರಿನಿಂದ ಒಂದೇ ಸವನೆ ಆಕುಂಚಿತವಾಗುತ್ತಿರುವದು, ಅಂದರೆ ಸ್ನಾಯುಗಳಕುಣಿತಕ್ಕೆ ಫೀಟ್ಸ್ (ಸೆಟೆತ) ಎನ್ನುತ್ತಾರೆ. ಮೊಲೆಯುಂಣುವ ಮಕ್ಕಳಿಗೆ ವಿಶೇಷವಾಗಿ ಈ ಬೇನೆ ಬರುತ್ತದೆ. ಕ್ವಚಿತ್ತಾಗಿ ೫ ವರ್ಷಗಳ ವರೆಗೂ ಬರುವದುಂಟು. ಇದಕ್ಕೆ ಗ್ರಹಗಳ ಬಾಧೆ ಕಾರಣವಿರಬೇಕೆಂದು ಭಾವಿಸಿ ಇದನ್ನು ಬಾಲಗ್ರಹವೆಂದು ಕರೆಯುತ್ತಾರೆ. ಆದರೂ ಈ ವಿಕಾರದ ಕಾರಣಗಳೇನು ಅಸ್ಪಷ್ಟವಾಗಿರುವದಿಲ್ಲ. ಹಾಗೆಯೇ ತಕ್ಕ ಚಿಕಿತ್ಸೆಯನ್ನು ಒಡನೆಯೇ ಕೈಕೊಂಡರೆ ವಿಕಾರ ಗುಣವಾಗುತ್ತಿದೆ. ಆದರೆ ಯೋಗ್ಯ ಉಪಚಾರ ದೊರೆಯದ್ದಕ್ಕೆ ಅನೇಕ ಮಕ್ಕಳು ಮೃತ್ಯುವಿಗೆ ಶರಣೆನ್ನುತ್ತಾರೆ. ಚಿಕ್ಕ ಮಕ್ಕಳ ಮಜ್ಜಾ ಸಂಸ್ಥೆ (ನರವ್ಹಸ್‌ಸಿಸ್ಟಿಂ) ಬಲೂ ನಾಜೂಕ ಇರುವದರಿಂದ ಯಾವದೇ ಚಿಲ್ಲರೆ ಕಾರಣದಿಂದ ಆದರೂ ಅದರಲ್ಲಿ ವಿಕಾರವಾಗಿ ಈ ಬೇನೆ ಬರುತ್ತದೆ.

**ಕಾರಣ ಮೀಮಾಂಸೆ:—** (೧) ಜ್ವರ, ಅಪಚನ, ನಿದ್ದೆಗೇಡು, ಅನಿಯಮಿತತನ ಮೊದಲಾದವುಗಳಿಂದ ತಾಯಿಯ ಹಾಲು ಕೆಟ್ಟು ಮಕ್ಕಳಿಗೆ ಈ ಬೇನೆ ತಟ್ಟುತ್ತಿದೆ.

(೨) ಹುಡುಗರಿಗೆ ಅನ್ನ ಅರಗದಿರೋಣ, ಅರಗದ ಅನ್ನ ತಿನ್ನೋಣ ಅಥವಾ ಹಸಿ ಹಾಲು ಕುಡಿಯುವದರಿಂದ.

(೩) ಬಹಳ ಹೊಲಸಾದ ಕುಲಾಯಿ, ಕುಂಚಿಗೆಗಳನ್ನು ತಲೆಗೆ ಕಟ್ಟುವದರಿಂದ ಅದರಲ್ಲಿಯ ಕ್ರಿಮಿಗಳು ನೆತ್ತಿಯನ್ನು ಸೇರಿ.

(೪) ಅಪಚನ, ಹೊಟ್ಟೆಯುಬ್ಬರ, ಮಲಾವರೋಧಗಳಿಂದ ಮಲ ಗಟ್ಟಿಯಾಗಿ ಗಂಟುಗಳಾಗುತ್ತವೆ. ಅವುಗಳು ಕರುಳಿಗೆ ಚುಚ್ಚುವದರಿಂದ.

(೫) ಹೊಟ್ಟೆಯಲ್ಲಿ ಕೂಡಿಬಿದ್ದ ಹೊಲಸಿನ ವಿಷ ರಕ್ತದಲ್ಲಿ ಸೇರುವದರಿಂದ.

**ಚಿಕಿತ್ಸೆ:—** ಈ ಪ್ರಯುಕ್ತ ರೋಗದ ಕಾರಣಗಳನ್ನು ತಿಳಿದು ಹಿಡಿದು ಕೂದಲಿನ ಉಪಾಯ ಸ್ವಕೊಳ್ಳದಿಷ್ಟರ ಕೆಲವೇ ತಾಸುಗಳಲ್ಲಿ ಸಾಯು ತ್ತಿರುತ್ತವೆ. ಅಂತೇ ಬೇನೆ ಬಂದಕೂಡಲೇ ಚಿಕಿತ್ಸೆಗಾಗಿ ಇದ್ದ ಅಂಗಗಳ ನ್ನೆಲ್ಲ ತೆಗೆದು ಬಿಡಬೇಕು. ಗ್ಲಿಸರಿನ್ ಪಿಚಕಾರಿ ಕೊಟ್ಟು ಸುಲಭವಾಗಿ ಸರಿಸಬೇಕು. ನೆತ್ತಿಯಲ್ಲಿ ಪ್ಲಾಸ್ಟರ ಹಚ್ಚಿ ತಂಪಿನ ಪಟ್ಟಿ ಹಾಕಬೇಕು. ಪಿಚಕಾರಿಯನ್ನು ದಿನಕ್ಕೆ ಎರಡು ಸಲ ಕೊಟ್ಟರೂ ಪರವಾ ಇಲ್ಲ. ಸ್ಪಂಜಿಂಗ ಮಾಡಿ ನೆತ್ತಿ ಒರಸಿ ಸ್ವಚ್ಛ ಮಾಡಬೇಕು.

**ಔಷಧಿಗಳು:—** (೧) ತ್ರಿಫಳಾ ಅಥವಾ ಬಾಲಹರಡಾಗಳನ್ನು ಜೇನಿನಲ್ಲಿ ಕೊಡಬೇಕು.

(೨) ರೇವಾಚಿನ್ನಿ ಅರ್ಕ ೪ ಗುಂಜಿ. ೨ ಹೋಟಿ ಬಿಸಿ ನೀರಿನಲ್ಲಿ. ಇದ ರಿಂದ ನಾಲ್ಕಂತಿ ಭೇದಿಗಳಾಗಿ ಆಧ್ಮಾನ-ಹೊಟ್ಟೆಯುಬ್ಬರ ಕಡಿಮೆಯಾಗುತ್ತದೆ.

**ಜುಲಾಬ ರೋಧಕ್ಕೆ:—**(೩) ಸೊಂಟೀ ಸುಟ್ಟು ಬೂದಿ + ಗಂಧಕ ಒಂದೊಂದು ಗುಂಜಿ ಬಿಸಿ ನೀರಿನಲ್ಲಿ.

**ಸೆಳವ ಗಂಟುಗಳಾದ್ದಕ್ಕೆ:—**(೪) ಬಾಲಹರಡಾ + ಗಂಧಕ, ಬಿಸಿ ನೀರಿನಲ್ಲಿ, ಒಂದೊಂದು ಗುಂಜಿ.

**ಅಪಚನ ಮತ್ತು ಆಮಕ್ಕೆ:—**(೫) ಬಡಿಸೋಪ ಮತ್ತು ಜವೀಜಗಳ ಅರ್ಕ ಎರಡೆರಡು ಹನಿ ಅಥವಾ ಕಷಾಯವನ್ನು ನಾಡಿಯೂ ಕೊಡಬಹುದು.

(೬) ಬ್ರಾಹ್ಮೀ ಅರ್ಕ ಅಥವಾ ಬಜೀ ತೇದು ಜೇನಿಗೆ ಹಚ್ಚಬೇಕು. ಇದರ ವಾಸನೆಯನ್ನು ಕೊಡಬೇಕು, ಹಾಗೆಯೇ ಸಿತೋಪಲಾದಿ ಅಥವಾ ತಾಲೀಸಾದಿ ಚೂರ್ಣಗಳನ್ನು ಒಂದೊಂದು ಗುಂಜಿ ಕಾಗದದ ಸುರುಳಿಯಲ್ಲಿ ತಕ್ಕೊಂಡು ಕೂಸಿನ ಮೂಗಿನಲ್ಲಿ ಊದಬೇಕು. ಕೂಡಲೇ ಎಚ್ಚರ ಬಂದು ಕಣ್ಣು ತೆರೆಯುತ್ತದೆ.

(೭) ಸೀಕಜಾಲಿ ಒಳತೊಗಟೆ, ಅಷ್ಟೇ ಬಿಳಿಯ ಉಳ್ಳಾಗಡ್ಡಿ ಕುಟ್ಟಿ ರಸವನ್ನು ವಸ್ತ್ರದಲ್ಲಿ ಸೋಸಿಗೊಂಡು ಅರ್ಧ ತಾಸಿಗೆ ಒಂದು ಚಮಚೆಯಂತೆ ಹಾಕಬೇಕು. ಕಫವೇ ಜಾರಿಸಿ ಕೂಸು ಚೇತರಿಸಿಕೊಳ್ಳುತ್ತದೆ.

(೮) ಬಾಲಗ್ರಹಾರಿ ಒಂದೊಂದು ಗುಂಜಿ ಜೇನಿನಲ್ಲಿ ನೆಕ್ಕಿಸಬೇಕು. ಮತ್ತು ಸಾರಸ್ವತಾರಿಷ್ಟ ಬಿಸಿನೀರಿನಲ್ಲಿ ಕೊಡಬೇಕು ಮತ್ತು ಬೆಳಗಾವಿಯ ಡಾ. ಕಿತ್ತೂರರ ಬಾಲಗ್ರಹ ಚೂರ್ಣವೂ ಅತ್ಯಂತ ಗುಣಕಾರಿ.

(೯) ಬಾಹ್ಮಿತೊಪ್ಪಲ ರಸದಲ್ಲಿ ತಾಪ್ಯಾದಿಲೋಹ ೧ ಗುಂಜಿ ಕೊಡಬೇಕು.

(೧೦) **ತೀವ್ರಜ್ವರ:**—ಪ್ರವಾಳ + ಗುಡೂಚಿ-ಅಮೃತಸತ್ವ. ತುಳಸೀ ರಸ ಜೇನಿನಲ್ಲಿ ಅಥವಾ ಭತ್ತರಳಿನ ನೀರಲ್ಲಿ ಮೌಕ್ತಿಕ ತಕ್ಕೊಳ್ಳಬೇಕು.

(೧೧) **ಕೂಗಿಕೊಳ್ಳುವದು .ಚೀರಿಕೊಳ್ಳುವದು:**— ಮಹಾವಾತ ವಿಧ್ವಂಸ ½ ಗುಂಜಿ ಕಾಡಿಗ್ಗರಗಿನ ಸರ ಜೇನಿನಲ್ಲಿ.

(೧೨) **ಕಫವೃದ್ಧಿ:**— ಪಂಚಸೂತ ೧/೨ ಗುಂಜಿ ಬಿಸಿನೀರಿನಲ್ಲಿ. ಸೆಟಿತ •ಕಮ್ಮಿಯಾದಮೇಲೆ ಮಲೇರಿಯಾ ಮುಂತಾದ ರೋಗಗಳಿದ್ದರೆ ಅವುಗಳಿಗೆ ತಕ್ಕ ಉಪಚಾರಮಾಡಬೇಕು. ಕ್ರಿಮಿಶೋಧನ ಅಗತ್ಯವಾಗಿ ಮಾಡಿಕೊಳ್ಳಬೇಕು.

**ಆ್ಯಲೋಪಥಿ:**—ಜ್ಞಾನಜಂತುಗಳ ಶಮನಕ್ಕೆ ಔಷಧಿ ಕೊಡತ್ತಾರೆ. ವಸಡಿಗಳು ಉಬ್ಬಿದ್ದರೆ ಒಡೆದುಬಿಡುತ್ತಾರೆ. ಜಂತಿಗೆ ಪುಡಿಕೊಡುತ್ತಾರೆ. ಡಾ. ಜಯಕರ್‌ರ ಕನ್‌ವ್ಹಲ್‌ಶನ್ ಕ್ಯೂಅರ್ ಇದೊಂದು ಉತ್ತಮತರಗತಿಯ ಔಷಧಿಯಾಗಿದೆ.

**ಬಾಯೋಕೆಮಿಕ್:**—ಮೇ. ಫಾ. ಮತ್ತು ಕಲ್ಕೇ—ಫಾ. ಈ ಪ್ರಮುಖ ಔಷಧಿಗಳನ್ನು ಆದಲು ಬದಲು ಮಾಡಿ ಕೊಡಬೇಕು.

—೦—

# ಘಟಸರ್ಪ

## Diphtheria ಡಿಪ್ಥೇರಿಯಾ

ಸಂಣ ಮಕ್ಕಳಿಗಾಗುವದಿದೊಂದು ಭಾರೀ ಸಾಂಕರೋಗ. ಸೀತಕಟಿ ಬಂಧದಲ್ಲಿ ಇದು ವಿಶೇಷ. ಉಷ್ಣಕಟಿಬಂಧದಲ್ಲಿಯೂ ಕ್ವಚಿತ್ತಾಗಿ ಇದರ

ಪಿಡಗು ಬರುವದುಂಟು. ಡಿಫ್ಥೇರಿಯಾ ಬ್ಯಾಸಿಲಾಯ್ ಎಂಬದು ಇದರ ಕ್ರಿಮಿಗಳ ಹೆಸರು. ಇವು ಗಂಟಲಲ್ಲಿಯೇ ಇರುವದಾದರೂ ವಿಷ ಮಾತ್ರ ಮೈಯ್ಯಲ್ಲಾ ಹಬ್ಬುತ್ತದೆ. ಚಿಕ್ಕ ಮಕ್ಕಳಿಗೆ ಅಲ್ಲದೆ ಕ್ವಚಿತ್ತಾಗಿ ದೊಡ್ಡವರಿಗೂ ಇದರ ಬಾಧೆ ತಟ್ಟುವದುಂಟು. ಆದರೆ ದೊಡ್ಡವರಿಗೆ ಇದು ತ್ರಾಸ ಹೆಚ್ಚಾಗದೆ ಇವರ ಗಂಟಲಿನಲ್ಲಿರುವ ಈ ರೋಗದ ಕ್ರಿಮಿಗಳ ಮಾತ್ರ ಸಂಣ ಹುಡುಗರಲ್ಲಿ ಇವರ ಮುಖಾಂತರವಾಗಿ ಅಥವಾ ಪಿಡುಗಿನ ರೂಪವಾಗಿ ಪ್ರವೇಶಿಸುತ್ತವೆ

**ಲಕ್ಷಣ ಮತ್ತು ಭಾವನೆಗಳುಃ—** ಒಮ್ಮೆಂದೊಮ್ಮೆ ಬಹಳ ಜ್ವರ, ಕೆಮ್ಮು ಶುರುವಾಗಿ ವಿಕಾರ ರೂಪುಗೊಳ್ಳುತ್ತದೆ. ನ್ಯೂಮೋನಿಯಾದ ಅನುಮಾನವೂ ಬರುವದರಿಂದ ವಿಕಾರ ಕೂಡಲೇ ಲಕ್ಷ್ಯಕ್ಕೆ ಬರುವದಿಲ್ಲ. ಇದರಲ್ಲಿ ಟಾನ್‌ಸೆಲ್ಸ ಮತ್ತು ಗಂಟಲುಗಳ ಭಾಗದಲ್ಲಿ ಈ ಕ್ರಿಮಿಗಳಿಂದ ಒಂದು ತರ ಹದ (ಡಿಫ್ಥಿರಿಕ್ ಮೆಂಬ್ರೈನ್) ಆವರಣ ತಯಾರಾಗುತ್ತದೆ. ಅದನ್ನು ಕೆದರಿ ತೆಗೆಯಲಿಕ್ಕೆ ಪ್ರಯತ್ನ ಮಾಡಿದರೆ ರಕ್ತ ಬರುತ್ತದೆ. ಸಾದಾ ಕಫದ ಆವರಣವನ್ನು ಸಹಜವಾಗಿ ತೆಗೆಯಲು ಬರುತ್ತದೆ. ಗಂಟಲು ಬಾತು ನುಂಗುವಾಗ, ಉಸಿರಾಡಿಸುವಾಗ ತ್ರಾಸವಾಗುತ್ತದೆ. ಕೊನೆಗೆ ಪೂರಾ ಉಸಿರುಗಟ್ಟಿ ಸಾವು ಬರುತ್ತವೆ. ಇದರಲ್ಲಿ ಜ್ವರ ನಿರಂತರ ನಿಲ್ಲುತ್ತದೆ. ಅಲ್ಲದೆ ಹಸಿವೆಕಟ್ಟಿ ಅಶಕ್ತಿಯಾಗಿ ಗಂಟಲಿನಲ್ಲಿಯೇ ಸಂಣ ಕೆಮ್ಮು (ಶಾರ್ಟ ಕಾಫ) ಬರುತ್ತಿರುತ್ತದೆ. ಕೊನೆಗೆ ಪೂರಾ ಶ್ವಾಸೋಚ್ಛ್ವಾಸ ನಿಂತರೆ ಮಾತ್ರ ಮೃತ್ಯು ಬರುತ್ತದೆ.

**ಸಾಧ್ಯಾಸಾಧ್ಯತ್ವ:—** ಇದನ್ನು ಕಷ್ಟ ಸಾಧ್ಯವೆಂದು ತಿಳಿಯಬೇಕು. ಹೊತ್ತಿನಲ್ಲಿಯೇ ಆ್ಯಂಟಿ ಡಿಫ್ಥೇರಿಕ್ ಸೀರಂ ಇಂಜಕ್ಶನ್ ಕೊಡಿಸಿದರೆ ರೋಗಿ ಸುಧಾರಿಸುವದು ಶಕ್ಯವಿರುತ್ತಿದೆ.

**ಚಿಕಿತ್ಸೆಃ—** (೧) ಮೊದಲಿಗೆ ಸಿತೋಪಲಾದಿ ೪ ಗುಂಜಿ + ಬಾಲ ಸಂಜೀವಿನಿ ೪ ಗುಂಜಿ, ೪ ಚೀಟು ತುಳಸೀ ರಸ ಜೇನಿನಲ್ಲಿ.

(೨) ರೇವಾ ಚಿನ್ನೀ ಅರ್ಕ ೨ ಗುಂಜಿ+ಜೇಷ್ಠ ಮಧು ೨ ಗುಂಜಿ, ೨ ಚೀಟು ಬಿಸಿ ನೀರಿನಲ್ಲಿ.

(೩) ಗ್ಲಿಸರಿನ್ ಪಿಚಕಾರಿಯನ್ನೂ ಕೊಡಬೇಕು,

ನರಗಳು ಉಬ್ಬಿಸಹತ್ತಿ ಸಣ್ಣ ಜ್ವರಗಳು ಸುರುವಾಗುತ್ತವೆ. ಕ್ವಚಿತ್ ಜುಲಾಬೂ ಆಗುತ್ತದೆ. ಅಗ್ನಿಮಾಂದ್ಯ, ವಾಂತಿ, ಜಾಂಡಿಸು, ಪ್ಲೀಹಾವೃದ್ಧಿ ಮೊದಲಾದ ಲಕ್ಷಣಗಳೂ ಸಂಭವಿಸುತ್ತವೆ. ಸೂಕ್ಷ್ಮ ಘಟಕಗಳು ಕೆಡುತ್ತ ಬಂದು ಯಕೃತ್ತು ನಿರುಪಯೋಗಿಯಾಗುವದಕ್ಕೆ ಯಕೃತ್ ದಾಲ್ಯೋದರ (ಲಿವ್ಹರ್ ಸಿರೋಸಿಸ್) ಎನ್ನುತ್ತಾರೆ. ಸಣ್ಣ ಮಕ್ಕಳನೇಕರಿಗೆ ಈ ವಿಕಾರ ಬಲವಾಗಿ ಕಂಡುಬರುತ್ತದೆ. ಹೊಟ್ಟೆ ಬೆಳೆಯುತ್ತ ಬಂದು ಕೈಕಾಲು ಸಣ್ಣಾಗುತ್ತವೆ. ಕೊನೆಗೆ ಕಾಮಾಲೆಯಾಗಿ [illegible] ಬಾಲು ಮಕ್ಕಳು ಕೈಬಿಡುತ್ತವೆ.

**ಸಾಧ್ಯಾಸಾಧ್ಯತ್ವ:—** ಪ್ರಥಮಾವಸ್ಥೆಯಲ್ಲಿ ಇದು ಸಾಧ್ಯವಾಗಿರುತ್ತದೆ. ಮುಂದೆ ಮುಂದೆ ರೋಗ ಕಷ್ಟಸಾಧ್ಯವಾಗಿ ಬಲಿತ ಮೇಲೆ ಅಸಾಧ್ಯವಾಗುತ್ತದೆ. ಯಕೃತ್ತಿನ ವಿಕಾರದ ಮೇಲೆ ಆಯುರ್ವೇದದ ಔಷಧಿಗಳು ಎತ್ತಿದ ಕೈ. ಆಲೋಪಥಿಯ **ಪ್ರಕಾರದಿಂದ** ಅಸಾಧ್ಯವೆಂದು ಬಿಟ್ಟ ಮಕ್ಕಳು ಆಯುರ್ವೇದದ ಉಪಚಾರದಿಂದ ನೆಟ್ಟಗಾದ ಉದಾಹರಣಗಳಿಗೇನೂ ಕಡಿಮೆಯಿಲ್ಲ. ವಿಕಾರ ಬಹಳ ಬೆಳೆದರೆ ಅಂದರೆ ಕಾಮಾಲೆ ಮತ್ತು ಬಾವುಗಳು ಬಂದ ಮೇಲೆ ಕೈಬಿಡುತ್ತದೆ.

**ಪಥ್ಯ:—** ಇದಕ್ಕೆ ಚನ್ನಾಗಿ ಮಲಶೋಧನೆ ಮಾಡಿಕೊಂಡು ಮಲಕೋಠ ಶುದ್ಧಿ ಮಾಡಿಕೊಳ್ಳಬೇಕು. ಮಕ್ಕಳನ್ನು ತೆಳುವಾದ ಆಹಾರದ ಮೇಲೆಯೇ ಇಡಬೇಕು.

ಔಷಧ:—(೧) ರೇವಾಚಿನ್ನಿ ಅರ್ಕ ೨ ಗುಂಜಿ + ಅಮೃತ ಸತ್ವ ೨ ಗುಂಜಿ ೪ ಚೀಟಿ ಬಿಸಿ ನೀರಿನಲ್ಲಿ.

(೨) ಬಾಲಸಂಜೀವನಿ ೨ ಗುಂಜಿ + ಸಿತೋಪಲಾದಿ ೧ ಗುಂಜಿ + ಪ್ರವಾಳ ೧ ಗುಂಜಿ ೪ ಚೀಟಿ ಜೇನಿನಲ್ಲಿ.

(೩) ಅಮೃತಾರಿಷ್ಟ, ರೋಹಿತಕಾರಿಷ್ಟ ಮುಂತಾದವು.

**ಮೃದ್ಭಕ್ಷಣ—ಮಣ್ಣು ತಿಂದದ್ದರಿಂದಾದ ವಿಕಾರಕ್ಕೆ:—** (೧) ಮೃದ್ವಿರೇಚನ ಚೂರ್ಣ ೪ ಗುಂಜಿ + ತ್ರಿಫಳಾ ೫ ಗುಂಜಿ ೪ ಚೀಟು ಬಿಸಿ ನೀರಲ್ಲಿ.

(೨) ಲಘುಮಾಲಿನೀ ವಸಂತ ೧ ಗುಂಜಿ + ಮಂಡೂರ ೧ ಗುಂಜಿ, ೨ ಚೀಟು. ಕುಮಾರೀ ಆಸವ ನಂ. ೩ ರಲ್ಲಿ. ತಾಪ್ಯಾದಿ ಲೋಹ ೨ ಗುಂಜಿ ೨ ಚೀಟು. ನಂ. ೩ ನೇ ಕುಮಾರಿ ಆಸವದಲ್ಲಿ.

(೪) ನವಾಯುಸಚೂರ್ಣ ೨ ಗುಂಜಿ ೨ ಚೀಟು ಲೋಹಾಸವದಲ್ಲಿ.

**ಕ್ರಿಮಿ-ಜಂತಿಗೆ:—**(೧) ವಾಯುವಡಂಗ ಪುಡಿ ೪ ಗುಂಜಿ+ ತ್ರಿಫಳಾ ೪ ಗುಂಜಿ ಕಷಾಯ.

**ಯಕೃತ್‌ವೃದ್ಧಿ:—** (೧) ಆರೋಗ್ಯವರ್ಧಿನಿ ½ ಗುಂಜಿ + ಸುವರ್ಣ ಮಾಕ್ಷಿಕ ½ ಗುಂಜಿ + ಪ್ರವಾಳ ೨ ಚೀಟು ಜೇನಿನಲ್ಲಿ. ಸಂಜೆ ಮುಂಜಾವಿಗೆ.

(೨) ಕುಮಾರಿ ಆಸವ ನಂ. ೩ರ ೩೦ ಹನಿ+ರೋಹಿತಕಾರಿಷ್ಟ ೩೦ ಹನಿ+ಕಾದಾರಿದ ನೀರು-೧೨೦ ಹನಿ+ಶುದ್ಧ ನವಸಾಗರ ೧ ಗುಂಜಿ. ಮಧ್ಯಾಹ್ನ ರಾತ್ರಿಗಳಲ್ಲಿ, ಈ ಮಿಶ್ರಣ ಯಕೃದ್ವಿಕಾರಕ್ಕೆ ಅಪ್ರತಿಮವಾಗಿದೆ.

(೩) ಕುಮಾರಿ-ಲೋಳಸರದ ರಸ ಒಂದು ಚಮಚೆ+ಜೇನುತುಪ್ಪತ್ತಿಚ ಮಚೆ ಎರಡು ಸಲ. (ಇದು ಅನುಭವದ ಔಷಧಿ)

(೪) ಗೋಮೂತ್ರ ಒಂದೊಂದು ಚಮಚೆ ಸಂಜೆ ಮುಂಜಾನೆ ತಾಜಾ ತಂದು ಹಾಕಬೇಕು.

ಅಥವಾ ಮೂತ್ರ ಕ್ಷಾರ ಒಂದೊಂದು ಗುಂಜಿ. ಹಸುವಿನ ಹಾಲಿನಲ್ಲಿ ೨ ಸಲ. ಮುಂಜಾನೆ, ಸಂಜೆಗೆ. ಇದು ಬಡವರ ಉತ್ತಮ ಮದ್ದು.

**ಪೇಟೆಂಟ:—** ಜೆಮ್ಮೀ ವೆಂಕಟರಮಣಯ್ಯನವರು ಮದ್ರಾಸ ಇವರ ಔಷಧಿಯೂ ಅಸಂಖ್ಯ ಮಕ್ಕಳನ್ನು ಬದುಕಿಸಿಕೊಳ್ಳುತ್ತದೆ.

# ಅಶ್ಮರಿ

## Urinary Stones ಯುರಿನರಿಸ್ಟೋನ್ಸ

ಈ ವಿಕಾರವೂ ಚಿಕ್ಕಮಕ್ಕಳಲ್ಲಿ ವಿಶೇಷವಾಗಿ ಕಂಡುಬರುವದಾಗಿದೆ. ಹುಡುಗರು ಉಚ್ಚೆ ಹೊಯ್ಯುವಾಗ ಅಳುವದು, ಇಂದ್ರಿಯದಲ್ಲಿ ಶೂಲಿ ಬಂದು ಲಿಂಗವನ್ನು ಕೈಲಿ ಹಿಡಿದುಕೊಂಡು ವೇದನೆ ತಾಳಲಾರದೆ ಕುಣಿಯುವದು ಇದರ ವಿಶೇಷ ಲಕ್ಷಣವಾಗಿದೆ. ಅಳುತ್ತವೆ. ಒದರುತ್ತವೆ. ಮೂತ್ರವಾದನಂತರ ರಕ್ತ ಹೋಗುತ್ತದೆ.

**ಚಿಕಿತ್ಸೆ:—** (೧) ನೆಗ್ಗಲ ಮುಳ್ಳು+ಪುನರ್ನವಾ+ತ್ರಿಫಳಾಗಳ ಕಷಾಯವನ್ನು ಕಾಢೆ, ನಿಕಾಢೆ ಮಾಡಿ ೭ ದಿನ ೨ ವೇಳೆ ಕೊಡಬೇಕು.

(೨) ಪಾಷಾಣಭೇದಿ+ನೆಗ್ಗಲುಮುಳ್ಳು+ಸೋನಾಮುಖಿಗಳ ಕಷಾಯ ೭ ದಿನ ಕಾಢೆ, ನಿಕಾಢೆ— (೩) ಪಾಷಾಣಭೇದಾದಿ ಶಿದ್ಧಘೃತ ಮೇಲೆ ಹಚ್ಚಬೇಕು. ಹೊಟ್ಟೆಯಲ್ಲಿ ೨ ಸಲ ಒಂದೊಂದು ತೊಲಿಯಂತೆ ಕೊಡಬೇಕು. ಇದರಿಂದ ಮೂತ್ರದ್ವಾರದಲ್ಲಿದ್ದ ಸಂಣ ಹರಳುಗಳು ಬಿದ್ದು ಹೋಗುತ್ತವೆ ಹರಳು ದೊಡ್ಡದಿದ್ದರೆ ಆಪರೇಶನ್ ಮಾಡಿಸಬೇಕು.

—o—

# ನೇತ್ರಾಭಿಷ್ಯಂದ [ಕಣ್ಣು ಬರೋಣ]

## Conjunctivitis ಕಂಜಂಕ್ಟಿವ್ಹಾಯಿಟಿಸ್

ಬಹಳಷ್ಟು ಹುಡುಗರ ಕಂಣುಗಳು ಸ್ವಾಭಾವಿಕವಾಗಿ ಕೆಂಪಗೆ ಇರುವವು. ಕೆಲವರಿಗೆ ಮೇಲಿಂದ ಮೇಲೆ ಕಂಣು ಬರುತ್ತವೆ. ಆಗ ಒಂದೇ ಸವನೆ ನೀರು ಸುರಿಯುತ್ತ ಕಂಣು ಪಿಚ್ಚುಗಟ್ಟುತ್ತವೆ. ಅದನ್ನು ಆಗಲೇ ತಡೆಗಟ್ಟಬೇಕು. ಇದು ಸಾಂಸರ್ಗಿಕವಾಗಿದ್ದು ಮಕ್ಕಳಿಗೆ ಶಾಲೆಯಲ್ಲಿ ಸಂಗಡಿಗರಿಂದ ಕಾಣಿಕೆಯಾಗಿ ಬರುತ್ತಿದೆ. ಮನೆಯಲ್ಲಿ ಒಂದು ಹುಡುಗ

ನಿಗೆ ಬಂದರಾಯಿತು, ಎಲ್ಲ ಹುಡುಗರಿಗೂ ಬರುವದಲ್ಲದೆ ಹಿರಿಯರಿಗೂ ಇದರ ಪ್ರಸಾದ ತಪ್ಪುವದಿಲ್ಲ.

**ಚಿಕಿತ್ಸೆ:—** (೧) ಕಹೀ ಬೇವಿನ ಎಲೆಗಳನ್ನು ಹಾಕಿ ಕಾಯಿಸಿದ ನೀರುಗಳಿಂದ ಕಂಣು ತೊಳೆಯಬೇಕು. ಬಿಸಿಲಲ್ಲಿ ಅಲೆಯಗೊಡಬಾರದು.

(೨) ಕರೇ ಮದುಗುಣಿಕಿಯ ಎಲೆಯ ರಸದಲ್ಲಿ ಫಟಿಕದ ಅರಳ ಮಾಡಿ, ಕುದಿಯುವ ನೀರಿನಲ್ಲಿ ಹಾಕಿ ಆ ಮಿಶ್ರಣ ೨ ಹನಿಯಂತೆ ತಣ್ಣಗಾದ ನಂತರ ಕಂಣಿಗೆ ಹಾಕಬೇಕು.

(೩) ಗುಲಾಬೀ ನೀರು ೨ ಹನಿಯಂತೆ ಹಾಕಬೇಕು.

(೪) ಬಿಳೀಉಳ್ಳಾಗಡ್ಡೀ ರಸ ಸ್ವಚ್ಛ ಕಲ್ಲಲ್ಲಿ ಕುಟ್ಟಿ ಸ್ವಚ್ಛ ಅರಿವೆಯಲ್ಲಿ ಹಾಕಿ ಕಂಣಿಗೆ ಮತ್ತೆ ಮತ್ತೆ ಹಿಂಡುವದಲ್ಲದೆ ಆ ಗಂಟನ್ನು ಕಂಣೊರಿಸಿಕೊಳ್ಳಲು ಕೊಡಬೇಕು. ಪ್ರಥಮಾವಸ್ಥೆಯಲ್ಲಿ ಇದರಂಥ ಮತ್ತೊಂದು ಮದ್ದಿಲ್ಲ.

(೫) ಅರ್ಜಿರಾಲ್ ೨ ಹನಿಯಂತೆ ಕಂಣಲ್ಲಿ ಹಾಕಬೇಕು.

## ಮಕ್ಕಳಿಗೆ ಬಾರದ ಬೇನೆ

ಮಕ್ಕಳಿಗಾಗುವ ವಿಶೇಷ ರೋಗಗಳ ವರ್ಣನೆಯನ್ನು ಇಲ್ಲಿಯ ವರೆಗೆ ಮಾಡಿದ್ದಾಗಿದೆ. ಅಲ್ಲದೆ ಬೇರೆ ಸಾಮಾನ್ಯ ವಿಕಾರಗಳೂ ಆಗುತ್ತವೆ. ಆಗಾಗ ಆಯಾ ರೋಗಗಳಿಗೆ ತಕ್ಕ ಉಪಚಾರ ಮಾಡಬೇಕು.

ಕೆಲವು ರೋಗಗಳು ಮಕ್ಕಳಲ್ಲಿ ಕಂಡೇ ಬರುವದಿಲ್ಲ. ಉದಾ:— (೧) ಮಧುಮೇಹ, (೨) ಕ್ಯಾನ್ಸರ, (೩) ಬ್ಲಡ್‌ಪ್ರೆಶರ್. ಆದ್ದರಿಂದ ಮಕ್ಕಳ ರೋಗ ನಿದಾನಮಾಡುವಾಗ ಈ ರೋಗಗಳ ಸಂಶಯ ತಕ್ಕೊಂಡು ತಲೆತುರಿಸಿಕೊಳ್ಳುತ್ತ ಕೂಡಬೇಕಾಗಿಲ್ಲ.

—೦—

# ಕಾಸ

## Cough ಕಫ

ಕ್ಷಯ, ಆಂತ್ರಿಕ, ಶ್ಲೇಷ್ಮಕ, ಶ್ವಸನಕ, ಹೃದ್ರೋಗ ಮೊದಲಾದ ಅನೇಕ ರೋಗಗಳಲ್ಲಿ ಕೆಮ್ಮು ಒಂದು ಲಕ್ಷಣವೆಂದು ಬರುತ್ತದೆ. ಇದು ಬಲು ತ್ರಾಸದ ಉಪದ್ರವವಾದ್ದರಿಂದ ಆಗಲೇ ಚಿಕಿತ್ಸೆ ಮಾಡಬೇಕು. ನೆಗಡಿಯಂಥ ಸರ್ವ ಸಾಮಾನ್ಯ ವಿಕಾರದಲ್ಲೂ ಇದು ಬರುತ್ತವೆ. ಮೇಲಿಂದ ಮೇಲೆ ನೆಗಡಿಯಾಗಿ ಕೆಮ್ಮು ಬರುವ ಲಕ್ಷಣ ಕೆಡಕೆಂದು ತಿಳಿಯುತ್ತಾರೆ. ಇದು ಕ್ಷಯದ ಮುಂಗುರುತೂ ಆಗಬಲ್ಲದು.

ಪ್ರತಿ ಶ್ಯಾಯಾದಥೊ ಕಾಸಃ ಕಾಸಾತ್ಸಂಜಾಯತೇ ಕ್ಷಯಃ ॥ ನೆಗಡಿಯಿಂದ ಕೆಮ್ಮು, ಕೆಮ್ಮಿನಿಂದ ಕ್ಷಯವಾಗುತ್ತದೆಂದು ಮಾಧವಕಾರರ ಮತ. ಅಂತೇ ಕೆಮ್ಮಿನ ವಿಚಾರವನ್ನು ಸ್ವತಂತ್ರವಾಗಿ ಮಾಡೋಣ.

**ಕಾರಣ ಮೀಮಾಂಸೆ:—** ಇದರಲ್ಲಿ ಪ್ರಾಣ ಮತ್ತು ಉದಾನ ವಾಯುಗಳ ದುಷ್ಟಿಯಾಗಿರುತ್ತದೆ.

ಪ್ರಾಣೋಹ್ಯುದಾನಾನುಗತಃ ಪ್ರದುಷ್ಟಃ ॥ ಎಂದು ತಿಳಿಯಬೇಕು, ನೆಗಡಿ, ಹೊಗೆ, ಧೂಳ, ಹಲ್ಲಿನಲ್ಲಿಯ ಕೀವು, ಕಿರುನಾಲಿಗೆ ಬೀಳುವದು. ಯಕೃತ್‌ದುಷ್ಟಿ, ಫುಪ್ಪುಸವಿಕೃತಿ, ಹೃದಯವಿಕೃತಿ ಇತ್ಯಾದಿ ಕಾರಣಗಳಿಂದ ಕೆಮ್ಮು ಬರುತ್ತದೆ. ಪೂಯದಂತ (ಪಾಯೋರಿಯಾ) ವಿಕಾರದಲ್ಲಿ ಗಲಗ್ರಂಥಿ ಟಾನ್‌ಸೆಲ್ಸಗಳಿಗೆ ಬಾವುಬರುವದರಿಂದಲೂ ಕೆಮ್ಮಿಗೆ ಸುರುವಾಗುತ್ತದೆ.

**ಪ್ರಕಾರ:—** ಇದರಲ್ಲಿ ಪ್ರಕಾರಗಳು ಮುಖ್ಯವಾಗಿ ಮೂರು. ವಾತ ದುಷ್ಟಿಯಿಂದ ಒಣಕೆಮ್ಮು, ಕಫ ಬೀಳುವದಿಲ್ಲ. ಎದೆ ನೋಯುತ್ತದೆ. ಕಿರುನಾಲಿಗೆ ಬಿದ್ದಿದ್ದರೆ ಮಲಗುವಾಗ ಕೆಮ್ಮು ಬಲು ತ್ರಾಸಕೊಡುತ್ತದೆ. ಪಿತ್ತಜ ಕಾಸದಲ್ಲಿ ರಕ್ತ ಬೀಳುತ್ತದೆ. ಕಫಜ ಕಾಸದಲ್ಲಿ ಜಿಗುಟು ಕಫ ಬೀಳುತ್ತದೆ. ಕ್ವಚಿತ್ತಾಗಿ ಅದರಲ್ಲಿ ಕೀವೂ ಕಾಣಿಸಿಕೊಳ್ಳಬಹುದು.

**ಚಿಕಿತ್ಸೆ:–** (೧) ವಾತದಿಂದ ಬರುವ ಒಣಕೆಮ್ಮಿಗೆ:– ಸಿತೋಪಲಾದಿ + ಜೇಷ್ಠಮಧು, ಜೇನಿನಲ್ಲಿ. (೨) ದ್ರಾಕ್ಷಾಸವ. (೩) ಕರ್ಪೂರಾದಿ ಅಥವಾ ಖದಿರಾದಿ ವಟಿಗಳನ್ನು ಕಲ್ಲುಸಕ್ಕರೆ ಜೊತೆ ಬಾಯಲ್ಲಿ ಹಿಡಿಯಿರಿ.

**ಪಿತ್ತದಿಂದ ಬರುವ ಕೆಮ್ಮಿಗೆ:—** (೧) ಕಾಮದುಘಾ ಮೌಕ್ತಿಕ ಯುಕ್ತ + ಯಷ್ಟಿಮಧು (ಜೇಷ್ಠಮಧು) ಆಡಿನಹಾಲಿನಲ್ಲಿ.

(೨) ಕರ್ಪೂರಾದಿವಟಿ. (೩) ದ್ರಾಕ್ಷಾಸವ (೪) ವಾಸಾವಲೇಹ ಅಥವಾ ವಾಸಕಾಸವ. (೫) ಸುವರ್ಣ ಸೂತಶೇಖರ + ಪ್ರವಾಳಗಳನ್ನು ಜೇಷ್ಠಮಧುವಿನ ಕಷಾಯದಲ್ಲಿ.

**ಕಫದಿಂದ ಬರುವ ಕೆಮ್ಮಿಗೆ:—** (೧) ತಾಲೀಸಾದಿಚೂರ್ಣ + ಟಂಕಣ, ಬಳಿಗಾರ ಭಸ್ಮಗಳನ್ನು ಜೇನಿನಲ್ಲಿ.

(೨) ನಾಗಗುಟಿ. (೩) ಸಮೀರಪನ್ನಗ ೧ ಗುಂಜಿ ಅಥವಾ ಅದು ಗಟ್ಟಿಯಾಗಿದ್ದರೆ ೫ ಷುತ್ತು ದ್ರಾಕ್ಷಾಸವದಲ್ಲಿ ತೇದು ಕುಡಿಸಬೇಕು. ವಾತಕಫಗಳಿಂದ ಕೂಡಿದ ಕೆಮ್ಮಿಗೆ ಇದೊಳ್ಳೇ ಪರಿಣಾಮಕಾರಿ.

(೪) ಶೃಂಗಶೃಂಗಭಸ್ಮ + ಜೇಷ್ಠಮಧು ಜೇನಿನಲ್ಲಿ. (೫) ಪುಷ್ಕರ ಮೂಲ ೪ ಗುಂಜಿ + ಜೇಷ್ಠಮಧು ಪುಡಿ ೪ ಗುಂಜಿ. ತಾರೀಕಾಯಿಪುಡಿ ೪ ಗುಂಜಿ. ೪ ಚೀಟು ಜೇನುತುಪ್ಪದಲ್ಲಿ.

**ಕಿರುನಾಲಿಗೆಬಿದ್ದರೆ:—** (೧) ಬೆಳ್ಳೊಳ್ಳೀರಸ ಮತ್ತು ಜೇನುತುಪ್ಪ ಕೂಡಿಸಿ ಕಿರುನಾಲಿಗ್ಗೆ ಹಚ್ಚಬೇಕು. ಹಾಗೂ ಬೆಳ್ಳೊಳ್ಳೀ ಸುಟ್ಟು ದಿನಾಲು ರಾತ್ರಿ ಮಲಗುವಾಗ ತಿನ್ನಲು ಕೊಡಬೇಕು. ಅಲ್ಲದೇ ಕಿರುನಾಲಿಗೆಯನ್ನು ಮೇಲಕ್ಕೆ ಒತ್ತಿಸಿಕೊಳ್ಳುವ ಪ್ರಕಾರಗಳನ್ನು ಅನುಸರಿಸಬಹುದು.

**ಆಯುರ್ವೇದಿಕ ಚುಚ್ಚು ಮದ್ದು:—** ವಾಸಾ.

**ಪೇಟೆಂಟ:—**(೧) ಕ್ಯಾಸ್‌ಪೋ, (೨) ಝುಪ್ರಾಲ್, (೩) ಗ್ಲಾಯ್ ಕೋಡಿನ್ ಟರ್‌ಪ್ ವಸಾಕಾ.

**ಥ್ರೋಟಪೇಂಟ (ಗಂಟಲಿಗೆ ಹಚ್ಚುವ ಔಷಧಿ):—** ಜೇನಿನಲ್ಲಿ ಮಾಯಫಳ+ಜೇಷ್ಠಮಧುಗಳ ಬಟ್ಟೆಯಲ್ಲಿ ಸೋಸಿದ ಪುಡಿ ಕೂಡಿಸಿ ಹಚ್ಚಬೇಕು,

—o—

## ಶ್ವಾಸ

### Asthma — ಅಸ್ಥಮಾ

ವಯಸ್ಸಿನ ನಿರ್ಬಂಧವಿಲ್ಲದೆ ಬರುವ, ಹೆಚ್ಚಾಗಿ ಮುಪ್ಪಿನಲ್ಲಿಯೇ ವಿಶೇಷವಾಗಿ ಕಾಡುವ ಶ್ವಾಸನಲಿಕೆಗಳ ವಿಕಾರವೇ ದಮ್ಮು. ಇದು ಸಾಂಸರ್ಗಿಕವಾಗಿ ಅಥವಾ ಕ್ರಿಮಿಗಳಿಂದ ಬರುವದಲ್ಲ. ಬೇಕಾದ ಮಾತುಗಳಲ್ಲಿ ಇದು ಬರಬಹುದು. ಆದರೆ "ಮೇಘಚ್ಛನ್ನೇ ಅನ್ಹಿದುರ್ದಿನೇ" ನೋಡ ಮುಸುಕಿದ ಹಗಲು ದುರ್ದಿನ, ಇಂಥ ದಿನಗಳಲ್ಲಿ ಇದರ ತ್ರಾಸ ವಿಶೇಷ. ಇದು ಪ್ರಾಯಃ ಆನುವಂಶಿಕವಾಗಿರುತ್ತದೆ. ಕೆಲವರಿಗೆ ಇದು ಸ್ವಾರ್ಜಿತವಾಗಿಯೂ ಬರಬಹುದು. ಈ ವಿಕಾರದಲ್ಲಿ ಶ್ವಾಸೋಚ್ಛ್ವಾಸಕ್ಕೆ ತ್ರಾಸವಾಗುತ್ತಿದೆ. ಹೆಚ್ಚಾಗಿ ಉಸಿರು ಹೊರಗೆ ಬಿಡುವಾಗ ರೋಗಿಗೆ ಕಸಿವಿಸಿಯಾಗುತ್ತಿದೆ ಇದಕ್ಕೆ ಆಗಾಗ್ಗೆ ಭರತಿ ಬರುತಿರುತ್ತದೆ. ಈ ಸ್ಥಿತಿಯಲ್ಲಿ ರೋಗಿಯ ಪರಿಸ್ಥಿತಿ ಶೋಚನೀಯವಾಗುತ್ತದೆ, ಹೊಸ ವೈದ್ಯರು ಇಂಥ ವೇಳೆಯಲ್ಲಿ ಗಾಬರಿಗೊಳ್ಳುತ್ತಾರೆ. ಆದರೆ ಯೋಗ್ಯ ಉಪಚಾರವಾದರೆ ತಕ್ಷಣ ರೋಗಿ ಚೇತರಿಸಿಕೊಳ್ಳುತ್ತಾನೆ. ಆದರೆ ಮತ್ತೆ ಅಪಥ್ಯ ಹವೆಗಳ ಹೆಚ್ಚು ಕಡಿಮೆ ಮೂಲಕ ಬರುತ್ತದೆ. ರೋಗಿಗೆ ಮಲಗಲು ಬರುವದಿಲ್ಲ. ಕುಳಿತೇ ಕಾಲ ಕಳೆಯಬೇಕು. ಬೇಗ ಸಾಯುವದೂ ಇಲ್ಲಾ, ಬದುಕಿದ್ದು ಸುಖವನ್ನು ಭೋಗಿಸಲು ಇಲ್ಲದ ದಮ್ಮಿನವರಂಥ ದುರ್ದೈವಿ ಪ್ರಾಣಿಗಳು ಮತ್ತಿಲ್ಲ.

**ಕಾರಣಮೀಮಾಂಸೆ:—** ಇದರಲ್ಲಿ ವಾತ ಕಫಗಳೆರಡೂ ದೋಷಗಳ ದುಷ್ಟಿಯಾಗಿರುತ್ತದೆ. ವಂಶಪರಂಪರೆಯು ಮಹತ್ವದ ಕಾರಣ. ಹಾಗೆಯೇ

ತಂಪು ಕಫವರ್ಧಕ ಹಾಗೂ ಕರಿದ ಪದಾರ್ಥಗಳನ್ನು ತಿನ್ನುವದರಿಂದ ತಂಬಾಕು ತಿನ್ನುವದು ಅಥವಾ ಸೇದುವದರಿಂದ ಉಗ್ರ ವಾಸನೆಯ ವಸ್ತುಗಳನ್ನು ಮೂಸುವದರಿಂದ, ಹೊಗೆ ಧೂಳಗಳು ಪುಪ್ಪುಸದಲ್ಲಿ ಸೇರುವದರಿಂದ, ಮುಟ್ಟು ಮುಂತಾದ ಸ್ರಾವಗಳು ಒಮ್ಮಿಂದೊಮ್ಮೆ ನಿಂತುಬಿಡುವದರಿಂದ, ಮೊಸರು, ಬಾಳೇಹಣ್ಣು ಮೊದಲಾದ ವಸ್ತುಗಳನ್ನು ರಾತ್ರಿ ತಿನ್ನುವದರಿಂದ ದಮ್ಮಿನ ಜೋರು ಸುರುವಾಗುತ್ತಿದೆ. ಕೆಲವರಿಗೆ ಹಾಲು, ಅನ್ನ, ಮಾಂಸ, ವಿಶಿಷ್ಟ ಕಾಯಿಪಲ್ಲೆ ತಿಂದರೂ ವಿಕಾರ ಹೆಚ್ಚುತ್ತಿದೆ. ಪ್ರತ್ಯೇಕ ರೋಗಿಯಲ್ಲೂ ಏನಾದರೊಂದು ವಿಶೇಷ ಕಾರಣ ಕಂಡುಬರುತ್ತಿರುತ್ತದೆ. ಆ ಕಾರಣವನ್ನು ತಪ್ಪಿಸಿಕೊಂಡರೆ ರೋಗಿಯು ಸುಖವಾಗಿರುತ್ತಾನೆ. ವಿಶಿಷ್ಟ ಹೂಗಳ ವಾಸನೆಯಿಂದಲೂ ಕೆಲವರಿಗೆ ದಮ್ಮು ಬರುತ್ತಿದೆ. ಕೆಲವು ಪ್ರಾಣಿಗಳು ಅಂದರೆ ಬೆಕ್ಕು, ಕುದುರೆಗಳ ವಾಸನೆ ದರ್ಶನಗಳಿಂದಲೂ ದಮ್ಮು ಬರುತ್ತಿದೆ. ಇಂಥವರಲ್ಲಿ ದುರ್ಬಲ ಮನಸ್ಸೇ ವಿಶೇಷ ಕಾರಣವಾಗಿರುವದು. ಸಾರಾಂಶ ಅನ್ನದ್ರವ್ಯ ಅಥವಾ ಗಂಧ ದ್ರವ್ಯಗಳಿಂದ ರಕ್ತದ ಮೇಲೆ ವಿಷ ಪರಿಣಾಮವಾಗುತ್ತದೆ. ಆದರಿಂದಾಗಿ ಶ್ವಾಸ ವಾಹಿನಿಗಳು ಸಂಕೋಚವಾಗುವದರಿಂದ ಶ್ವಾಸಾವರೋಧ ಉಸಿರುಕಟ್ಟಲಿಕ್ಕೆ ಶುರುವಾಗಿ ದಮ್ಮು ಆರಂಭವಾಗುತ್ತದೆ.

**ಲಕ್ಷಣಗಳು ಮತ್ತು ಭಾವನೆ**:— ದಮ್ಮಿನವರನ್ನು ತಕ್ಷಣ ಗುರುತಿಸಬಹುದು. ಬಡಿಕಲಾದ ದೇಹ, ಒಳ ಸೇರಿದ ಕಂಣು, ಮುಂದೆ ಹಾದ ಎದೆ, ಕುಗ್ಗಿದ ಹೆಗಲು, ಸ್ವಲ್ಪ ಡೂಗು, ಇದು ದಮ್ಮಿನವರ ರೇಖಾ ಚಿತ್ರ. ದಮ್ಮಿನ ಜೋರು ಬಹುಶಃ ಬೆಳಗಿನ ೨ರಿಂದ ೪ರ ಸುಮಾರಿಗೆ ಶುರುವಾಗುತ್ತದೆ. ಉಸಿರು ಕಟ್ಟುತ್ತಿದೆ. ಎದ್ದು ಕೂಡುತ್ತಾನೆ. ಎದೆಯಲ್ಲಿ "ಸೊಯಿ ಸೊಯಿ" ಎಂಬ ದೊಡ್ಡ ನಾದ ಹೊರ ಬರುತ್ತದೆ ಉಸಿರು ತಕ್ಕೊಳ್ಳುವಾಗ ಹಗುರಾಗಿರುತ್ತದೆ. ಹೊರಗೆ ಬಿಡುವಾಗ ಉಚ್ಛ್ವಸನವು ಪ್ರದೀರ್ಘ ಮತ್ತು ಕಷ್ಟಪ್ರದವಾಗಿರುತ್ತದೆ. ಕೆಮ್ಮು ಇದ್ದು ಕಫ ಬಹಳ ಕಷ್ಟದಿಂದ ಬೀಳುತ್ತದೆ. ಅದು ಬಲು ಜಿಗುಟಾಗಿರುತ್ತಿದೆ. ದಮ್ಮಿನ ತ್ರಾಸ ಬಹಳವಾದರೆ ಎಲುವುಗಳು ಕಾದು ಜ್ವರ ಬರುತ್ತವೆ.

**ಸಾಧ್ಯಾಸಾಧ್ಯತ್ವಃ—** ಇದು ಕಷ್ಟಸಾಧ್ಯವಾದ ರೋಗ. ಆದರೂ ಬರಿಯ ದಮ್ಮಿನ ವಿಕಾರದಿಂದಲೇ ಸಾಯುವದು ಕಮ್ಮಿ. ಅಲ್ಲದೇ ಇವರು ಸದಾಕಾಲ ಪಥ್ಯ ಮಾಡುತ್ತಲೇ ಇರುತ್ತಾರಾದ ಕಾರಣ ಕೆಲವು ದಮ್ಮಿನವರು ದೀರ್ಘಾಯುಷಿಗಳಾಗಿರುವದನ್ನು ಕಾಣುತ್ತೇವೆ.

**ಪ್ರಕಾರಗಳುಃ—** (೧) ಇದು ಎರಡು ವಿಧ. (೧) ಶ್ವಸನಾತ್ಮಕ (ರೆಸ್ಪಿರೇಟರಿ) (೨) ಹೃದಯದೌರ್ಬಲ್ಯಜನ್ಯ (ಕಾರ್ಡಿಯೆಕ್) ಈ ಎರಡನೇ ಪ್ರಕಾರದ ವಿಕಾರದ ಚಿಕಿತ್ಸೆ ಹೃದ್ರೋಗ ಪ್ರಕರಣದಲ್ಲಿ ಹೇಳೋಣವಾಗಿದೆ.

**ಭೇದಕ ನಿದಾನ:—** ಹೃದ್ರೋಗದಿಂದಾಗುವ ದಮ್ಮು, ಶ್ವಸನಾತ್ಮಕವಾದ ದಮ್ಮಿನಿಂದ ಭಿನ್ನವಾಗಿದೆ. ಮೊದಲ ಪ್ರಕಾರದಲ್ಲಿ ಅಲ್ಪ ಶ್ರಮದಿಂದಲೂ ತೇಕುಹತ್ತುವದು, ಮಲಗಿದ್ದರೆ ಆರಾಮವಾಗಿರುತ್ತದೆ. ಇದು ಹೆಚ್ಚಾಗಿ ಹಗಲಿನಲ್ಲಿ ಕಂಡುಬರುವದು. ಎರಡನೇ ಪ್ರಕಾರದಲ್ಲಿ ಶ್ರಮದ ಸಂಬಂಧವಿಲ್ಲ. ದಮ್ಮು ಸುರುವಾದ ಮೇಲೆ ಮಲಗಿರುವದು ಶಕ್ಯವೇಯಿಲ್ಲ. ಇದಕ್ಕೆ ಭರತಿ ಬರುವದು ಬೆಳಗಿನ ಜಾವದಲ್ಲಿ.

**ದೋಷದುಷ್ಟಿ:—** ದಮ್ಮಿನಲ್ಲಿ ವಿಶೇಷವಾಗಿ ವಾತ, ಕಫಗಳು ಪ್ರಕುಪಿತವಾಗಿರುತ್ತವೆ.

**ಚಿಕಿತ್ಸೆ:—** (೧) ಕರೀ ಮದಗುಣಕಿಯ ಬೀಜದ ಪುಡಿ ೨ ಗುಂಜಿ + ಜೇಷ್ಠಮಧು ೪ ಗುಂಜಿ, ೪ ಚೀಟು ಜೇನಿನಲ್ಲಿ. ಅಲ್ಲದೆ ಕರೇ ಮದಗುಣಕೀ ಎಲೆಗಳ ಪುಡಿಯನ್ನು ಮದಗುಣಕೀ ಎಲೆಯಲ್ಲಿ ಹಾಕಿ ಬತ್ತೀ ಮಾಡಿ ಸೇದಬೇಕು.

(೨) ಶ್ವಾಸಕುಠಾರ ೨ ಗುಂಜಿ + ಸಿತೋಪಲಾದಿ ೪ ಗುಂಜಿ, ೪ ಚೀಟು ಜೇನಿನಲ್ಲಿ. ಕಫವಾತಾತ್ಮಕ ವಿಕಾರದಲ್ಲಿ ಸಮೀರಪನ್ನಗ ೫ ಸುತ್ತು + ದ್ರಾಕ್ಷಾಸವ ೧ ಔಂಸು, ಅಷ್ಟೇ ನೀರು, ೪ ಸಲ. ಕಫ ಹೆಚ್ಚಾಗಿ ರೋಣಕ್ಕೆ:- ಪಂಚಸೂತ ೧/೨ ಗುಂಜಿ + ಮೃಗಶೃಂಗ ೪ ಗುಂಜಿ, ೪ ಚೀಟು ಜೇನಿನಲ್ಲಿ.

**ಕೀವು ಕೂಡಿದ ಕಫಕ್ಕೆಃ—** ಮಲ್ಲಸಿಂದೂರ ೧/೨ ಗುಂಜಿ + ಮೃಗಶೃಂಗ ೪ ಗುಂಜಿ, ೪ ಚೀಟು. ಅಡಸಾಲದೆಲೆಯ ರಸ ಮತ್ತು ಜೇನು.

**ಪೇಟೆಂಟ್:—** ಪುರೋಹಿತಶ್ವಾಸಹಾರಿ.

**ಅ್ಯಲೋಪಥಿ:—**ವೇಗ ಹೆಚ್ಚಿದಾಗ ಎಫೆಡ್ರಿನ್ ಪಿಲ್ಸ ಕೊಡುತ್ತಾರೆ. ಈ ಗುಳಿಗೆಗಳು ಹೃದಯವನ್ನು ಅಶಕ್ತ ಮಾಡುವದರಿಂದ ದಿನಕ್ಕೆ ೨ ಗುಳಿಗೆಗಳಕ್ಕಿಂತ ಹೆಚ್ಚು ಕೊಡಬಾರದು. ಹಾಗೆಯೇ ಆ್ಯಡ್ರಿನ್ಯಾಲಿನ್ ಅರ್ಧ ಸಿ. ಸಿ. ಅಥವಾ ಆ್ಯಡ್ರಿನ್ಯಾಲಿನ್ ಆ್ಯಂಡ್ ಎಫೆಡ್ರಿನ್ ೧ ಸಿ. ಸಿ. ಒಳಚರ್ಮದಲ್ಲಿ ಚುಚ್ಚುತ್ತಾರೆ ಇದೊಳ್ಳೇ ಪ್ರಭಾವೀ ಚುಚ್ಚುಮದ್ದು. ಕ್ಷಣಾರ್ಧದಲ್ಲಿ ರೋಗಿಗೆ ವಿರಾಮವೆನಿಸುತ್ತದೆ. ಆದರೂ ರೋಗಿ ಮುಂದೆ ಪಥ್ಯದಿಂದಿರಬೇಕು. ಇಲ್ಲವಾದರೆ ರೋಗ ಮರುಕಳಿಸುತ್ತಿದೆ. ಸ್ಟ್ರಾಮೋನಿಯಂ ಸಿಗ್ರೇಟುಗಳನ್ನು ಸೇದಲು ಕೊಡುತ್ತಾರೆ. ಇದರಿಂದೂ ರೋಗಿಗೆ ಹಗುರಾಗುತ್ತಿದೆ.

**ಪ್ರೋಟೀನಥೆರಪಿ:—** ಅರ್ಧ ಸಿ.ಸಿ. ರೋಗಿಯ ರಕ್ತ+ಅರ್ಧ ಸಿ. ಸಿ. ಕುದಿಸಿದ ಆಕಳ ಹಾಲು, ಮಾಂಸಖಂಡದಲ್ಲಿ ಚುಚ್ಚುತ್ತಾರೆ. ಎರಡನೇ ದಿನ ೧ ಸೀಸಿ ರಕ್ತ+೧ ಸಿ. ಸಿ. ಹಾಲು. ಮತ್ತು ೩ನೇ ದಿನ ೩ ಸಿ. ಸಿ. ರಕ್ತ+೩ ಸಿ. ಸಿ. ಹಾಲು. ಈ ಪ್ರಮಾಣದಂತೆ ಚುಚ್ಚುತ್ತಾರೆ, ಮುಂದೆ ೪-೫-೬ ದಿನಗಳಲ್ಲಿ ಏರಿಸುತ್ತ ಬಂದ ಕ್ರಮದಂತೆಯೇ. ಪ್ರಮಾಣ ಇಳಿಸುತ್ತ ಚುಚ್ಚುತ್ತಾರೆ.

**ವಿಧಾನ:—** ನಿರೋಗಿಯಾದ ಹಸುವಿನ ಹಾಲನ್ನು ಒಂದು ಟೆಸ್ಟ ಟ್ಯೂಬಿನಲ್ಲಿ ಕುದಿಸಿ ತಂಣಗಾಗಗೊಡಬೇಕು. ಆಗ ಅದು ಕೆನೆಗಟ್ಟುತ್ತದೆ. ಆ ಮೇಲೆ ಕುದಿಸಿದ ಇಂಜಕ್ಶನ್ ಸಿರಿಂಜ್ ತಕ್ಕೊಂಡು ಕೆನೆಯಲ್ಲಿ ಛಿದ್ರ ಮಾಡಿ ಸೂಜಿ ಹಾಕಿ ಒಳಗಿನ ಹಾಲನ್ನೇ ಬೇಕಷ್ಟು ತಕ್ಕೊಳ್ಳುತ್ತಾರೆ ಇದಕ್ಕೂ ಮೊದಲಿಗೇ ಕೈಯ್ಯ ನರಗಳನ್ನು ಕಟ್ಟಿ ಉಬ್ಬಿದ ನರದಲ್ಲಿಂದ ಪ್ರಮಾಣದಷ್ಟು ರಕ್ತ ತಕ್ಕೊಂಡು ನಂತರ ಚನ್ನಾಗಿ ಎರಡನ್ನು ಅಲುಗಿಸಿ ಕೂಡಿಸಿ ಚುಚ್ಚುತ್ತಾರೆ. ಇದನ್ನು ಮಾಡುವಾಗ ಸೂಜಿ ಮತ್ತು ಸಿರಿಂಜಗಳು ನಿರ್ಜಂತುಕವಾಗಿರಬೇಕು. ಹಾಗೆಯೇ ನರದಲ್ಲಿಯ ರಕ್ತ ತೆಗೆಯುವಾಗ್ಗೆ ಒಳ್ಳೇ ಎಚ್ಚರಿಕೆಯಿಂದ ತಕ್ಕೊಳ್ಳಬೇಕು. ಬಲ್ಲವರಿಂದಲೇ ಇದನ್ನು ಮಾಡಿಸುವದು ಹಿತಕರ.

**ಪಥ್ಯಾಪಥ್ಯ:—** ದಮ್ಮಿನವರು ರಾತ್ರಿ ಉಣಬಾರದು- ಮೊಸರು, ಕರದದ್ದು, ವಾತುಲ ಪದಾರ್ಥ ಬಿಟ್ಟೇಬಿಡಬೇಕು. ಕುದಿಸಿದ ನೀರು ಕುಡಿಯಬೇಕು. ಗೋದಿಯ ಆಹಾರ ಇವರಿಗೆ ಉತ್ತಮ. ಎದೆಗೆ ನೀಲಗಿರಿ ತೈಲ ಹಚ್ಚಿ ಕಾಯಿಸಬೇಕು. ಪಿತ್ತದಿಂದಾದ ದಮ್ಮು ಮತ್ತು ಹೃದಯ ವಿಕಾರವಿದ್ದರೆ ಎದೆ ಕಾಸಬಾರದು. ಬಿಸಿ ಕಾಫಿಯನ್ನು ಮೇಲಿಂದ ಮೇಲೆ ಕೊಟ್ಟರೆ ಕಫ ಸಡಲುತ್ತದೆ. ತಂಡಿಯಲ್ಲಿ ತಿರುಗುವದು ಅಜೀರ್ಣಗಳಾಗಬಾರದು.

-o—

# ರಕ್ತ ಪಿತ್ತ

ಈ ವಿಕಾರದಲ್ಲಿ ಪಿತ್ತ ದೋಷದ ದುಷ್ಟಿ ವಿಶೇಷವಾಗಿದ್ದುದು ಕಂಡು ಬರುತ್ತದೆ. ಅಲ್ಲದೆ ಉಷ್ಣತೆಯಿಂದಾಗಿ "ದೂಷ್ಯ" ರಕ್ತವೂ ದೂಷಿತವಾಗಿರುತ್ತದೆ. ಇದರಿಂದ ಮೂಗು, ಮುಖ, ಗುದ, ಶಿಶ್ನಗಳೇ ಮೊದಲಾದ ದೇಹದ ಭಾಗಗಳಿಂದ ರಕ್ತ ಹೊರಬೀಳುತ್ತದೆ. ಇದನ್ನೇ ರಕ್ತ ಪಿತ್ತವೆನ್ನುತ್ತಾರೆ. ಇದರಲ್ಲಿ ರಕ್ತದ ಗಟ್ಟಿಯಾಗುವ ಸ್ವಭಾವ ಕಡಿಮೆಯಾಗಿ ಅದು ತೆಳ್ಳಗಾಗಿರುತ್ತದೆ.

**ಪ್ರಕಾರಗಳು:—** ಇದರಲ್ಲಿ ಮುಖ್ಯವಾಗಿ ಮೂರು ಪ್ರಕಾರಗಳು— (೧) ಊರ್ಧ್ವಗ (೨) ಅಧೋಗ (೩) ಉಭಯ ವಿಧ. ಮೊದಲನೇ ಪ್ರಕಾರದಲ್ಲಿ ಕಿವಿ, ಮೂಗು, ಮುಖ, ಕಣ್ಣುಗಳ ಮೂಲಕ. ಎರಡನೇ ಪ್ರಕಾರದಲ್ಲಿ ಗುದ, ಶಿಸ್ನ, ಯೋನಿಗಳ ಮಾರ್ಗದಿಂದ ರಕ್ತ ಹೊರ ಬರುತ್ತದೆ. ಮೊದಲನೇದರಲ್ಲಿ ಎಲ್ಲಾ ದ್ವಾರಗಳಿಂದಲೂ ರಕ್ತ ಸುರಿವಷ್ಟರ ಮಟ್ಟಿಗೆ ವಿಕಾರದ ವೇಗ ಹೆಚ್ಚಾಗಿರುತ್ತದೆ. ಹೆಚ್ಚೇನು ರೋಸು ರೋಮಗಳಿಂದಲೂ ರಕ್ತ ಬಸಿಯುತ್ತಿದೆ.

**ದೋಷ ದೂಷ್ಯ ವಿಚಾರ:—** "ಊರ್ಧ್ವಗಂ ಕಫ ಸಂಸೃಷ್ಟಂ ಅಧೋಗಂ ಪವನಾನುಗಂ" ಮೇಲಕ್ಕೇರಿದ ರಕ್ತ ಪಿತ್ತದಲ್ಲಿ ಕಫದ ವಿಕಾರ

ಹೆಚ್ಚಾಗಿರುತ್ತದೆಯಾದರೆ ಕೆಳಗಿಳಿದದ್ದರಲ್ಲಿ ವಾತದ ವೇಗ ವಿಶೇಷವಾಗಿರುತ್ತದೆ. ಉಭಯ ಗಾಮಿಯಲ್ಲಿ ಮೂರೂ ದೋಷಗಳು ಉದ್ರೇಕವಾಗಿರುತ್ತವೆ.

ಚಿಕಿತ್ಸೆಯ ಅನುಕೂಲತೆಗಾಗಿ ಆಯುರ್ವೇದದಲ್ಲಿ ಈ ವಿಕಾರವನ್ನು ಸ್ವತಂತ್ರವೆಂದು ಒಪ್ಪಿದ್ದಾರೆ. ಆದರೂ ಇದು ಉಪದ್ರವ ರೂಪವಾಗಿಯೇ ಇರುತ್ತದೆ. ಉದಾಃ— ಕ್ಷಯ, ಬ್ಲಡ್‌ಪ್ರೆಶರ, ಟಾಯಿಫಾಯಿಡ್, ನ್ಯೂಮೋನಿಯಾ ಮೊದಲಾದವುಗಳಲ್ಲಿ ರಕ್ತ ಪಿತ್ತ ತಲೆದೋರುತ್ತದೆ.

**ಸಾಧ್ಯಾಸಾಧ್ಯತ್ವಃ**—"ಊರ್ಧ್ವಂ ಸಾಧ್ಯ ಮಧೋಯಾಪ್ಯಂಅಸಾಧ್ಯಂ ಯುಗ ಪದ್ಗತಂ" ಊರ್ಧ್ವ ರಕ್ತ ಪಿತ್ತ ಸಾಧ್ಯ, ಅಧೋಗಾಮಿಯಾಪ್ಯ ಅಂದರೆ ಔಷಧಿಪಥ್ಯಗಳಿರುವವರೆಗೆ ಸಾಧ್ಯ. ಉಭಯ ಗಾಮಿ ಅಸಾಧ್ಯ ರೋಗ. ಅಥವಾ ಏಕದೋಷಾತ್ಮಕವು ಸಾಧ್ಯ, ದ್ವಿದೋಷಜವು ಯಾಪ್ಯ, ತ್ರಿದೋಷಗಳದ್ದು ಅಸಾಧ್ಯವೆಂದು ಶಾಸ್ತ್ರ ಹೇಳಿದೆ.

**ಕಫದಲ್ಲಿ ರಕ್ತ ಬೀಳೋಣಃ**— ( ಹಿಮಾಪ್ಟಿಸಿಸ್ ) ಇದು ಭಾರೀ ಭಯಂಕರ ಲಕ್ಷಣವಲ್ಲದೆ ಕ್ಷಯದ ಮುಂಗುರುತು ಅಥವಾ ಮೂರನೇ ಅವಸ್ಥೆಯನ್ನು ಸೂಚಿಸುವದೂ ಆಗಿರಬಲ್ಲದು. ಬಾಯಿಂದ ರಕ್ತ ಬೀಳ ಹತ್ತಿದೊಡನೆ ಕೂಡಲೇ ಯೋಗ್ಯ ರೀತಿಯಾಗಿ ಪರೀಕ್ಷಿಸಬೇಕು. ಕೆಲ ವೇಳೆ ಬರಿ ವಸಡಿಯಿಂದಲೇ ಕ್ವಚಿತ್ತಾಗಿ ಗಂಟಲಿನಿಂದಲೂ ಅಥವಾ ಆಮಾಶಯದಿಂದಲೂ ರಕ್ತ ಬೀಳುತ್ತದೆ. ಪುಪ್ಪುಸದಲ್ಲಿಂದ ಮತ್ತು ಹೊಟ್ಟೆಯಿಂದ ಬರುವ ರಕ್ತದಲ್ಲಿ ಈ ಕೆಳಗಿನ ವ್ಯತ್ಯಾಸ ಕಂಡು ಬರುತ್ತದೆ.

| **ಕಫದಲ್ಲಿ** (ಹಿಮಾಪ್ಟಿಸಿಸ್) | **ಕಾರಿಕೆಯಲ್ಲಿ** (ಹಿಮಾಟಿಮಿ-ಸಿಸ್) |
|---|---|
| ೧. ಪುಪ್ಪುಸದಲ್ಲಿಂದ .... .... .... | ಹೊಟ್ಟೆಯೊಳಗಿಂದ |
| ೨. ಕೆಮ್ಮಿದ ನಂತರ ಬೀಳುವದು .... | ಕಾರಿಕೊಂಡಾಗ ಬೀಳುತ್ತದೆ |
| ೩. ಎದೆಯಲ್ಲಿ ವಿಕಾರವಿರುತ್ತದೆಯಾಗಿ .... ಎದೆ ನೋಯುತ್ತದೆ .... .... .... | ಹೊಟ್ಟೆ ನೋವು, ಪಚನವಿಕಾರ |
| ೪. ಕ್ಷಯದ ಲಕ್ಷಣ ___ ___ ___ | ವ್ರಣ (ಅಲ್ಸರ)ದ ಲಕ್ಷಣ |
| ೫. ಮೊದಲಿಗೆ ಕೆಮ್ಮುಬರುತ್ತದೆ.... .... | ಮಳಮಳಿಕೆ, ಬಾಯಿಗೆ ನೀರು ಬಿಡೋಣ, ತಲೆ ತಿರುಗುವಿಕೆ |

೬. ಕಫ ಕೂಡಿದ್ದು ___ ___ ___ ___ ಅನ್ನ ಕೂಡಿದು
೭. ಲಿಟ್‌ಮಸ್ಸಕಾಗದ ನೀಲೀಯಾಗುತ್ತದೆ___ ___ ಕೆಂಪಾಗುತ್ತದೆ?

ಬೇಸಿಗೆಯಲ್ಲಿ ಬಿಸಿಲು, ಕಾವು ಅಥವಾ ಅತಿಯಾಗಿ ಶರೆ ಕುಡಿಯೋಣ ದರಿಂದ ಕಾಯ್ದ ರಕ್ತ ಮೂಗಿನಿಂದ ಹೊರಬೀಳುತ್ತದೆ. ಆಂತ್ರಿಕ, ಮಲೇರಿಯಾ ಜ್ವರಗಳಲ್ಲಿಯೂ ಮೂಗಿನಿಂದ ರಕ್ತ ಬರುತ್ತದೆ. ಹೆಣ್ಣು ಮಕ್ಕಳಿಗೆ ಒಮ್ಮೆಲೇ ಮುಟ್ಟು ತಡೆದರೆ ಮೂಗು, ಕಣ್ಣು, ಕಿವಿಗಳಿಂದ ಭಾರೀ ರಕ್ತ ಬಸಿಯುತ್ತದೆ. ಕಣ್ಣುಗಳಿಂದ ಒಂದೊಂದು ಸೇರು ರಕ್ತ ಹೋದದ್ದನ್ನು ಲೇಖಕ ಕಂಡಿದ್ದೇನೆ.

ಅಧೋಗ ರಕ್ತ ಪಿತ್ತದಲ್ಲಿ ಮೂತ್ರದ ಮುಖಾಂತರವಲ್ಲದೆ ಶಿಶ್ನ ಯೋನಿಗಳೊಳಗಿಂದೂ ರಕ್ತ ಬರುತ್ತದೆ. ಇದಕ್ಕೆ ಕಾವೇ ಮುಖ್ಯ ಕಾರಣ. ಹಾಗೆಯೇ ಊಟದಲ್ಲಿ ಹೆಚ್ಚಾಗಿ ಹಸೇ ಮೆಣಸಿನಕಾಯಿ, ಮೆಣಸುಗಳಂಥ ತೀಕ್ಷ್ಣ ಪದಾರ್ಥ ತಿನ್ನುವದರಿಂದ ಗುದ ದ್ವಾರವಾಗಿ ರಕ್ತ ಹೋಗುತ್ತದೆ. ಅಶುದ್ಧ ರಸಾಯನ, ಪಾರದಕಲ್ಪ, ವಿಷಗಳಿಂದಲೂ ಸರ್ವಾಂಗದಲ್ಲಿ ರಕ್ತ ಬಸಿಯುತ್ತದೆ. ಗರದೋಷ, ಸೋಮಲ, ರಸಕರ್ಪುರ, ಬುಕರಿಯಂಥ ಕೆಟ್ಟಜಾತೀ ಹಾವು ಕಡಿದರೆ ಸರ್ವಾಂಗದಲ್ಲಿಯಂತೂ ಇರಲಿ ಅಂಗಾಲಿನಿಂದೂ ರಕ್ತ ಸೋರುತ್ತದೆ.

**ಚಿಕಿತ್ಸೆ**:—"ಪ್ರತಿ ಮಾರ್ಗಂಚ ಹರಣಂ ರಕ್ತಪಿತ್ತೇ ವಿಧೀಯತೆ" ದೋಷಗಳ ಪ್ರವೃತ್ತಿಯನ್ನು ವಿರುದ್ಧ ಮಾರ್ಗ(ಊರ್ಧ್ವವಾದದ್ದನ್ನು ಅಧಕ್ಕೆ ಅಧವಾದದ್ದನ್ನು ಊರ್ಧ್ವ)ಕ್ಕೆ ಹಚ್ಚಬೇಕೆಂದು ಚಿಕಿತ್ಸಾ ಸೂತ್ರವಿದೆ. ಉದಾ:—ಅಧೋಗ ರಕ್ತಪಿತ್ತದಲ್ಲಿ ವಾಂತಿ ಮಾಡಿಸಬೇಕು. ಊರ್ಧ್ವದಲ್ಲಿ ಜಾಡಿಸಲು ಔಷಧಿ ಕೊಡಬೇಕು. ಉಷ್ಣ ಆಹಾರವಿಹಾರಗಳನ್ನು ನಿಲ್ಲಿಸಿಬಿಡಬೇಕು. ರಕ್ತಪಿತ್ತವಿದ್ದವರ ಗಟ್ಟಿಯಾಗಿದ್ದ ಹಲ್ಲುಗಳನ್ನು ಕೀಳಬಾರದು. ಹಲ್ಲು ಕೀಳುವದರಿಂದಲೇ ಮೃತ್ಯು ಬಂದ ಉದಾಹರಣೆಗಳು ಅನೇಕವಾಗಿವೆ.

**ಔಷಧಿಗಳು**:—(೧) "ವೃಷಃ ಅಸ್ರಪಿತ್ತೇ" ರಕ್ತಪಿತ್ತದ ಮೇಲಿನ ಮುಖ್ಯ ಔಷಧಿ ಅಡಸಾಲ. ಇದು ಊರ್ಧ್ವಗ ರಕ್ತಪಿತ್ತದಲ್ಲಿ ಒಳ್ಳೇ ಉಪಯುಕ್ತವಾಗಿದೆ.

(೨) ರಕ್ತಪಿತ್ತಗಳೆರಡೂ ಹೆಚ್ಚಾಗಿ ಬೆಳೆದಿದ್ದು ಶಿರೆ ಕುಡಿಯುತ್ತಿರುವವನ ರಕ್ತಪಿತ್ತ ರೋಗವನ್ನು ಉಪೇಕ್ಷಿಸಿ ಬಿಡಬೇಕು. ಕೆಟ್ಟ ರಕ್ತ ಹೋದಷ್ಟೂ ಉತ್ತಮವೇ.

(೩) ಜಾಜಿ, ದುಂಡುಮಲ್ಲಿಗೆ ಹೂವು + ಗೌಲ ಕಜ್ಜೂರ ನೀರಲ್ಲಿ ಅರೆದು ಕುಡಿಸಬೇಕು.

(೪) **ಗಂಟುಕಟ್ಟಿ ಬೀಳುವ ರಕ್ತಕ್ಕೆ:—** ಪಾರಿವಾಳಗಳ ಹಿಕ್ಕೆಯನ್ನು ಜೇನಿನಲ್ಲಿ.

(೫) ಗಂಧ, ಬಾಳದ ಬೇರು, ಧಮಾಸಾ, ಕರೀ ಬೀಜದ್ರಾಕ್ಷಿಗಳನ್ನು ಒಂದೊಂದು ಮಾಸಿ ನೀರಲ್ಲಿ ನೆನೆ ಹಾಕಿ ಮರುದಿನ ಕಿವಿಚಿ ಸೋಸಿ ಕುಡಿಯುವದಕ್ಕೆ " ಹಿಮ " ವೆಂದು ಹೆಸರು.

(೬) ಕಬ್ಬಿಣ ಸಂಣ ತುಣುಕು + ನೀಲ ಕಮಲ ೫ ನೀರಲ್ಲಿ ಒಂದು ರಾತ್ರಿ ನೆನಿಸಿ ಕಿವಿಚಿ ಸೋಸಿ ಕುಡಿಯುವದು.

(೭) **ಮೂತ್ರ ಮಾರ್ಗದ ರಕ್ತ ಪಿತ್ತಕ್ಕೆ:**–ನೆಗ್ಗಲೀ ಮುಳ್ಳು + ಶತಾವರಿ + ಪುನರ್ನವಾಗಳನ್ನು ಒಂದೊಂದು ಮಾಸಿ ಹಾಲಲ್ಲಿ ಕುದಿಸಿ ಕೊಡಬೇಕು.

(೮) **ಗುದಮಾರ್ಗದರಕ್ತಪಿತ್ತಕ್ಕೆ:—**ಕುಟಜಾರಿಷ್ಟ ಅಥವಾ ಆಲದ ಗಡ್ಡಗಳು + ನೀಲಕಮಲ + ಬಾಳದ ಬೇರುಗಳ ೩ ಕಷಾಯ ಮಾಡಿ ಕೊಡಬೇಕು.

(೯) **ಮೂಗಿನಿಂದ ರಕ್ತ ಬರುವಾಗ:—** ಕರ್ಕೀ ರಸ ಅಥವಾ ದಾಳಿಂಬರ ಹೂಗಳ ರಸವನ್ನು ಮೂಗಿನಲ್ಲಿ ಹಿಂಡಬೇಕು. ಮತ್ತು ಹಣೆಯ ಮೇಲೆ ತಂಣೀರ ಪಟ್ಟಿ ಅಥವಾ ಬರ್ಫಿನ ಚೀಲ ಇಡಬೇಕು. ಬಿಳೀ ನೀರುಳ್ಳಿ ಬೀಜ ಜಜ್ಜಿ ಮೂಸಲು ಕೊಡಬೇಕು.

(೧೦) **ಟಾಯಫಾಯಿಡ್‌ದಲ್ಲಿಯ ರಕ್ತಪಿತ್ತ:—** ಚಂದ್ರಕಲಾ ೨ ಗುಂಜಿ ೩ಸಲ ಉಶೀರ ಅಥವಾ ಅರವಿಂದಾಸವಗಳಲ್ಲಿ ಅಥವಾ ಕಾಡಿಗ್ಗರಗು, ಸಾರಿವಾ, ಮಂಜಿಷ್ಠಾ ಅಥವಾ ಅರ್ಜುನಕಲ್ಪಗಳಲ್ಲಿ.

(೧೧) **ಊರ್ಧ್ವಗ ರಕ್ತಪಿತ್ತಃ**—(೧) ಸುವರ್ಣಮಾಕ್ಷಿಕ ೨ ಗುಂಜಿ + ಅರಿಷಣ ಪುಡಿ ೪ ಗುಂಜಿ ಹಾಲಲ್ಲಿ.

(೨) ಪ್ರವಾಳ + ನೆಲ್ಲೀ ಚಟ್ಟು + ಅಮೃತಸತ್ವಗಳನ್ನೂ ಹಾಲಿನಲ್ಲಿ.

(೧೨) **ಗುದಮಾರ್ಗದ ರಕ್ತಪಿತ್ತಃ**— ಉಸೀರ (ಕರೇಬಾಳದ ಬೇರು) + ಗಂಧ + ಧಮಾಸಾ + ಕಲ್ಲು ಸಬ್ಬಸಗಿ ಇದರ " ಹಿಮ " ಮಾಡಿ ಕೊಡಬೇಕು.

**ವಿಷಗಳ ನಿಮಿತ್ತದ ರಕ್ತಪಿತ್ತ:**— (೧) ಪಾರಜ ವಿಷಮೂಲಕವಾದ್ದು. ಕರ್ಪೂರ. (೨) ಸೋಮಲ:- ಕಿರಕಸಾಲಿ, ಅಥವಾ ಅತ್ತೀ ಬೇರಿನ ನೀರು.

**ಮೂತ್ರ ಮಾರ್ಗದ ರಕ್ತಪಿತ್ತಃ**— ಬಾಳೀದಿಂಡು + ಕಮಲದ ಗಡ್ಡೀರಸ.

**ಹಾಯ್‌ಬ್ಲಡ್ ಪ್ರೆಶರದಲ್ಲಿಯ ರಕ್ತ ಪಿತ್ತಃ**— ಇದರಲ್ಲಿ ಅಶಕ್ತತೆ ಬರದಂತೆ ರಕ್ತ ಹೋಗಗೊಡಬೇಕು.

**ಬುಕರೀ ವಿಷಕ್ಕೆಃ**—(೧) ಮಣ್ಣಿನ ಹರಿವೆಯಲ್ಲಿ ಬಿಳೀ ಬಾಳದ ಬೇರು + ಗಂಧಗಳನ್ನು ಹಾಕಿ " ಹಿಮ " ಸಿದ್ಧಮಾಡಿ ಆ ನೀರಿನ ಸ್ನಾನ ಹಾಕಬೇಕು.

(೨) ಅತ್ತೀ ಬೇರಿನ ನೀರು ಕುಡಿಸಬೇಕು.

(೩) ಅನಂತ ಮತ್ತು ವಾಕೇರಿ ಭಾತಗಳ ಚೂರ್ಣ ದ್ರಾಕ್ಷಿಯ ಕಷಾಯದಲ್ಲಿ ಕೊಡಿರಿ.

# ಪ್ರಮೇಹ

ಪ್ರಮೇಹ ಮತ್ತು ಪರಮಾಗಳಿಗೆ ನಿಜವಾಗಿ ಯಾವದೇ ಸಂಬಂಧವಿಲ್ಲ. ಆದರೆ ವ್ಯವಹಾರದಲ್ಲಿ ಈ ಬಗೆಗೆ ಬಹಳಷ್ಟು ತಪ್ಪು ತಿಳುವಳಿಕೆಯಾಗಿರುವದು ಕಂಡುಬರುತ್ತದೆ. ಪರಮಾ ಇದು ದುಷ್ಟ ಸ್ತ್ರೀ ಸಂಸರ್ಗದಿಂದ ಬರುತ್ತಿದೆ.

ಆದರೆ ಪ್ರಮೇಹದಲ್ಲಿ "ಪ್ರಕೃಷ್ಟೇಣಮೇಹನಂ" ಹೆಚ್ಚು ಪ್ರಮಾಣದಲ್ಲಿ ಮೂತ್ರ ಹೋಗುವದಿಷ್ಟೇ ಲಕ್ಷಣವಿರುತ್ತದೆ. ಆಯುರ್ವೇದವು ಪ್ರಮೇಹದಲ್ಲಿ ಸಾಂದ್ರ, ಮಂಜಿಷ್ಠ, ಇಕ್ಷು ಮುಂತಾದ ೨೦ ಪ್ರಕಾರಗಳನ್ನು ಹೇಳಿದೆ. ಇಲ್ಲಿ ಮೂತ್ರದ ರೂಪ, ಬಣ್ಣಗಳಮೇಲಿಂದ ಹೆಸರು ಕೊಡಲಾಗುತ್ತದೆ. ಇವೆಲ್ಲ ತರಹಗಳಲ್ಲಿ ಯಕೃತ್ತು ಮತ್ತು ಮೂತ್ರ ಪಿಂಡಗಳು ಕೆಟ್ಟಿರುತ್ತವೆ. ಚಿಕಿತ್ಸೆ ಮಾಡದಿದ್ದರೆ ಕಾಲಾಂತರದಿಂದ ಎಲ್ಲ ಮೇಹಗಳೂ ಮಧುಮೇಹ ದಲ್ಲಿ ರೂಪಾಂತರವಾಗುತ್ತವೆ. "ಸರ್ವೇ ಪ್ರಮೇಹಾಃ ಮಧುಮೇಹತ್ವಂ ಆಯಾಂತಿ" ಎಂಬಪರ ಮೇಲಿಂದ ಮಧುಮೇಹವೇ ಒಂದು, ಮತ್ತಿತರ ಮೇಹಗಳ ಗುಂಪೇ ಒಂದು; ಹೀಗೆ ಸ್ಥೂಲಮಾನದಿಂದ ಮೇಹ ಎರಡೇ ಬಗೆ ಯಾಗಿದೆ. ಆ್ಯಲೋಪಥಿಯಲ್ಲಿಯೂ 'ಡಾಯಬಿಟಿಸ್ ಇನ್‌ಸಿಪಿಡೆಸ್ ಎಂಡ್ ಡಾಯಬಿಟಿಸ್ ಮೆಲಿಟಿಸ್' ಹೀಗೆಂದು ಎರಡು ಪ್ರಕಾರ ಮಾಡಲ್ಪ ಟ್ಟಿದೆ. ಮೊದಲನೇದರಲ್ಲಿ ಆಯುರ್ವೇದದ ಮಧುಮೇಹವನ್ನುಳಿದು ಇತರ ಮೇಹಗಳು ಬರುತ್ತಿವೆ. ಮತ್ತು ಎರಡನೇ ಪ್ರಕಾರವೆಂಬುದೇ ಮಧುಮೇಹ ವಾಗಿದೆ.

**ಪ್ರಮೇಹ:—** ಇದರಲ್ಲಿ ಮೂತ್ರ ಹೆಚ್ಚು ಪ್ರಮಾಣದಿಂದ ಹೋಗು ತ್ತದಲ್ಲದೆ ಬಾರಿಗಳೂ ಬೆಳೆಯುತ್ತವೆ. ನಿರೋಗಿಯಾದವನು ದಿನದಲ್ಲಿ ೬-೮ ರ ವರೆಗೆ ಕೂಡುತ್ತಾನೆ. ಆದರೆ ಪ್ರಮೇಹದವರು ಅರ್ಧ ಅರ್ಧ ತಾಸಿಗೊಮ್ಮೆ ಯಂತೆಯೂ ಹೋಗುತ್ತಾರೆ. ಅಲ್ಲದೆ ಮೂತ್ರ ಪ್ರಮಾಣವೂ ಹೆಚ್ಚಿಗೆಯಾ ಗುತ್ತದೆ. ನಿರೋಗಿ ಮನುಷ್ಯ ೨೪ ಗಂಟೆಗಳಲ್ಲಿ ೫೦ ರಿಂದ ೧೦೦ ಔಂಸುಗಳ ವರೆಗೆ ಮೂತ್ರ ಹೊಯ್ದರೆ ಪ್ರಮೇಹದವರಿಗೆ ೨೦೦ ರಿಂದ ೨೫೦ ಔಂಸುಗಳ ಪ್ರಮಾಣ ಮೂತ್ರವಾಗುತ್ತದೆ. ( ಬೇಸಿಗೆಯಲ್ಲಿ ಎಲ್ಲರಿಗೂ ಸ್ವಾಭಾವಿ ಕವಾಗಿ ಮೂತ್ರದ ಪ್ರಮಾಣ ಮತ್ತು ಬಾರಿಗಳೂ ಕಮ್ಮಿಯಾಗಿ ಮಳೆಗಾಲ ದಲ್ಲಿ ಹೆಚ್ಚಾಗುತ್ತಿವೆ) ಅಲ್ಲದೆ ಬಾಯಾರಿಕೆ, ಅಶಕ್ತಿಗಳೂ ಪ್ರಮೇಹದವರಲ್ಲಿ ಬಂದುಬಿಡುತ್ತವೆ.

**ದೋಷವಿಶೇಷ:—** ಕಫದಿಂದ ೧೦ ಪ್ರಕಾರದ ಮೇಹ ಉಂಟಾಗು ತ್ತದೆ. ಇದರಲ್ಲಿ ರಸ(ಲಿಂಫ) ದುಷ್ಟವಾಗಿರುತ್ತದೆ. ಪಿತ್ತದ ಮೇಹಗಳು ಆರು. ಇದರಲ್ಲಿ ಮೂತ್ರಕ್ಕೆ ಬೇರೆ ಬೇರೆ ಬಣ್ಣ ಬರುತ್ತದೆ. ಬಣ್ಣವನ್ನನುಸರಿಸಿ,

ನೀಲ, ಮಂಜಿಷ್ಠಾ ಮುಂತಾದ ಹೆಸರು ಬಂದಿವೆ. ವಾತದ ಮೇಹಗಳು ನಾಲ್ಕು ವಿಧ. ಈ ವಿಶೇಷ ದೋಷಗಳನ್ನು ನೋಡಿಕೊಂಡು ತಕ್ಕ ಉಪಚಾರ ಕೈಕೊಳ್ಳಬೇಕು. ಸಾಮಾನ್ಯವಾಗಿ ಚಂದ್ರಪ್ರಭಾ, ವಂಗ, ತ್ರಿವಂಗ, ಶಿಲಾಜಿತ್ತು, ಗೋಕ್ಷುರಾದಿ ಗುಗ್ಗಳ ಮೊದಲಾದ ಔಷಧಿಗಳನ್ನು ಅವಸ್ಥಾ ಭೇದದಿಂದ ಕೊಡಬೇಕು. ಇನ್ನು ಮಧುಮೇಹದ ವಿಷಯವಾಗಿ ನಾವು ಸಂಪೂರ್ಣ ವಿಚಾರ ಮಾಡೋಣ. ಪ್ರಮೇಹ ಮತ್ತು ಮಧುಮೇಹಗಳ ಕಾರಣ ಪರಂಪರೆಯು ಸಾಮಾನ್ಯವಾಗಿ ಒಂದೇ ಆಗಿದೆ.

—o—

# ಮಧು ಮೇಹ

## Diabetes Mellitus ಡಾಯಬಿಟಸ್ ಮೆಲಿಟಸ್

**ಸಾಮಾನ್ಯ ವರ್ಣನೆ:—** ಇದೊಂದು ಶ್ರೀಮಂತೀ ಬ್ಯಾನಿ. ಸುಖ ವಸ್ತು, ಆಲಸಿ ಮತ್ತು ಬುದ್ಧಿ ಜೀವಿಗಳಲ್ಲಿ ಇದರ ಪ್ರಮಾಣ ಹೆಚ್ಚು. ಇದಕ್ಕೆ ಮೂತ್ರದಲ್ಲಿ ಸಕ್ಕರೆ ಹೋಗುತ್ತದೆ. ಯಕೃತ್, ಮೂತ್ರಪಿಂಡ ಮತ್ತು ಸ್ವಾದುಪಿಂಡ (ಪ್ಯಾಂಕ್ರಿಯಾಜ್) ಗಳಲ್ಲಿ ದೋಷ ಉಂಟಾಗುವದರಿಂದ ಮಧುಮೇಹವಾಗುವದೆಂದು ನಂಬಲಾಗಿದೆ. ಸುಧಾರಿಸಿದ ಜನರಲ್ಲಿ ಇದು ಹೆಚ್ಚಿಗೆ. ಆನುವಂಶಿಕತ್ವವೂ ಇದಕ್ಕಿದೆ. ತಾಯ್ತಂದೆಗಳಿಗೆ ಈ ವಿಕಾರ ಇತ್ತೆಂದರೆ ಮಕ್ಕಳಿಗೆ ಬರುವದಂತೂ ಸರಿ ಅಲ್ಲದೆ ಚಿಕ್ಕ ವಯಸ್ಸಿನಲ್ಲಿಯೇ ಬಂದುಬಿಡುತ್ತದೆ, ಹೆಚ್ಚಾಗಿ ನಾಲ್ವತ್ತು ವರುಷಗಳ ಮೇಲಿನ ವಯಸ್ಸಿನವರಿಗೇ ಈ ಬೇನೆ ಬರುವದುಂಟು.

**ಕಾರಣ ಪರಂಪರೆ:—** ॥ ಆಸ್ಯಾಸುಖಂ ಸ್ವಪ್ನಸುಖಂ ದಧೀನಿ | ಗ್ರಾಮ್ಯೋದಕಾನೂಪರಸಾಃ ಪಯಾಂಸಿ ॥ ನವಾನ್ನಪಾನಂ ಗುಡವೈಕೃತಂಚ ಪ್ರಮೇಹ ಹೇತುಃ ಕಫಕೃಚ್ಚ ಸರ್ವಂ ॥೧॥

ಆಯುರ್ವೇದದಲ್ಲಿ ಮಾಧವಕಾರರು ಪ್ರಮೇಹ–ಮಧುಮೇಹಗಳ ಕಾರಣಗಳನ್ನು ಬಹು ಸುಂದರವಾಗಿ ಹೇಳಿದ್ದಾರೆ.

(೧) ಆಸ್ಯಾಸುಖಂ=ಕುಳಿತುಕೊಳ್ಳುವದರಲ್ಲಿಯೇ ಸುಖವೆಂದು ತಿಳಿದಿರೋಣ. (ಸಿಡೆಂಟರಿ ಹ್ಯಾಬಿಟ್ಸ್). ವ್ಯಾಯಾಮ ಅಥವಾ ಶ್ರಮ ಮಾಡದಿರೋಣದರಿಂದ ಪಚನಶಕ್ತಿ ಕೆಡುತ್ತದೆ. ತಿಂದದ್ದು ಅರಗುವದಿಲ್ಲ. ಇಂಥದರಲ್ಲಿಯೂ ಮೇಲೆ ಜಡವಾದ ಆಹಾರವನ್ನು ಹಾಕುತ್ತಲೇ ಇದ್ದರೆ ಕಾಲಾಂತರದಲ್ಲಿ ಮಧುಮೇಹ ಅಂಟಿಕೊಳ್ಳುತ್ತದೆ. ದಿನವಹೀ ಬೆವರು ಸುರಿಸುವವರಿಗೆ ಎಂದೂ ಮಧುಮೇಹವಾಗುವದಿಲ್ಲ. ಕಾರಕೂನರು, ಮಾಸ್ತರರು, ಭಟ್ಟರು, ಶೆಟ್ಟರು, ವಕೀಲರು, ಪ್ರೋಫೇಸರರು ಮೊದಲಾದವರಲ್ಲಿ ಇದರ ಪ್ರಮಾಣ ಬಹಳವಾಗಿದೆ.

(೨) **ಸ್ವಪ್ನಸುಖಂ:**— ಯಾವಾಗಲೂ ನಿದ್ದೆಯಲ್ಲಿಯೇ ಸುಖಕಾಣುತ್ತಿರೋಣ. ಆಲಸಿಗಳು, ನಿದ್ದಿಬಡಕರು, ಆಯತೋಬಾಗಳಲ್ಲಿಯೂ ಮಧುಮೇಹದ ಪ್ರಮಾಣ ಹೆಚ್ಚು.

(೩) ಮೊಸರು, ನೆಲ ಮತ್ತು ನೀರಿನಲ್ಲಿಯ ಪ್ರಾಣಿಗಳ ಮಾಂಸರಸ, ಹಾಲು, ಹೊಸಕಾಳು, ನೀರು, ಬೆಲ್ಲ, ಕಾಕಂಬಿಗಳು ಮತ್ತು ಇವುಗಳಿಂದ ಮಾಡಿದ ಅಡಿಗೆ ಹಾಗೂ ಕಫವನ್ನು ಬೆಳೆಯಿಸುವ ಎಲ್ಲಾ ವಸ್ತುಗಳೂ ಮಧುಮೇಹವನ್ನು ಬಲಗೊಳಿಸುತ್ತವೆ. ಮೇಲಿನ ಎಲ್ಲ ಕಾರಣಗಳಿಂದ ದೇಹದಲ್ಲಿ ಕಫ ಕೆಟ್ಟು ಕ್ಲೇದ ಬೆಳೆದು ದಿನೇ ದಿನೇ ರಕ್ತದಲ್ಲಿ ಸಿಹಿ ಬೆಳೆದು ಬರುತ್ತ ಕೊನೆಯಲ್ಲಿ ಮಧುಮೇಹವಾಗುತ್ತದೆ. ಹೊಸ ಅನ್ನ ಧಾನ್ಯ ಮತ್ತು ನೀರುಗಳು ಪಚನಕ್ಕೆ ಜಡವಲ್ಲದೆ ಕಫವರ್ಧಕಗಳಾಗಿವೆ. ಹಾಗೆಯೇ ಬೆಲ್ಲ ಸಕ್ಕರೆಗಳನ್ನು ಹೆಚ್ಚಾಗಿ ತಿನ್ನುವದರಿಂದಲೂ ಈ ವಿಕಾರವಾಗುವದುಂಟು.

**ಮನಸ್ಸಿನ ಪರಿಸ್ಥಿತಿ:**— ಮನಸ್ಸಿಗೆ ಮೇಲಿಂದಮೇಲೆ ಆಘಾತಗಳಾಗುವದಿದು ಮಧುಮೇಹದ ಪ್ರಮುಖ ಕಾರಣ. ಅಂತೇ ಸಟ್ಟಾವ್ಯಾಪಾರಿಗಳಲ್ಲಿ ಮಧುಮೇಹದ ವಿಕಾರ ಹೆಚ್ಚು. ಮೇಲಿಂದಮೇಲೆ ಚಹಾ ಕುಡಿಯುವದೂ ಘಾತುಕವೇ.

**ಲಕ್ಷಣಗಳು ಮತ್ತು ಭಾವನೆ:**—ಮೂತ್ರಕ್ಕೆ ಮತ್ತೆ ಮತ್ತೆ ಹೋಗುವದು, ರಾತ್ರಿ ೩–೪ ಸಲ ಏಳಬೇಕಾಗುತ್ತದೆ. ಬಾಯಾರಿಕೆ ಬಹಳ. ಮಳೆ ಚಳಿಗಾಲಗಳಲ್ಲೂ ಈ ರೋಗಿ ತಂಬಿಗೆಗಟ್ಟಲೆ ನೀರು ಹಣಿಯುತ್ತಾನೆ.

ದೆವ್ವನಂತಹ ಹಸಿವು. ತಿಂದಷ್ಟು ಅರಗಿ ಮತ್ತೂ ಹಸಿವಾಗುತ್ತದೆ. ರೋಗಿಗೆ ತನ್ನ ಪ್ರಕೃತಿ ಸುಧಾರಿಸುತ್ತದೆ ಎಂದೆನಿಸಿದರೂ ಒಳಗಿನ ಪ್ರಕಾರವೇ ಬೇರೆ ಯಾಗಿರುತ್ತದೆ. ಇಷ್ಟು ತಿನ್ನುತ್ತಿದ್ದೂ ಮನುಷ್ಯ ಅಶಕ್ತನಾಗುತ್ತಲೇ ಇರುತ್ತಾನೆ. ತೂಕವೂ ಕಮ್ಮಿಯಾಗಹತ್ತುತ್ತದೆ. ಬೆಳ್ಳಗಾಗುತ್ತಾನೆ. ಮೈಗೆಲ್ಲಾ ತಿಂಡಿ ಮತ್ತು ಉರಿಯಾಗುತ್ತದೆ. ಆತನ ಕಾಮಶಕ್ತಿ ಬರಬರುತ್ತ ಕಡಿಮೆ ಯಾಗುತ್ತದೆ. ಮುಂದೆ ಮುಂದೆ ಉಚ್ಚಿಗೆ ಇರುವೆಗಳು ಮುತ್ತುತ್ತವೆ. ರಕ್ತ ಕೆಡುತ್ತದೆ. ಗಾಯಗಳಾವೂ ಬೇಗ ಮಾಯದೆ ಕೀವು ತುಂಬುತ್ತದೆ. ಮೈಮೇಲೆ ಅಲ್ಲಲ್ಲಿ ಕುರುವುಗಳೇಳುತ್ತವೆ. ಮಾಂಸವಿದ್ದ ಭಾಗದಲ್ಲಿ ಕ್ವಚಿತ್ತಾಗಿ ದೊಡ್ಡ ಕುರು ಅಂದರೆ ಅರ್ಬುದವಾಗುತ್ತದೆ. ಅದಕ್ಕೆ 'ಡಾಯ್‌ಬಿಟಿಕ್ ಕಾರ್ಬಂಕಲ್' ಎನ್ನುತ್ತಾರೆ. ತಲೆಗೆ ಚಕ್ರ ಬರುತ್ತ ಕೊನೆಗೆ ಮೂರ್ಛೆಯೂ ಬರುವದಕ್ಕೆ 'ಡಾಯ್ ಬಿಟಿಕ್ ಕೋಮಾ' ಅನ್ನುತ್ತಾರೆ. ಹೊತ್ತಿನಲ್ಲಿಯೇ ಉತ್ತಮ ಉಪಚಾರವಾಗದಿದ್ದರೆ ರೋಗಿ ಕೈಬಿಡುತ್ತಾನೆ.

**ವಯಸ್ಸು:**— ಪ್ರಮೇಹ ಸಾಮಾನ್ಯವಾಗಿ ಹರೆಯದ ಹುಡುಗರಲ್ಲಿ ಕಾಣಿಸಿಕೊಳ್ಳುತ್ತದೆ. ಮತ್ತು ಮಧುಮೇಹ ಬರುವದು ನಾಲ್ವತ್ತು ವರ್ಷಗಳ ನಂತರ.

## ದೋಷದೂಷ್ಯ ಸಂಗ್ರಹ

ಕಫ, ಪಿತ್ತ, ವಾಯುಗಳಿವು ದೋಷಗಳು. ಮತ್ತು ಮೇದ, ರಕ್ತ, ವೀರ್ಯ, ನೀರು, ಮಾಂಸ, ಸ್ನೇಹ, ಲಸಿಕಾ, ಮಜ್ಜಾ, ರಸ, ಓಜ ಇವು ದೂಷ್ಯಗಳು. ಇವೆಲ್ಲಾ ವಿಕೃತವಾಗಿರುತ್ತವೆ. ಇಷ್ಟೆಲ್ಲಾ ಭಾಗಗಳು ಕೆಟ್ಟಿರುವದರಿಂದ ಮಧುಮೇಹ ನೆಟ್ಟಗಾಗುವದು ಕಷ್ಟ.

**ನಿದಾನ:**—ರೋಗಕ್ಕೆ ಶುರುವಾಗಿ ಬಹಳೇ ದಿನಗಳಾಗಿದ್ದರೂ ನಿದಾನವಾಗುವದಿಲ್ಲ. ರೋಗಿಯ ಅಜ್ಞಾನ ಮತ್ತು ತನ್ನ ಪ್ರಕೃತಿಯ ವಿಷಯವಾಗಿರುವ ದುರಭಿಮಾನಗಳಿಂದ ಪರೀಕ್ಷೆಗೆ ತಡವಾಗುತ್ತದೆ. ಕೊನೆಯಲ್ಲಿ ತನಗಾಗಿರುವ ಸಾಮಾನ್ಯ ಗಾಯ ಬೇಗನೇ ಮಾಯದಿರಲು ಮಾತ್ರ ಪರೀಕ್ಷೆಗೆ ಮೊದಲಾಗುತ್ತಾನೆ. ಆಗ ಮಧುಮೇಹವಾದ್ದು ಗೊತ್ತಾಗುತ್ತದೆ.

ಒಬ್ಬ ಪ್ರಸಿದ್ಧ, ಯಶಸ್ವೀ ಚತುರ ಡಾಕ್ಟರರಿಗೆ ಮೈಮೇಲೆ ಮೇಲಿಂದಮೇಲೆ ಕುರುವುಗಳಾಗಹತ್ತಿದವು. ಹಲವಾರು ಔಷಧೋಪಚಾರಗಳಾದರೂ ಕುರುವುಗಳಾಗುವುದು ನಿಲ್ಲಲಿಲ್ಲ. ಹೀಗೆ ೨-೩ ವರ್ಷ ನಡೆದೇ ಇತ್ತು. ಕೊನೆಗೆ ಅವರ ಮಿತ್ರರಾದ ಡಾಕ್ಟರರೊಬ್ಬರು ಮೂತ್ರ ಪರೀಕ್ಷೆಮಾಡಿಸಿ ಕೊಳ್ಳಬೇಕೆಂದು ಅಭಿಪ್ರಾಯಪಟ್ಟರು. ಅದರಂತೆ ಪರೀಕ್ಷೆ ಮಾಡಲಾಗಿ ಅದರಲ್ಲಿ ಆಶ್ಚರ್ಯವೆಂದರೆ ೧೦೦ ಕ್ಕೆ ೧೨ ರಷ್ಟು ಸಕ್ಕರೆ ಪ್ರಮಾಣ ಹೊರ ಬಿತ್ತು. ಪ್ರಸಿದ್ಧ ಡಾಕ್ಟರರದೇ ಈ ಹಾಡಾದಮೇಲೆ ಸಾಮಾನ್ಯ ಜನರ ದನ್ನೇನು ಹೇಳಬೇಕು ! ಅಂತೇ ೪೦ ವರುಷದ ಮುಂದಿನವರು ರಾತ್ರಿ ಏಳ ಹತ್ತಿ ಹಸಿವೆ, ನೀರಡಿಕೆ ಬೆಳೆಯಹತ್ತಿದರೆ ಕೂಡಲೆ ಮೂತ್ರ ಪರೀಕ್ಷೆ ಮಾಡಿಸಿ ಕೊಳ್ಳಬೇಕು.

## ಮೂತ್ರ ಪರೀಕ್ಷೆ

ಉಚ್ಚೆಗೆ ಇರುವೆಗಳು ಮುತ್ತಬೇಕಾದರೆ ಸಕ್ಕರೆ ಪ್ರಮಾಣ ಹೆಚ್ಚಿಗೆ ಇರಲೇಬೇಕು. ಇಷ್ಟು ಹೆಚ್ಚಾಗುವವರೆಗೆ ಸುಮ್ಮನಿರಬಾರದು. ಯೋಗ್ಯ ವೇಳೆಯಲ್ಲಿ ಪರೀಕ್ಷೆ ಮಾಡಿಸಬೇಕು. ಪರೀಕ್ಷೆಗೇನು ದೊಡ್ಡ ಲೆಬೋರೇಟರಿ ಬೇಕಿಲ್ಲ. ಸಾಮಾನ್ಯ ದವಾಖಾನೆಯಲ್ಲಿಯೂ ಮಾಡಬಹುದು. ಮೂತ್ರ ಪರೀಕ್ಷೆಯನ್ನು ಈ ಕೆಳಗಿನಂತೆ ಮಾಡಬೇಕು.

**ಪ್ರಮಾಣ:—**(೧) ೨೪ ತಾಸುಗಳಲ್ಲಿಯ ಮೂತ್ರ ೧೦೦ ಔಂಸುಗಳಿ ಗಿಂತ ಹೆಚ್ಚಾಗಿರಬಾರದು. ಈ ಪ್ರಮಾಣ ಮೀರಿದಾಗ ಪ್ರಮೇಹದ ಶಂಕೆ ಬರುತ್ತದೆ.

**ವಿಶಿಷ್ಟ ಘನತ್ವ** (ಸ್ಪೆಸಿಫಿಕ್ ಗ್ರ್ಯಾವ್ಹಿಟಿ) :– ನಿರೋಗಿಗಳ ಮೂತ್ರದ ವಿಶಿಷ್ಟ ಘನತ್ವ ೧.೧೫ ರಿಂದ ೧.೨೫ರ ವರೆಗೆ ಇರಬೇಕು. ಇದನ್ನು ಗೊತ್ತು ಹಚ್ಚಲು ಯುರಿನಾಮೀಟರ ಎಂಬ ಸಾಧನದ ಉಪಯೋಗ ಮಾಡಬೇಕು. ಇದರಲ್ಲೊಂದು ದೊಡ್ಡ ಕಾಜಿನ ಕೊಳವೆ ಇರುತ್ತದೆ. ಅದರಲ್ಲಿ ೨ ಔಂಸು ಮೂತ್ರ ತಕ್ಕೊಂಡು ಯುರಿನಾ ಮೀಟರನ್ನು ಮೆಲ್ಲಗೆ ಒಳಗೆ ಇಳಿಸಬೇಕು.

ಅದು ವಿಶಿಷ್ಟ ಮರ್ಯಾದೆಯ ಪರ್ಯಂತರ ಒಳಸೇರಿ ಅದರ ಸೀರಾದ ಒಂದು ತುದಿ ಮೇಲಕ್ಕೆ ಉಳಿಯುತ್ತದೆ. ಮೂತ್ರದ ಮೇಲ್ಪಟ್ಟಕ್ಕೆ ಹತ್ತಿದ ಭಾಗದ ಅಂಕಿಯಷ್ಟು ಪ್ರಮಾಣ ಮೂತ್ರದ (ಸ್ಪೆಸಿಫಿಕ್‌ಗ್ರ್ಯಾವ್ಹಿಟಿ) ವಿಶಿಷ್ಟ ಘನತ್ವವೆಂದು ತಿಳಿಯಬೇಕು. ಅದು ೧೦೧೦ ರ ಕೆಳಕ್ಕಿದ್ದರೆ ಪ್ರಮೇಹ ೧೦೩೦ ರ ಮೇಲಿದ್ದರೆ ಮಧುಮೇಹದ ಸಂಶಯ ತಕ್ಕೊಳ್ಳಲು ಅಡ್ಡಿಯಿಲ್ಲಾ.

(೩) **ಬಂಣ:–** ನಿರೋಗಿಗಳ ಮೂತ್ರ ತಿಳುಹಳದಿಯದಾಗಿರಬೇಕು.

(೪) **ರಿ ಅಕ್ಶನ್:–** ಮೂತ್ರದಲ್ಲಿ ನೀಲ ಮತ್ತು ಕೆಂಪು ಲಿಟ್ಮಸ್ ಪೇಪರ ಹಾಕಲಾಗಿ ನೀಲೀ ತುಂಡು ಕೆಂಪಗಾದರೆ ಮಾತ್ರ ಆಮ್ಲಭೂಯಿಷ್ಟ ( ಆ್ಯಸಿಡ್ ) ಇದೆ ಎಂದು ತಿಳಿಯಬೇಕು. ಕೆಂಪು ಲಿಟ್ಮಸ್ ತುಂಡು ನೀಲಿಯಾದರೆ ಮಾತ್ರ ಕ್ಷಾರಭೂಯಿಷ್ಟ (ಅಲ್ಕಲಾಯಿನ್) ವೆಂದು ತಿಳಿಯಬೇಕು.

(೫) **ಸಕ್ಕರೆ** (ಶುಗರ) :—ಫೇಲಿಂಗ್ ಸೊಲ್ಯೂಶನ್ ನಂ. ೧. ಮತ್ತು ನಂ. ೨. ಎಂಬ ಹೆಸರಿನ ಎರಡು ದ್ರಾವಣಗಳಿರುತ್ತವೆ. ಒಂದು ಪರೀಕ್ಷೆಯ ಕೊಳವೆಯಲ್ಲಿ ಎರಡೂ ದ್ರಾವಣಗಳ ಎರಡೆರಡು ಸಿ. ಸಿ. ಒಟ್ಟು ನಾಲ್ಕು ಸಿ. ಸಿ. ತಕ್ಕೊಂಡು ಸ್ಪಿರಿಟ್‌ಲ್ಯಾಂಪಿನಮೇಲೆ ಕುದಿಸಬೇಕು. ಎರಡನೇ ಪರೀಕ್ಷೆಯ ಕೊಳವಿಯಲ್ಲಿ ನಾಲ್ಕು ಸಿ. ಸಿ. ಮೂತ್ರ ತಕ್ಕೊಂಡು ಕುದಿಸಿ ಎರಡನ್ನೂ ಕೂಡಿಸಿ ಮತ್ತೆ ಕುದಿಸಬೇಕು. ಆಗ ಸಕ್ಕರೆ ಇಲ್ಲದ ಮೂತ್ರ ಮಿಶ್ರಣದ ಬಂಣ ನೀಲೀಯಾಗಿಯೇ ಇರುತ್ತದೆ. ಸಕ್ಕರೆ ಇದ್ದರೆ ಬಂಣ ಬದಲಾಗಿ ಕೇಶರಿ ಅಥವಾ ಕೆಂಪಾಗುತ್ತದೆ. ಮೂತ್ರದಲ್ಲಿ ಸಕ್ಕರೆ ಪ್ರಮಾಣ ಹೆಚ್ಚಿದ್ದ ಹಾಗೆ ಬಂಣ ದಟ್ಟ ಕೆಂಪಾಗುತ್ತದೆ. ಬಂಣ ತಿಳು ಕೇಶರಿಯಾಗಿದ್ದರೆ ಸಕ್ಕರೆಯ ಪ್ರಮಾಣ ೧೦೦ ಕ್ಕೆ ೧ ರೊಳಗೆ ಇದೆ ಎಂದೂ, ಚಹಾದ ಬಂಣವಿದ್ದರೆ ೨% ರಂತೆ, ಸುಟ್ಟ ಇಟ್ಟಂಗಿಯ ಬಂಣವಿದ್ದರೆ ೩% ರಂತೆ ಮತ್ತೆ ಸೊನ್ನಿಕೇವಿ ಕಲಿಸಿದಂತಿದ್ದರೆ ೫% ಕ್ಕಿತ ಹೆಚ್ಚಿಗೆ ಪ್ರಮಾಣವೆಂದು ತಿಳಿಯಬೇಕು.

**ಎರಡನೇ ರೀತಿ:—** ೫ ಸಿ. ಸಿ. ಬೆನೆಡಿಕ್ಟ ಸೊಲ್ಯೂಶನ್ ತಕ್ಕೊಂಡು ಅದರಲ್ಲಿ ೧೦ ಹನಿ ಮೂತ್ರ ಹಾಕಿ ಕುದಿಸಿ ೨ ಮಿನೀಟು ತಣಿಸಿ ನೋಡಿದ

ಮೂತ್ರದ ಬಣ್ಣ ಸಕ್ಕರಿ ಇದ್ದರೆ ಹಳದಿ ಅಥವಾ ಕೆಂಪಗಿರುತ್ತದೆ. ಸಕ್ಕರಿ ಇಲ್ಲಿದಿದ್ದರೆ ನೀಲಿಯಾಗಿರುತ್ತದೆ.

**ಭೇದಕ ನಿದಾನ:—** ಬಹಳ ಸಾರೆ ಮೂತ್ರವಾಗೋಣ. ಅಥವಾ ಮೂತ್ರದಲ್ಲಿ ಸಕ್ಕರೆ ಶಿಕ್ಕ ಪಾತ್ರಕ್ಕೆ ಇದಿಷ್ಟೇ ಕಾರಣದಿಂದ ಮಧುಮೇಹ ವೆಂದು ಭಾವಿಸಿಕೊಳ್ಳಬಾರದು. ಅಶ್ಮರಿ, ಪರಮಾ, ಪ್ರಮೇಹ ಮೊದಲಾದ ವಿಕಾರಗಳಲ್ಲಿ ರೋಗಿ ಮತ್ತೆ ಮತ್ತೆ ಮೂತ್ರಕ್ಕೆ ಹೋಗುತ್ತಾನೆ. ಹಾಗೆಯೇ ಮನಸಿನ ಚಿಂತೆಯಿಂದ ಕ್ವಚಿತ್ ತಾತ್ಪೂರ್ತಿಕವಾಗಿ ಸಕ್ಕರೆ ಕಂಡುಬರುತ್ತದೆ. ಇದರಿಂದೂ ಮಧುಮೇಹದ ನಿರ್ಣಯವಾಗುವದಿಲ್ಲ. ಆದರೆ ಮೂತ್ರದಲ್ಲಿ ಸಂತತವಾಗಿ ಸಕ್ಕರೆ ಇರೋಣ, ವಿಶೇಷವಾಗಿ ಉಪವಾಸದ ನಂತರವೂ ಸಕ್ಕರೆ ಕಮ್ಮಿಯಾಗದಿರೋಣಗಳು ಮಧುಮೇಹದ ಮುಖ್ಯ ಲಕ್ಷಣಗಳಾಗಿವೆ.

**ಸಾಧ್ಯಾಸಾಧ್ಯತ್ವ:—** ಮಧುಮೇಹವು "ಯಾಪ್ಯ" ರೋಗವಾಗಿದೆ, ಯೋಗ್ಯ ಉಪಚಾರ ಮತ್ತು ಪಥ್ಯಗಳಿಂದ ಅದು ಹಿಡಿತದಲ್ಲಿರುತ್ತದೆ, ಆದರೆ ತುಸು ಅಪಥ್ಯವಾದರೆ ಮರಕಳಿಸುವದು. ಚಿಕ್ಕ ವಯಸ್ಸಿನಲ್ಲಿ ಆನುವಂಶಿಕ ಕಾರಣದಿಂದ ಮಧುಮೇಹ ಬಂದರೆ ಅಸಾಧ್ಯವಾಗಿರುತ್ತದೆ. ಮಧುಮೇಹ ದಲ್ಲಿ ಕ್ಷಯವಾಗುವದೂ ಶಕ್ಯ. ಇಂಥಲ್ಲಿ ಬರುವ ಕ್ಷಯ ಶೀಘ್ರ ಸಂಹಾರಕ (ಗೆಲೋಪಿಂಗ ಟೀ.ಬಿ.) ವಾಗಿ ರೋಗಿಯನ್ನು ಬಲು ಬೇಗ ಯಮಪುರಿಗಟ್ಟುತ್ತದೆ. ಮಧುಮೇಹದಲ್ಲಿ ಅರ್ಧಾಂಗವಾದರಂತೂ ಆ ರೋಗಿಯ ಗತಿ ಯಾತಕ್ಕೂ ಬೇಡ. ಹಾಗೆಯೇ ಅರ್ಬುದ (ಕಾರ್ಬಂಕಲ್) ಅಥವಾ ಮೂರ್ಛಾ (ಕೋಮಾ) ಗಳು ಬರುವದು ಅರಿಷ್ಟ ಲಕ್ಷಣವಾಗಿದೆ. ಪ್ರಮೇಹ ಪಿಟಕದಲ್ಲಿ ಬಟ್ಟಾಡಿಸುವಷ್ಟು ದೊಡ್ಡ ತೂತಾಗಿರುತ್ತದೆ. ಇದು ಬಲು ತ್ರಾಸ ದಾಯಕವಾದರೂ ಆಯುರ್ವೇದ ಚಿಕಿತ್ಸೆಯಿಂದ ಪೂರಾ ಗುಣ ಹೊಂದಿದ ಉದಾಹರಣೆಗಳುಂಟು.

**ಚಿಕಿತ್ಸೆ:—** (ಆಯುರ್ವೇದೀಯ)"ನ ವಾಮಯೇತ್ ಪ್ರಮೇಹಿನಂ" (ಚರಕ) ಪ್ರಮೇಹ ಅಥವಾ ಮಧುಮೇಹದವರಿಗೆ ವಾಂತಿ ಮಾಡಿಸಬಾರದು. (೧) "ಮೇಹೇಷು ಧಾತ್ರೀ ನಿಶೇ" ಎಲ್ಲ ಬಗೆಯ ಪ್ರಮೇಹ ಮತ್ತು ಮಧು

ಮೇಹಗಳಿಗೆ ವಾಗ್ಭಟಾಚಾರ್ಯರು ನೆಲ್ಲೀಕಾಯಿ,ಅರಿಷಿಣ, ಮರದರಿಷಣ ಗಳ ಕಷಾಯವನ್ನು ಹೇಳಿದ್ದಾರೆ.

(೨) "ಇಕ್ಷುಮೇಹೇ ಪಾರಿಭದ್ರಃ" (ಸುಶ್ರುತ) :— ಇಕ್ಷುಮೇಹಕ್ಕೆ ಕಹಿ ಬೇವು ಉತ್ತಮವಾಗಿದೆ. ಮಧುಮೇಹಕ್ಕೂ ಒಂದೊಂದು ಮಾಸಿ ಬೇವಿನ ರಸ ತಕ್ಕೊಳ್ಳಬೇಕು. ಇದರಿಂದ ಸಕ್ಕರಿ ಹೋಗುವದು ಕಡಿಮೆಯಾಗುತ್ತದೆ. ಈ ರಸ ಹೆಚ್ಚು ಪ್ರಮಾಣದಲ್ಲಿ ಈ ರೋಗಿ ತಕ್ಕೊಂಡರೆ ಮೂರ್ಛೆ ಬರುವ ಸಂಭವವಿರುತ್ತದೆ.

(೩) ನೀರಲ ಹಣ್ಣುಗಳನ್ನು ಬೇಕಾದಷ್ಟು ತಿನ್ನಬೇಕು, ಜಂಬ್ವಾಸವ ತಕ್ಕೊಳ್ಳಬಹುದು. ಹಾಗೆಯೇ ಒಣಗಿದ ನೀರಲ ಬೀಜಗಳ ಪುಡಿಯನ್ನು ಹಾಲಿನಲ್ಲಿ ತಕ್ಕೊಳ್ಳುವದೂ ಉತ್ತಮ.

(೪) ಬಿಲ್ವ ಪತ್ರೀ ರಸ ೨ ಚಮಚೆಗಳಂತೆ ದಿನಾಲು ೨ ವೇಳೆ ತಕ್ಕೊಂಡರೆ ಖಂಡಿತವಾಗಿ ಸಕ್ಕರೆ ಹೋಗುವದು ನಿಲ್ಲುತ್ತದೆ.

(೫) ಸಪ್ತಕಪಿಯ ಚೂರ್ಣ ಒಂದೊಂದು ಮಾಸಿಯಂತೆ ಸಂಜೆ ಮುಂಜಾನೆ ಹಾಲಲ್ಲಿ ತಕ್ಕೊಳ್ಳಬೇಕು. ಮೇಲಿನ ಐದೂ ಔಷಧಿಗಳು ಬಡವರಿಗೆ ಅಮೃತವಾಗಿವೆ. ಈ ಐದೂ ಸ್ವತಂತ್ರವಾದ ಔಷಧಿಗಳಾಗಿರುವವಲ್ಲದೆ ಸಿದ್ಧ ಕಲ್ಪಗಳಿಗೆ ಸಹ ಪಾನಗಳನ್ನಾಗಿಯೂ ಉಪಯೋಗಿಸಬಹುದು.

(೬) **ಕಷಾಯಃ—** ಬಿಲ್ವದಳ, ತರೇದಗಿಡದ ಒಳತೋಟಿ, ಸಪ್ತಕಪಿ, ಬಿಳೀ ಹಾಲವಾಳದ ಬೇರು, ಆಲದ ಗಿಡದ ಒಳತೋಟಿ, ಅಶ್ವಗಂಧಿ, ಶತಾವರಿ, ಬೂರಲ ಗಿಡದ ಒಳತೋಟಿಗಳೆಲ್ಲವನ್ನು ಪ್ರತ್ಯೇಕ ಮೂರು ಮೂರು ಮಾಸಿಗಳಂತೆ ಹಾಕಿ ೨ ಕಪ್ಪು ನೀರಿನಲ್ಲಿ ಕುದಿಸಿ ೧/೪ ಉಳಿಸಿ ಕಾಡೇ ನಿಕ್ಕಾಡೆ ತಕ್ಕೊಳ್ಳಬೇಕು. [ಇದು ಡಾ. ಕರೋಡೆ ಸಿವ್ಹಿಲ್ ಸರ್ಜನ್ ಯವರ ಯೋಗ]

(೭) ತ್ರಿಫಳಾ ೨ ಮಾಸಿ, ಗೋಮೂತ್ರದಲ್ಲಿ ೨ ವೇಳೆ, ಜವೆಗೋದಿಯ ಆಹಾರವನ್ನೇ ಎಪ್ಪತ್ತು ಉಣ್ಣುತ್ತ ೨೧ ದಿನ ಕಳೆಯಬೇಕು.

(೮) ಶಿಲಾಜಿತು– ಶುದ್ಧ ಶಿಲಾಜಿತು [ ಸೂರ್ಯ ತಾಪಿ ] ೨ ಗುಂಜಿ ಯಂತೆ ೪ ಸಲ ಹಾಲಿನಲ್ಲಿ. ''ಶಿಲಾಜಿತು ತುಲಾಮದ್ಯಾತ್ ಪ್ರಮೇಹಾರ್ತಿಃ ಪುನರ್ನವಃ'' [ವಾಗ್ಭಟ] ಮಧುಮೇಹದ ಮನುಷ್ಯ ಹೊಸ ಮನುಷ್ಯ ನಾಗಬೇಕೆಂದಿದ್ದರೆ ೪೦೦ ತೊಲಿ ಶುದ್ಧ ಶಿಲಾಜಿತು ತಿನ್ನಬೇಕು.

(೯) **ಬಹು ಮೂತ್ರತಾಃ—** ರಾಜವಲ್ಲಭ ೪ ಗುಂಜಿ, ೪ ಚೀಟು ಬಿಲ್ವ ಪತ್ರೀರಸ, ಜೇನಿನಲ್ಲಿ.

(೧೦) **ಗುಡಮಾರೀ ವನಸ್ಪತಿಃ—** ಲೋಧ್ರ, ಪುಷ್ಕರಮೂಳ, ಬಜಿ ಗಳ ಚೂರ್ಣವನ್ನು ೬ ಗುಂಜಿ, ೪ ಚೀಟು, ಹಾಲಿನಲ್ಲಿ ೪ ಸಲ.

(೧೧) **ಕೃಶ-ತೆಳು ಪ್ರಕೃತಿಯವರ ಮಧುಮೇಹ:—** ಶುದ್ಧ ಗುಗ್ಗುಳ ೮ ಗುಂಜಿ + ಸಪ್ತಕಷಿ ೮ ಗುಂಜಿ, ೪ ಸಲ ಹಾಲಿನಲ್ಲಿ, ಗುಗ್ಗುಳ ಸ್ನಿಗ್ಧ ಮತ್ತು ಮಾಂಸವರ್ಧಕವಾಗಿದೆ.

(೧೨) **ಸ್ಥೂಲ-ದಪ್ಪ ಪ್ರಕೃತಿಯವರ ಮಧುಮೇಹ:—** ಶಿಲಾ ಜಿತು ೮ ಗುಂಜಿ + ಕಹಿಬೇವಿನ ತಪ್ಪಲ ಪುಡಿ ೮ ಗುಂಜಿ ೪ ಚೀಟು, ಹಾಲಿನಲ್ಲಿ ೪ ಸಲ. ಶಿಲಾಜಿತು ಬಜ್ಜನ್ನು (ಫ್ಯಾಟ) ಕಳೆಯುವದಾಗಿದೆ,

ಇಲ್ಲಿಯವರೆಗೆ ಮಧುಮೇಹಕ್ಕೆ ಬಹು ಸಾಮಾನ್ಯವಾಗಿ ಕಡಿಮೆ ಖರ್ಚಿ ನಲ್ಲಿ ಆಗುವ ಬಹುಮೂಲ್ಯಗಳಾದ ದ್ವಾದಶ ಉಪಚಾರಗಳನ್ನು ಹೇಳಿದ್ದಾ ಯಿತು. ಇನ್ನು ವಿಶೇಷ ಸಿದ್ಧ ಕಲ್ಪಗಳ ವಿಷಯವಾಗಿ ವಿಚಾರ ಮಾಡೋಣ

(೧) **ನಾಗಭಸ್ಮ:—** ಮಧುಮೇಹದ ಮೇಲೆ ಇದರ ಉಪಯೋಗ ಬಹಳ. ಇದು ಶಕ್ತಿವರ್ಧಕವಾಗಿದೆಯಲ್ಲದೆ ಕೆಟ್ಟಿರುವ ಯಾವತ್ತೂ ದೋಷ ದೂಷ್ಯಗಳು ಇದರಿಂದ ಸುಧಾರಿಸಿಕೊಳ್ಳುತ್ತವೆ. ಸಕ್ಕರಿಯ ಪ್ರಮಾಣ ಬಹಳೇ

ಬೆಳೆದು ಬಂದಿರೋಣ, ಅಶಕ್ತಿ, ನೀರಡಿಕೆ, ಇಂದ್ರಿಯ ಶೈಥಿಲ್ಯ ಮೊದಲಾದವು ಗಳ ಮೇಲೆ ಒಳ್ಳೇ ಉಪಯುಕ್ತವಾಗಿದೆ.

(೨) **ಚಂದ್ರಪ್ರಭಾಃ**— ಇದು ಶಿಲಾಜಿತು ಕಲ್ಪ. ಎಲ್ಲಾ ಬಗೆಯ ಪ್ರಮೇಹ ಮತ್ತು ಮಧುಮೇಹಗಳಿಗೆ ಉತ್ತಮವಾಗಿದೆ. ಹೊಟ್ಟೆಯಲ್ಲಿಯ ಆಮದೋಷ ಹಾಗೂ ಮೂತ್ರಾಶಯದಲ್ಲಿಯ ಕ್ಲೇದಗಳು ಇದರಿಂದ ಕಡಿಮೆ ಯಾಗುತ್ತದೆ.

(೩) **ಮಧುಮೇಹ ದರ್ಪಹಾರಿಃ**— ಇದು ಅಫುವಿನ ಕಲ್ಪ ಮೂತ್ರದ ಪ್ರಮಾಣ ಬಹಳವಾಗಿ ಬೆಳೆಯೋಣ, ಮೈಗೆ ಅಲ್ಲಲ್ಲಿ ಶೂಲಿ, ಇವು ಗಳ ಮೇಲೆ ವಿಶೇಷ ಉಪಯೋಗ.

(೪) **ತ್ರಿವಂಗ:**— ಧಾತು ಕ್ಷೀಣತೆ; ಬಸ್ತಿಯಲ್ಲಿದ್ದ ದೋಷ ಮತ್ತು ನಪುಂಸಕತ್ವಗಳಮೇಲೆ ಹೆಚ್ಚಾಗಿ ಉಪಯೋಗ.

(೫) **ಪುಷ್ಪಧನ್ವಾಃ**—ಅತಿ ಮೈಥುನದಿಂದಾದ ಮಧುಮೇಹದ ಮೇಲೆ ಹಾಗೂ ಜನನೇಂದ್ರಿಯದ ತ್ರಾಣ ಕಡಿಮೆಯಾಗಿದ್ದಲ್ಲಿ ಇದು ವಿಶೇಷ ಉಪಯುಕ್ತ.

(೬) **ವಸಂತ ಕುಸುಮಾಕರಃ**—ನಾಜೂಕ ಪ್ರಕೃತಿಯ ಶುಕ್ರಕ್ಷೀಣ ಮನುಷ್ಯರಿಗೆ ಹೆಚ್ಚು ಉಪಯೋಗ. ಅಲ್ಲದೆ ವೈಚಾರಿಕ ದೌರ್ಬಲ್ಯ, ಮೇಂದು ಮತ್ತು ವಾತ ವಾಹಿನಿಗಳು ಕ್ಷೀಣವಾಗಿದ್ದಾಗ ಉಪಯೋಗ. ಬಹಳ ಓದೋಣ, ವಿಚಾರ ಮಾಡೋಣ, ಚಿಂತೆ ಅಥವಾ ಸಟ್ಟೇಬಾಜಿ ಮೊದಲಾದವುಗಳಿಂದ ಉಂಟಾದ ಮಧುಮೇಹದ ಮೇಲೆ ಈ ಔಷಧಿ ಹೆಚ್ಚಾಗಿ ಕೆಲಸ ಮಾಡುವದು ಕಂಡು ಬರುತ್ತದೆ.

(೭) **ಮಧುಮೇಹಾಂತಕ ರಸಾಯನಃ**— ಕುರುವು, ಅರ್ಬುದ, ಪ್ರಮೇಹ ಪಿಟಕಾ ಮೊದಲಾದವುಗಳಿಗೆ (೧) ಪ್ರಮೇಹ ಪಿಟಕಾದಲ್ಲಿ ಮೊದಲು ಬಾವು ಬರುವದಿದು ಆಮಾವಸ್ಥೆ.

(೨) ಆ ಮೇಲೆ ಅದರಲ್ಲಿ ಕೀವಾಗುವದು ಪಚ್ಯಮಾನ-ಡ್ವಾರಿಯಾಗಿರುವ ಅವಸ್ಥೆ. ಮುಂದೆ.

(೩) ಪಕ್ವಾವಸ್ಥೆ:— ಹಂಣಾಗುವದು. ಪಿಟಿಕಾದಲ್ಲಿ "ಪ್ರಯತ್ನತಃ ಪಾಕಂಚವಾರಯೇತ್" ಅಂದರೆ ಕೀವಾಗಗೊಡಬಾರದು. ಆದ್ದರಿಂದ ಆಮಾವಸ್ಥೆಯಲ್ಲಿಯೇ ಜಿಗಳೀ ಹಚ್ಚಿ ಅಶುದ್ಧ ರಕ್ತ ತೆಗೆದು ಹಾಕಬೇಕು. ರೋಗಿಯನ್ನು ಬರಿ ಹಾಲಿನ ಮೇಲೆ ಇಡಬೇಕು. ಶೋಥಹರಲೇಪ, ದೋಷಘ್ನ ಲೇಪಗಳನ್ನು ಹಾಲಿನಲ್ಲಿ ತೇದು ಬಿಸಿ ಮಾಡಿ ಲೇಪಿಸಬೇಕು. ಇಷ್ಟಾಗಿಯೂ ಕೀವಾಗಿ ಒಡೆದರೆ ಶೋಧನ, ರೋಷಣ ತೈಲದಿಂದ ಘಾಯ ಮಾಯುವಂತೆ ಮಾಡಬೇಕು. ಇದರಲ್ಲಿ ಶಸ್ತ್ರಕ್ರಿಯೆ ವರ್ಜವಾಗಿದೆ.

(೮) **ಸೋಮಲ ಕಲ್ಪ**:— ಉಚ್ಚೆಯಲ್ಲಿ ರಸಧಾತು (ಕಾಯಿಲ್ ಯೂರಿಯಾ) ಹೋಗುತ್ತಿದ್ದರೆ ಮಲ್ಲಸಿಂದೂರ, ಸಮೀರಪನ್ನಗ ಮತ್ತು ಪಂಚಸೂತ ಉಪಯೋಗಿಸಬೇಕು.

(೯) **ಮಹಾವಾತ ವಿಧ್ವಂಸ**:— ಮಧುಮೇಹದಲ್ಲಿ ವಾತವಿಕಾರ ಉಂಟಾದರೆ ಇದು ವಿಶೇಷ ಉಪಯೋಗಿ.

(೧೦) **ಚಂದ್ರಕಲಾ**:—ಮೂರ್ಛೆ, ತಂದ್ರಾ ಮೊದಲಾದವುಗಳಲ್ಲಿ ಇದಲ್ಲದೆ ವಸಂತ ಕುಸುಮಾಕರ, ಚಂದ್ರಕಲಾ, ಮೇಹಾಂತಕ ರಸಾಯನಗಳನ್ನೂ ಉಪಯೋಗಿಸಬೇಕು.

(೧೧) ಸ್ಮೃತಿಸಾಗರ ಅಥವಾ ಏಕಾಂಗವೀರಗಳನ್ನು ಮಧುಮೇಹದಲ್ಲಿ ಸ್ಮೃತಿಭ್ರಂಶ ಅಥವಾ ಅರ್ಧಾಂಗಗಳಿದ್ದರೆ ಕೊಡಬೇಕು.

(೧೨) ಕಾಪ್ಯಟ್ವನ್ನು ವಾತವಾಹಿನಿಗಳ ದುರ್ಬಲತೆಯ ಮೇಲೆ ಕೊಡಬೇಕು.

(೧೩) **ಆರೋಗ್ಯವರ್ಧಿನಿ**:— ಸ್ಥೂಲ ಪ್ರಕೃತಿಯವರಿಗೆ. ಯಕೃತ್ತಿನ ವಿಕೃತಿಯಿಂದಾದ ಮಧುಮೇಹದಲ್ಲಿ ಕೊಟ್ಟರೆ ಪಚನಕ್ರಿಯೆ ಸುಧಾರಿಸಿ ಯಕೃತ್ತಿನ ಕೆಲಸ ನಿಯಮಿತವಾಗಿ ರೋಗಿ ಸುಧಾರಿಸುತ್ತಾನೆ.

(೧೪) **ಡಾಯಾಬಿಟಿಕ್ಸ್ಃ**— ಎರಡೆರಡು ಗುಳಿಗೆಯಂತೆ ೨ ವೇಳೆ ಹಾಲಲ್ಲಿ.

(೧೫) ಅಷ್ಟಮೂರ್ತಿ ರಸಾಯನ, ಇದು ಮೊದಲಿಗೆ ಉಪದಂಶವಿದ್ದು ಆಮೇಲೆ ಮಧುಮೇಹವಾಗಿದ್ದರೆ ಉಪಯೋಗವಾಗುತ್ತದೆ.

**ಆ್ಯಲೋಪಥಿ:**— (೧) ಇನ್‌ಶುಲಿನ್ ಇಂಜಕ್ಶನ್. ಸ್ವಾದುಪಿಂಡಗಳ ಸ್ರಾವ ಕಮ್ಮಿಯಾಗುವದರಿಂದ ಮಧುಮೇಹವಾಗುತ್ತದೆ. ಅಂತೇ ಇದರಲ್ಲಿ ಮೇಲಿನ ಮದ್ದು ಚುಚ್ಚುತ್ತಾರೆ. ಇದೊಳ್ಳೇ ಪ್ರಭಾವಿ ದ್ರವ್ಯವಾಗಿದೆ. ಇದರಿಂದ ರಕ್ತದಲ್ಲಿಯು ಸಕ್ಕರಿ ಬಲೂ ಬೇಗ ಕಡಿಮೆಯಾಗುತ್ತದೆ. ಆದ್ದರಿಂದ ಮೇಲಿಂದ ಮೇಲೆ ಮೂತ್ರ ಪರೀಕ್ಷಿಸಿಕೊಂಡು ಇದನ್ನು ದಿನಾಲು ಅಂತಃಸ್ತ್ವಚೆಯಲ್ಲಿ ಚುಚ್ಚಿಸಿಕೊಳ್ಳಬೇಕು. ಸಕ್ಕರಿ ಒಮ್ಮೆಲೇ ಕಮ್ಮಿಯಾದರೆ ಮೂರ್ಛೆ ಬರುತ್ತದೆ. ಅಂತೇ ಎಚ್ಚರಿಕೆಯಿಂದಿರಬೇಕು.

**ಇದರ ಪ್ರಮಾಣಃ**— ಸಕ್ಕರಿ ೧೦೦ಕ್ಕೆ ೫ ಕ್ಕೂ ಹೆಚ್ಚಾದರೆ ದಿನಾಲು ೪೦ ಯುನಿಟ್ ಕೊಡಬೇಕು. ಸಕ್ಕರೀ ಪ್ರಮಾಣ ಕಡಿಮೆಯಾದರೆ ೨೦ ಯುನಿಟ್ ಕೊಡಬೇಕು. ಸಕ್ಕರೀ ಹೋಗುವದು ಪೂರಾ ಕಡಿಮೆಯಾದಾಗ ಚುಚ್ಚಿಸಿಕೊಳ್ಳುವ ಕಾರಣವಿಲ್ಲ-

**ವಿಶೇಷ ಸೂಚನೆಃ**— (೧) ಬರಿ ಹೊಟ್ಟೆಯಲ್ಲಿ ಈ ಮದ್ದು ಚುಚ್ಚಿಸಿಕೊಳ್ಳಬಾರದು, ಪಥ್ಯದ ಊಟ ಮಾಡಿಯೇ ಚುಚ್ಚಿಸಿಕೊಳ್ಳಬೇಕು. ಈ ಚುಚ್ಚುಮದ್ದು ಹುಟ್ಟಿದೊಡನೆ "ಇನ್ನು ಜಗತ್ತಿನಲ್ಲಿಯು ಮಧುಮೇಹವನ್ನು ನಿರ್ಮೂಲ ಮಾಡಿಯೇ ಬಿಡುತ್ತೇವೆಂದು" ಭಾವಿಸಿದಷ್ಟೇನು ಫಲವಾಗಲಿಲ್ಲ. ತಾತ್ಪೂರ್ತಿಕವಾಗಿ ಇದು ಶಮನ ಮಾಡುತ್ತದೆಯಲ್ಲದೆ ಶಾಶ್ವತ ಗುಣ ಕೊಡುವದಿಲ್ಲ.

(೨) **ಪ್ಯಾಂಕ್ರಿಪ್‌ಟಿನ್ಃ**— ಗುಳಿಗೆಗಳು. ಇವನ್ನು ದಿನಾಲು ಸಂಜೆ ಮುಂಜಾನೆ ಎರಡೇಡು ಗುಳಿಗೆಗಳಂತೆ ಹಾಲಿನ ಜೊತೆ ತಕ್ಕೊಳ್ಳಬೇಕು.

**ಪಥ್ಯಾಪಥ್ಯ:—** ನಾಲಿಗೆಯ ಲಾಲಸೆಯನ್ನು ಪೂರೈಸಲೆಂದು ಚಿಕ್ಕಂದೇ ನಿಸರ್ಗದ ನಿಯಮ ಮೀರಿ ಯಥೇಚ್ಛ ಮಿಷ್ಟಾನ್ನ (ಹೆಚ್ಚಾಗಿ ಸಿಹಿಯ)ನ್ನ ತಿಂದವರಿಗೆ ನಿಸರ್ಗದಿಂದಾಗುವ ಜೀವಾವಧಿ ಶಿಕ್ಷೆಯು ಮಧುಮೇಹ. ಮಧುಮೇಹ ಗಂಟುಬಿತ್ತೆಂದರೆ "ಜಗತ್ತಿನ ಮಾಧುರ್ಯವೆಲ್ಲಾ ತಮ್ಮ ಪಾಲಿನದಲ್ಲ"ವೆಂದೇ ತಿಳಿದುಕೊಂಡುಬಿಡಬೇಕು. ಮನುಸ್ಮೃತಿಯಲ್ಲಿ ಹೇಳಿದಂತೆ– "ನಿವೃತ್ತಿಸ್ತು ಮಹಾಫಲಾ" ಈ ಪದಾರ್ಥಗಳನ್ನು ಬಿಡುವದರಲ್ಲಿಯೇ ಹೆಚ್ಚಿನ ಸುಖವೆಂಬದನ್ನು ಮಧುಮೇಹಿಗಳು ಎಂದೂ ಮರಿಯದಿರಬೇಕು. ಈ ವಿಷಯದಲ್ಲಿ ಲೋಕಮಾನ್ಯ ಟಿಳಕರ ಆದರ್ಶ ತಕ್ಕೊಳ್ಳತಕ್ಕಂಥಾದ್ದಾಗಿದೆ. ತಮಗೆ ಮಧುಮೇಹವಾದದ್ದು ತಿಳಿದನಂತರ ಅವರು ಕೊನೆಯ ವರೆಗೂ ಎಂದೆಂದೂ ಸಿಹಿ ವಸ್ತುಗಳನ್ನು ಮುಟ್ಟುತ್ತಲೇ ಇರಲಿಲ್ಲ. 'ನಾನು ಬದುಕಲಿಕ್ಕೆಂದು ತಿನ್ನುವೆನಲ್ಲದೆ ತಿನ್ನಲಿಕ್ಕೆ ಬದುಕಿಲ್ಲ'ವೆಂದು ಅವರು ಹೇಳುತ್ತಿದ್ದರು.

ಮಧುಮೇಹದವರು ಬೆಲ್ಲ, ಸಕ್ಕರಿ, ಕಾಕಂಬಿಗಳನ್ನಂತೂ ತಿನ್ನಲೇ ಕೂಡದು. ಇವಲ್ಲದೆ ಅಕ್ಕಿ, ಬಟಾಟಿ, ಗೆಣಸು, ಕಡ್ಲಿಬೇಳೆ ಮೊದಲಾದ ಪಿಷ್ಟಮಯ ಪದಾರ್ಥಗಳನ್ನೂ ಬಿಡಬೇಕು. ತುಪ್ಪ, ಎಣ್ಣಿ ಮೊದಲಾದ ಸ್ನಿಗ್ಧ ಪದಾರ್ಥಗಳೂ ವರ್ಜ್ಯ. ಮೂತ್ರದಲ್ಲಿ ಸಕ್ಕರೆ ಪ್ರಮಾಣ ಹೆಚ್ಚಿಗೆ ಇದ್ದಾಗ ೧೦೦ಕ್ಕೆ ೩ರಕ್ಕಿಂತ ಹೆಚ್ಚಿಗೆ ಸಕ್ಕರಿ ಪ್ರಮಾಣದ ಪದಾರ್ಥ, ಅಂದರೆ ಉತ್ತಮ ಮಾವಿನ ಹಣ್ಣು, ದ್ರಾಕ್ಷಿ, ಜೇನಿನಂತಹ ಪದಾರ್ಥಗಳನ್ನು ಬಿಟ್ಟುಬಿಡಬೇಕು. ಇವರು ವಿಕಾರ ತೀವ್ರವಾಗಿದ್ದಾಗ ಬರೀ ಕೆನೆ ತೆಗೆದ ಹಾಲಿನ ಮೇಲಿರಬೇಕು. ನೀರು ಕುಡಿಯಲಿಕ್ಕೆ ಅಡ್ಡೀ ಇಲ್ಲಾ. ಬೇನೆ ಹಿಡಿತಕ್ಕೆ ಬಂದ ಮೇಲೆ ಜವೆಗೋದಿ, ಸಾವಕ್ಕೀ ಪದಾರ್ಥಗಳನ್ನು ತಿನ್ನಬಹುದು. ಮೊಸರು, ಮಜ್ಜಿಗೆ, ಸವತೀಕಾಯಿ, ಮೂಲಂಗಿ, ಕಿತ್ತಳೆ, ನೀರಲಹಣ್ಣುಗಳನ್ನು ತಿನ್ನಬೇಕು. ಪಚನಶಕ್ತಿ ಬೆಳೆದ ಮೇಲೆ ಬದಾಮಿ, ಪಿಸ್ತೆ, ಅಕ್ರೋಡ, ಬಟಗಡ್ಲಿ ಮೊದಲಾದವುಗಳನ್ನು ತಿಂದರೆ ಶಕ್ತಿ ಬರುತ್ತದೆ. ಮಾಂಸ ತಿನ್ನುವವರು ಮಾಂಸ ರಸ, ಯಕೃತ್ತಿನ ರಸ ಮತ್ತೂ ಕೋಳೀ ತತ್ತಿಗಳನ್ನು ತಿನ್ನಬಹುದು. ಕೆಲವರು ಸಕ್ಕರಿಗೆ ಬದಲಾಗಿ

"ಸ್ಯಾಕ್ರಿನ್" ಉಪಯೋಗಿಸುವದುಂಟು. ಆದರೆ ಅದೂ ಪರಿಣಾಮದಲ್ಲಿ ಸುಖಕರವಾದುದಲ್ಲವೆಂದು ಕೆಲ ತಜ್ಞರ ಅಭಿಪ್ರಾಯವಿದೆ. ಸಕ್ಕರೀ ಪ್ರಮಾಣ ಕಡಿಮೆಯಾದ ಮೇಲೆ ಗೋದಿ, ಸೋಯಾಬಿನ್, ಹೆಸರು, ಜೋಳಗಳಿಂದ ಮಾಡಿದ ಪದಾರ್ಥಗಳನ್ನು ಅವಶ್ಯವಾಗಿ ತಿನ್ನಬೇಕು ಮತ್ತು ಮೋಸಂಬಿ, ದ್ರಾಕ್ಷಿ, ಬಾಳಿ ಮೊದಲಾದ ಹಣ್ಣುಗಳನ್ನು ತಕ್ಕೊಳ್ಳಬಹುದು. ಹಾಗು ಆಕಳ ಹಾಲು, ತುಪ್ಪಗಳ ಆತಂಕವಿಲ್ಲ.

—o—

# ಆಯುರ್ವೇದ ಮಹಿಮಾ

ಸುನೋ ಸುನೋ ಅಬ ಆಯುರ್ವೈದ್ಯಕ ಮಹತೀ ಹಮ್ ಗಾತೇ ಹೈ
ಭಾರತವಾಸೀ ಪುರಾಣಕಾಲಸೇ ಆರೋಗ್ಯ ಇಸಸೇ ಪಾತೇ ಹೈ ||೧||
ಆರೋಗ್ಯವರ್ಧಿನೀ ಗುಟಿಕಾ ಐಸೀ ಸರ್ವರೋಗನಾಶಕ ಹೈ
ಸರ್ವರೋಗಹರ ಏಕಹೀದವಾ ದುನಿಯಾಮೇ ನಹೀ ಮಿಲತೀ ಹೈ ||೨||
ಇಚ್ಛಾಭೇದೀ ನಾಮಮಾತ್ರಸೇ ಮಲಭೇದನ ಕರತೀ ಹೈ
ಸಮ್ಹಾಲಭಾಯೀ ಪತಲೂನ ತುಮ್ಹಾರೀ ಪೀಲೀ ಪೀಲೀ ಕರತೀ ಹೈ ||೩||
ಚಂದ್ರಪ್ರಭಾಸೇ ಸ್ತ್ರೀರೋಗ ಸಬ ತುರಂತ ಮಿಟ ಜಾತೇ ಹೈ
ಪ್ರದರಾರೀಸೇ ಪ್ರದರರೋಗ ಸಬ ತುರಂತ ಹಟಜಾತೇ ಹೈ ||೪||
ಜಾತಿಫಲಾದೀ ಅತೀಸಾರಮೇ ಕಾರ್ಯ ಸುಹಾವನ ಕರತೀ ಹೈ
ಕರ್ಪೂರರಸಭೀ ಇಸೀ ತರಹಕಾ ಸ್ತಂಭನ ಕಾರ್ಯ ಕರತೀ ಹೈ ||೫||
ಅಗ್ನಿತುಂಡಿಸೇ ಕೋಷ್ಟಶೂಲ ಸಬ ಪ್ರನಷ್ಟ ಹೋ ಜಾತೇ ಹೈ
ಅಂತ್ರಪುಚ್ಛಕಾ ಶೋಥ ಇಸೀಸೇ ಸಮೂಲ ನಷ್ಟ ಹೋತಾ ಹೈ ||೬||
ಪ್ರವಾಳ ಶಂಖ ಶೌಕ್ತಿಕ ಮೌಕ್ತಿಕ ಕಪರ್ದೀಕ ಪಂಚಕ ಹೈ
ಪಂಚಾಮೃತ ಯಹ ಸರ್ವರೋಗಹರ ಅಮೃತ ಜೈಸಾ ತಾರಕ ಹೈ ||೭||
ಮೌಕ್ತಿಕ ಜೈಸಾ ಸುಧಾಕಲ್ಪಭೀ ದುನಿಯಾಮೇ ನಹೀ ಮಿಲತಾ ಹೈ
ಹೃದ್ಯ ಬಲ್ಯ ಶೀತವೀರ್ಯ ಸೇಂದ್ರಿಯ ಕ್ಷಯನಾಶಕಭೀ ಹೋತಾ ಹೈ ||೮||

ನಾಗಭಸ್ಮಕೀ ಮಹತೀ ದೇಖೋ ಹಾಥೀ ಸಮಬಲ ದೇತಾ ಹೈ
ಮಧುಮೇಹ ರೋಗಕೋ ಹಟಾ ಹಟಾಕರ ಕಾರ್ಬಂಕಲ್ ಬುಜಾತಾ ಹೈ ॥೯॥

ವಂಗಭಸ್ಮಸೇ ಸ್ವಪ್ನದೋಷಕಹೀ ಸುತಂಗ ಬನಜಾತಾ ಹೈ
ಸೇವನ ಉಸಕಾ ದರ್ಪ ಸ್ತ್ರಿಯೋಂಕಾ ತುರಂತ ಭಂಗ ಕರತಾ ಹೈ ॥೧೦॥

ತಾಮ್ರಲೋಹಕಾ ಭಸ್ಮ ಬನಾನಾ ಭಾರತಕೀ ಕ್ಲೃಪ್ತೀ ಹೈ
ಭಾರತ ನೇಹೀ ಧಾತೂಕಾ ಉಪಯೋಗ ಜಗತಕೋ ಸಿಖಾಯಾ ಹೈ ॥೧೧॥

ಸುವರ್ಣಕಲ್ಪಸೇ ಅಸಾಧ್ಯ ರೋಗ ಹಮ ಸುಸಾಧ್ಯಕರ ದೇತೇ ಹೈ
ಸುವರ್ಣಭಸ್ಮ ಲೋಕನಾಥ ವಸಂತಭೀ ಯಹೀ ತುಮ್ಹೇ ದಿಖಾತೇ ಹೈ ॥೧೨॥

ವಾತರೋಗಮೇ ಗುಗ್ಗುಲು ಜೈಸಾ ದ್ರವ್ಯ ನಹೀ ಮಿಲತಾ ಹೈ
ಮಹಾಯೋಗಿರಾಜ ಗೋಕ್ಷುರಾದಿ ಯಹೀ ತುಮ್ಹೇ ಬತಾತಾ ಹೈ ॥೧೩॥

ಸುವರ್ಣಯುಕ್ತ ಸೂತಶೇಖರ ಪಿತ್ತಶಾಮಕ ಹೋತಾ ಹೈ
ಪಿತ್ತಶಾಮಕ ದ್ರವ್ಯ ಐಸಾ ದುನಿಯಾಮೇ ನಹೀ ಮಿಲತಾ ಹೈ ॥೧೪॥

ಸ್ವರ್ಣರಾಜಸೇ ಶರೀರಕಾಂತಿ ಸ್ವರ್ಣಸಮ ಬಢತೀ ಹೈ
ಶುಕ್ರದೋಷ ಸಬ ಪರಮಾಗರಮೀ ಆಸಾನೀಸೇ ಮಿಟತೀ ಹೈ ॥೧೫॥

ಮಕರಧ್ವಜ ತೋ ಆಯುರ್ವೈದ್ಯಕ ಸಾರ್ವಭೌಮಪದ ಪಾತಾ ಹೈ
ವಿಜ್ಞಾನಶ್ರೇಷ್ಠ ಜರ್ಮನೀ ಉಸೀಕೋ ಗೌರವಸೇ ಅಪನಾತಾ ಹೈ ॥೧೬॥

ಅಭ್ರಕಭಸ್ಮಕೀ ಗರಿಮಾ ದೇಖೋ ಕ್ಷಯರೋಗ ನಾಶಕ ಹೋತಾ ಹೈ
ರೋಗಶತ್ರುಸೇ ಸಂಗ್ರಾಮ ಲಢಕರ ಮೃತ್ಯುಕೋ ಭಗಾತಾ ಹೈ ॥೧೭॥

ಜಡಿಬೂಟಿಕಾ ಋಷಿ ಮುನಿಯೋಂಸೆ ಉಪಯೋಗ ಗರಿಬಕೋ ಹೋತಾ ಹೈ
ವಿನಾ ಮೂಲ್ಯಮೇ ಘರಘರಮೇ ತೋ ಆಯುರ್ವೇದ ಜಾತಾ ಹೈ ॥೧೮॥

ಜಾಗ ಉಠೋ ಭಾರತವಾಸೀ ಸ್ವಾತಂತ್ರ್ಯ ಸೂರ್ಯ ಅಭಿ ಆಯಾ ಹೈ
ಸುಖ ಶಾಂತೀಕಾ ಸಂದೇಶ ಜಗತಕೋ ಹಮಕೋಹೀ ದೇನಾ ಹೈ ॥೧೯॥

ಧನ್ಯ ಧನ್ಯ ಆಯುರ್ವೇದ ಜಗತಮೆ ಸುಖಶಾಂತಿ ದೇತಾ ಹೈ
ಭಾರತಕೀ ಸಂತಾನ ಉಸೇಹಮ ಧನ್ಯವಾದ ಫಿರ ದೇತೇ ಹೈ ॥೨೦॥

—ಗ್ರಂಥಕರ್ತಾ.

